ಮಿಂಚಿನ ಬಳ್ಳಿಯ

೧೫ ನೆಯ ವರುಷದ ೪ ನೆಯ ಕುಡಿಯು

# ಭಾರತದ
# ಪಂಚವಾರ್ಷಿಕ ಯೋಜನೆ



ಬರೆದವರು:

ನೆಗಳೂರ ರಂಗನಾಥ, ಎಂ. ಎ., ಎಲ್, ಎಲ್. ಬಿ.
ಧಾರವಾಡ



೧೯೫೩ ಅಗಸ್ಟ ೧೫

ಮಿಂಚಿನ ಬಳ್ಳಿ ಕಾರ್ಯಾಲಯ,
ಧಾರವಾಡ.

ಉತ್ತಮ ಪ್ರತಿ ೩-೮-೦

ಸಾದಾ ಪ್ರತಿ ೨-೦-೦

# ಓದುಗರಲ್ಲಿ ಅರಿಕೆ



ಸ್ವಾತಂತ್ರ್ಯದಿನೋತ್ಸವದ ದಿವಸ '**ಭಾರತದ ಪಂಚವಾರ್ಷಿಕ ಯೋಜನೆ**' ಯು ಪ್ರಕಟವಾಗುತ್ತಿರುವದು ಸಂತೋಷದ ಸಂಗತಿ. ಭಾರತ ರಾಷ್ಟ್ರವು ತನ್ನ ಈ ಐದು ವರ್ಷಗಳ ಅಲ್ಪಾವಧಿಯಲ್ಲಿ ತನ್ನ ಸ್ವಾತಂತ್ರ್ಯ ರಕ್ಷಣೆಯ ಕಾರ್ಯ ಕೈಕೊಂಡು ಆಡಳಿತೆಯಲ್ಲಿ ಏಕ ಸೂತ್ರತೆಯನ್ನುಂಟು ಮಾಡಿ, ಭದ್ರವಾದ ಸರಕಾರವನ್ನು ನಿರ್ಮಿಸಿ, ತನ್ನದೇ ಆದ ವಿಶಿಷ್ಟ ವಿದೇಶೀ ನೀತಿಯಿಂದ ಜಗತ್ತಿನ ರಾಜಕಾರಣದಲ್ಲಿ ಭಾರತಕ್ಕೆ ಮಹತ್ವದ ಸ್ಥಾನವನ್ನು ಸಂಪಾದಿಸಿ, ರಾಷ್ಟ್ರದ ಜಟಿಲವಾದ ಸಮಸ್ಯೆಗಳನ್ನು ಬಿಡಿಸುತ್ತ, ತನ್ನ ಕಾಲು ಗಳನ್ನು ಗಟ್ಟಿಮುಟ್ಟಿಯಾಗಿ ಊರುತ್ತ, ಮುನ್ನಡೆದಮಾತು, ಜಗತ್ತಿಗೆ ಆಶ್ಚರಿಯವಾಗಿದೆ.

ರಾಷ್ಟ್ರದ ಸ್ವಾತಂತ್ರ್ಯ ರಕ್ಷಣೆಯ ನಂತರ ರಾಷ್ಟ್ರದ ಸರ್ವತೋಮುಖ ವಾದ ಬೆಳವಣಿಗೆಯೇ ಅದರ ಎರಡನೆಯ ಹೆಜ್ಜೆ. ಈ ದೃಷ್ಟಿಯಿಂದ ರಾಷ್ಟ್ರದ ಆರ್ಥಿಕ ಹಾಗೂ ಸಾಮಾಜಿಕ ಬೆಳವಣಿಗೆಗೆ ಇಂದು ಅದು ಕೈಹಾಕಿದೆ. ರಾಷ್ಟ್ರದ ಜೀವನವು ಸರ್ವಾಂಗ ಸುಂದರವಾಗುವಂತೆ ಪ್ರಯತ್ನಿಸುತ್ತಲಿದೆ. ಈ ಪ್ರಯತ್ನವೇ ಪಂಚವಾರ್ಷಿಕ ಯೋಜನೆಯು. ಈ ಯೋಜನೆಯೇ ನಮ್ಮ ಭವಿತವ್ಯವನ್ನು ನಿರ್ಣಯಿಸತಕ್ಕದ್ದಿದೆ. ಈ ದೃಷ್ಟಿಯಿಂದ ಈ ಯೋಜನೆ ಯನ್ನು ಪ್ರತಿಯೊಬ್ಬರು ತಿಳಿದು, ಅದನ್ನು ಯಶಸ್ವಿಗೊಳಿಸಲು ಯತ್ನಿಸ ಬೇಕಾಗಿದೆ. ಈ ಇಚ್ಛೆಯೇ ಈ ಯೋಜನೆಯ ಪ್ರಕಟನೆಗೆ ಮುಖ್ಯ ಕಾರ ಣವು. ಕನ್ನಡಿಗರು ಇದರ ಸದುಪಯೋಗವನ್ನು ಮಾಡಿಕೊಳ್ಳುವರೆಂದು ಆಶಿಸುತ್ತೇನೆ.

ಈ ಪುಸ್ತಕವನ್ನು ಬರೆದವರು ಶ್ರೀ. ನೆಗಳೂರ ರಂಗನಾಥರಾಯರು. ಅವರ ಬರವಣಿಗೆಯ ಬಗೆಗೆ ಹೇಳಬೇಕಾಗಿಲ್ಲ. ರಾಷ್ಟ್ರದ ಯೋಜನೆಗಳಿಂದ ರೇನು ? ರಾಷ್ಟ್ರಜೀವನದಲ್ಲಿ ಈ ಯೋಜನೆಗಳ ಅವಶ್ಯಕತೆಯೇನು ? ಎಂಬು

ದನ್ನು ಹೇಳಿ, ಸರ್ಕಾರವು ಕೈಕೊಂಡ ಈ ಯೋಜನೆಯ ವಿರಾಟ ಸ್ವರೂಪ ವನ್ನು ಕೊಡಲಾಗಿದೆ. ಕೊನೆಗೆ ಇದರ ಆಗು ಹೋಗುಗಳ ಬಗ್ಗೆ ವಿಚಾರ ಮಾಡಲಾಗಿದೆ. ಶ್ರೀ ನೆಗಳೂರವರು ಈ ಗ್ರಂಥವನ್ನು ಬರೆದು ಕೊಟ್ಟದ್ದ ಕ್ಕಾಗಿ ಬಳ್ಳಿಯು ಅವರಿಗೆ ಋಣಿ.

ಈ ಕುಡಿಯನ್ನು ವಾಚಕರಿಗೆ ಅರ್ಪಿಸಿದರೆ ನಾವು ೧೫ನೇ ವರ್ಷವನ್ನು ಮುಗಿಸಿದಂತಾಯಿತು. ಮುಂದಿನ ವಿಜಯದಶಮಿಗೆ ಬಳ್ಳಿಯು ಹೊಸವರ್ಷದ ಹೊಸಕುಡಿಯು ಹೊರಬೀಳುವದು. ಪ್ರತಿವರ್ಷದಂತೆ ಚಂದಾದಾರರಿಗೆ ವ್ಹಿ. ಪಿ. ಮಾಡಲಾಗುವದು. ಎಲ್ಲರೂ ಸ್ವೀಕರಿಸಬೇಕೆಂದು ಬಿನ್ನವಿಸುವೆ. ಬಳ್ಳಿಗೆ ಈ ವರ್ಷ ಒಂದು ಸಾವಿರ ರೂಪಾಯಿಗಳ ನಷ್ಟ. ಉದಾರ ಹೃದಯಿ- ಗಳಾದ ಕನ್ನಡಿಗರು ಹೆಚ್ಚು ಆಶ್ರಯವನ್ನು ಕೊಟ್ಟು ಬಳ್ಳಿಯ ಬೆಳವಣಿಗೆಗೆ ನೆರವನ್ನು ನೀಡಬೇಕೆಂದು ಬಿನ್ನವಿಸುತ್ತೇನೆ.

| ದಿನಾಂಕ | ತಮ್ಮ ಸೇವಕ |
| --- | --- |
| ೧೫–೮–೫೩ | ಬುರ್ಲಿ ಬಿಂದುಮಾಧವ |

# ಬರೆದವನ ನಿವೇದನೆ



ನಾನೊಬ್ಬ ಸಾಮಾನ್ಯ ಅಭ್ಯಾಸಿ. ದೇಶದ ಐತಿಹಾಸಿಕ, ಸಾಂಸ್ಕೃತಿಕ, ಸಾಮಾಜಿಕ, ಆಗುಹೋಗುಗಳನ್ನು ಭವಿಷ್ಯತ್ ಜೀವನದ ದೃಷ್ಟಿಯಿಂದ ವಿಚಾರಿಸಿ ನೋಡುವವನು. ಇಂದಿನ ಯುಗದಲ್ಲಿ ಯಾವುದೊಂದು ಕ್ಷೇತ್ರ ದಲ್ಲಿ—ಅದು ರಾಜಕೀಯವಾಗಿರಲಿ, ಸಾಮಾಜಿಕವಾಗಿರಲಿ, ಇಲ್ಲವೆ ಸಾಂಸ್ಕೃತಿಕ ವಾಗಿರಲಿ,—ಉಂಟಾಗುವ ಪ್ರಕ್ರಿಯೆ—ಪ್ರತಿಕ್ರಿಯೆಗಳು ದೇಶದ ಆರ್ಥಿಕ ಸ್ಥಿತಿಗತಿ ವ್ಯವಸ್ಥೆಯನ್ನು ಅವಲಂಬಿಸಿವೆಯಾದ್ದರಿಂದ ಆರ್ಥಿಕ ರಂಗದಲ್ಲಿಯ ಸ್ಥಿತ್ಯಂತರಗಳನ್ನು ಕೂಲಂಕಷವಾಗಿ ಬಿಡಿಬಿಡಿಸಿ ನೋಡುವುದು ಅಗತ್ಯ ವಾಗಿದೆ.

ಇಲ್ಲಿ ಬರುವ ವಿಷಯಗಳು ವಿಚಾರಗಳು, ಶಾಸ್ತ್ರೀಯ ಜಟಿಲತೆಯುಳ್ಳ ವಾಗಿದ್ದರೂ ಅವುಗಳನ್ನು ಸಾಮಾನ್ಯಮಾನವನು ಯಾವ ದೃಷ್ಟಿಯಿಂದ ಅರಿಯಬೇಕೆಂಬುದನ್ನು ಸೂಚಿಸುವುದೇ ಉದ್ದೇಶವಾಗಿದೆ. ಮೊದಲನೆಯ ಮತ್ತು ಕೊನೆಯ ಪ್ರಕರಣಗಳು ಸ್ವತಂತ್ರವಾಗಿದ್ದು ಉಳಿದ ಪ್ರಕರಣಗಳು ಭಾರತ ಸರಕಾರದವರು ಪ್ರಕಟಿಸಿದ ಪಂಚವಾರ್ಷಿಕ ಯೋಜನೆಯ ಪುಸ್ತಕ ವನ್ನವಲಂಬಿಸಿವೆ.

ಭಾರತದ ಭವಿಷ್ಯದ ಚಿತ್ರವನ್ನು ತೋರಿ ನಾಳಿನ ಪೀಳಿಗೆಯ ಜನಕ್ಕೆ ಸುಖ, ಸಮೃದ್ಧಿ, ಸಮಾಧಾನದ ಜೀವನವು ಬರಲಿದೆಯೆಂದು ಸಾರುವ ಮತ್ತು ಅದಕ್ಕೆ ಬುನಾದಿಹಾಕುವ ಈ ಪ್ರಥಮ ಪಂಚವಾರ್ಷಿಕ ಯೋಜ ನೆಯ ವಿಚಾರವಾಗಿ ಬರೆಯಲು ಅವಕಾಶ ಕೊಟ್ಟು ದೇಶಸೇವೆಯನ್ನು ಈ ಬಗೆಯಾಗಿ ಮಾಡಿಸಿದ ಶ್ರೇಯಸ್ಸು, ಮಿಂಚಿನ ಬಳ್ಳಿಯ ಸಂಪಾದಕರಾದ ಶ್ರೀ ಬುರ್ಲಿ ಬಿಂದುಮಾಧವರದು. ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಶಾಂತಿರಂಗ, ಸಾಧನಕೇರಿ
ಧಾರವಾಡ : ೧೫-೮-೧೯೫೩

ನೆಗಳೂರ ರಂಗನಾಥ

# ಪರಿವಿಡಿ



ಗುರಿ - ದಾರಿಗಳಲ್ಲಿ ಏಕ ಜೀವವುಂಟಾಗುವಂತೆ

ನನ್ನ

ಜೀವನ ಯೋಜನೆಯಲ್ಲಿ

ಬೆಳಕುತೋರಿದ

ಗುರುವರ್ಯ

## ಶ್ರೀ. ವಾ. ರಾ. ಮುಧೋಳಕರ

ಅವರಿಗೆ ಇದು ಮುಡಿಪು.

—ನೆಗಳೂರ ರಂಗನಾಥ

# ಭಾರತದ
# ಪಂಚವಾರ್ಷಿಕ ಯೋಜನೆ

**ಪ್ರಕರಣ ಒಂದು:**

## ಯೋಜನೆ



ಮಾನವನ ಚಟುವಟಿಕೆಗಳ ಕಾಲಖಂಡಗಳನ್ನು ತಿಳಿಯಲು ಅನು-ಕೂಲಕ್ಕಾಗಿ ಅವುಗಳನ್ನು ಒಂದೊಂದು ಯುಗಗಳೆಂದು ಗುರುತಿಸಿ ಹೇಳುವ ವಾಡಿಕೆಯುಂಟು. ಶಿಲಾಯುಗ, ತಾಮ್ರಯುಗ, ಕಬ್ಬಿಣ ಯುಗ, ಉಕ್ಕಿನ ಯುಗ, ವಿದ್ಯುತ್ಯುಗವೆಂದು ಸಾಧನ ಸಾಮಗ್ರಿಗಳ ವಿಕಾಸಗಳ ಮೇಲಿಂದ ಕರೆಯಲಾಗಿದೆ. ಭಾರತದ ಪರಂಪರೆಗನುಸಾರವಾಗಿ ತ್ರೇತಾ, ಕೃತ, ದ್ವಾಪರ, ಕಲಿಯುಗಗಳೆಂದು ವಿಭಾಗಿತವಾಗಿದೆ. ರಾಜಕೀಯ ಆತಳಿತ ದಲ್ಲಿಯ ಕಾಲಖಂಡಗಳನ್ನು ಗುರುತಿಸಲು ರಾಜಸತ್ತಿಯ ಯುಗ, ಶಿಷ್ಟ-ಸತ್ತಿಯ ಯುಗ, ಪ್ರಜಾಸತ್ತಿಯ ಯುಗವೆಂದು ಕರೆಯಲಾಗಿದೆ. ಯಾವ ಯಾವ ಕಾಲದಲ್ಲಿ ಯಾವ ಯಾವ ವಿಶಿಷ್ಟ ಗುಣಧರ್ಮಗಳು ಎದ್ದು ಕಾಣು ವುವೊ ಅವುಗಳ ಹೆಸರಿನಿಂದ ಆದೊಂದು ಯುಗವೆಂದು ಕರೆಯಲಾಗುತ್ತಿದೆ. ಭಾರತದಲ್ಲಿಯ ಕಳೆದ ೩೦-೩೫ ವರುಷಗಳ ಕಾಲವಲ್ಲಿ ಪ್ರತಿಯೊಂದು ಚಟುವಟಿಕೆಯಲ್ಲಿ ಆಂದೋಲನವಲ್ಲಿ ಮಹಾತ್ಮಾ ಗಾಂಧೀಜಿಯವರ ಕೈವಾಡ ಮಾರ್ಗದರ್ಶನ-ಪ್ರಭಾವಗಳು ಇದ್ದುದರಿಂದ ಅದು ಗಾಂಧೀಯುಗವೆಂದು ಕರೆಯಲ್ಪಟ್ಟಿತು. ಹೀಗೆ ಹೆಸರಿಸುವುದರಿಂದ ಆ ಕಾಲಖಂಡದ ಒಗ್ಗೆ ಸ್ಥೂಲವಾಗಿ ಕಲ್ಪನೆ ಉಂಟಾಗುವುದು. ವ್ಯಕ್ತಿ, ಶಕ್ತಿ, ಸಾಧನಗಳ

ಯುಗಗಳಂತೆ ವಿಚಾರಪ್ರಣಾಲಿಗಳ ಯುಗಗಳೂ ಆಗಿವೆ. ನೋಡುವವರ ದೃಷ್ಟಿ, ಲಕ್ಷಿಸಿದ ಕ್ಷೇತ್ರ ಮತ್ತು ಪ್ರಭಾವ ಬೀರಿದ ವಿಚಾರಪ್ರಣಾಲಿಗಳ ಮೇಲಿಂದ ಅದೊಂದು ಯುಗವಾಗಿ ಒಂದು ಹೆಸರು ಪಡೆಯುವುದು.

ಇಪ್ಪತ್ತನೆಯ ಶತಮಾನದ ಈ ಪೂರ್ವಾರ್ಧದಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಯೋಜನೆಯು ಯುಗಪ್ರವರ್ತಕ ಶಕ್ತಿಸಾಮರ್ಥ್ಯಗಳನ್ನು ತಳೆದಿದೆಯಾದ್ದ-ರಿಂದ ಇಂದಿನದು ಯೋಜನೆಗಳ ಯುಗವೆಂದು ಹೇಳಬಹುದು. ಆರ್ಥಿಕ ಕ್ಷೇತ್ರದಲ್ಲಿ ಅವತಾರ ತಾಳಿದ ಯೋಜನೆಯು ಇಂದು ಸರ್ವವ್ಯಾಪಿಯಾಗಿ ಎಲ್ಲ ಕ್ಷೇತ್ರಗಳನ್ನೂ ಆವರಿಸಿಕೊಂಡಿದೆ. ಇದಕ್ಕೆ ಯೋಜನೆಯ ಬೆನ್ನೆಲು-ಬಾಗಿದ್ದ ವಿಚಾರಪ್ರಣಾಲಿಯು ಪ್ರಭಾವೀ ಕಾರಣವಾಗಿರಬಹುದು; ಇಲ್ಲವೆ ಆರ್ಥಿಕ ಕ್ಷೇತ್ರವು ಇಂದು ಉಳಿದ ಕ್ಷೇತ್ರಗಳನ್ನೆಲ್ಲ ತನ್ನ ತೋಳತೆಕ್ಕೆಯಲ್ಲಿ ತೆಗೆದುಕೊಂಡು ಅವುಗಳನ್ನು ಪರಾವಲಂಬಿಯಾಗಿ ಮಾಡಿದೆಯೆಂಬುದು ಕಾರಣವಾಗಿರಬಹುದು. ಏನೆ ಆದರೂ ಇಂದು ಯೋಜನೆಯಿಲ್ಲದ ದೇಶವಿಲ್ಲ; ಯೋಜನೆಯಿಲ್ಲದ ಕ್ಷೇತ್ರವಿಲ್ಲ; ಯೋಜನೆಯಿಲ್ಲದ ಮಾನವ ಚಟುವಟಿಕೆ-ಗಳಿಲ್ಲ. ಎಲ್ಲಿ ನೋಡಿದಲ್ಲಿ ಯೋಜನೆಯ ಅಸ್ತಿತ್ವವು, ಪ್ರಭಾವವು ಕಂಡು ಬರುವುದರಿಂದಲೆ ಇಂದಿನ ಕಾಲಖಂಡವನ್ನು ಯೋಜನೆಯ ಯುಗವೆಂದು ಕರೆಯಲಾಗುತ್ತಿದೆ.

ಯೋಜನೆಯೆಂಬ ಶಬ್ದವು ತನ್ನ ಗುಣಗೌರವಗಳನ್ನು ಪ್ರಥಮ ದರ್ಶನದಲ್ಲಿಯೆ ಪ್ರಕಟಿಸಮಾಡುವ ಯೋಗ್ಯತೆಯುಳ್ಳದ್ದಾಗಿರುವುದರಿಂದ ಅದರ ವ್ಯಾಖ್ಯೆ ಕಾರಣವಿಲ್ಲ. ಆರ್ಥಿಕ ಕ್ಷೇತ್ರದಲ್ಲಿ ಯೋಜನೆ ರೂಪು ತಾಳಿದುದು ರಿಂದ ಆ ಕ್ಷೇತ್ರದಲ್ಲಿಯ ವಿವರಣೆ ಹೇಳಿದರೆ ಸಾಕು. ಯೋಜನೆಯೆಂದರೆ ಅದು ಒಂದು ಬಗೆಯ ಹೊಂದಿಕೆ: ಬೇಡಿಕೆ-ಪೂರೈಕೆಗಳ ಹೊಂದಿಕೆ; ಧ್ಯೇಯ ಧೋರಣೆಗಳ ಹೊಂದಿಕೆ; ಕನಸು ನನಸುಗಳ ಹೊಂದಿಕೆ; ತತ್ತ್ವ ಸತ್ವಗಳ ಹೊಂದಿಕೆ; ಕಾರ್ಯ-ಕರ್ತವ್ಯಗಳ ಹೊಂದಿಕೆ. ಸುತ್ತು ಸುತ್ತಾಡಿ ಹತ್ತಾರು ರೀತಿಯಲ್ಲಿ ಹೇಳಿದರೂ ಅದರ ಸ್ವರೂಪ ಬದಲಾದಂತೆ ಕಂಡರೂ ಸತ್ವವು ಮೂಲದಲ್ಲಿಯಂತೆಯೆ ಉಳಿಯುವುದು: ಅದು ಬೇಡಿಕೆ ಪೂರೈಕೆಗಳ ಹೊಂದಿಕೆ. ಅದನ್ನು ಸಾಧಿಸುವ ಬಗೆಯೆ ಯೋಜನೆ.

ಇಲ್ಲಿ ಎರಡು ಮಾರ್ಗಗಳು: ಬೇಡಿಕೆಗಳಿದ್ದಷ್ಟು ಪೂರೈಕೆ ಒದಗಿಸು-ವುದು ಒಂದು. ಎರಡನೆಯದು, ಪೂರೈಕೆಯ ಪರಿಮಿತಿಯನ್ನು ತಿಳಿದು ಬೇಡಿಕೆಗಳನ್ನು ಮಿತಿಯಾಗಿಸುವುದು. ಇವುಗಳಲ್ಲಿಯ ಯಾವುದೊಂದನ್ನು ಇಲ್ಲವೆ ಎರಡೂ ಮಾರ್ಗಗಳ ಸಮನ್ವಯ ಸಾಧಿಸಿ ಮೂರನೆಯದೊಂದನ್ನು ಮಾಡಿಕೊಳ್ಳಲು ತಾತ್ವಿಕ ಹಿನ್ನೆಲೆ ಬೇಕು; ಪರಿಸ್ಥಿತಿಯ ಪರಿಜ್ಞಾನ ಬೇಕು. ಬೇಡಿಕೆಗಳನ್ನು ಬೆಳಸಿ ಅವುಗಳನ್ನು ಪೂರೈಸಲು ಹೆಣಗುವುದು, ಪೂರೈಸ-ಲಾಗದೆ ಇದ್ದರೆ ಗೊಣಗುವುದು ಒಳ್ಳೆಯದಲ್ಲ; ಪೂರೈಕೆಯ ಶಕ್ತಿಯನ್ನು ಮೀರಿ ಬೇಡಿಕೆ ಬೆಳೆದಾಗಲೆ ಆಕ್ರಮಕ ಮನೋವೃತ್ತಿ ಬೆಳೆದು ಯುದ್ಧಗಳು ಆದ ಉದಾಹರಣೆಗಳು ಇತಿಹಾಸದಲ್ಲಿ ತುಂಬಿವೆ. ಆದುದರಿಂದ ಬೇಡಿಕೆ-ಗಳನ್ನೆ ಕಡಿಮೆ ಮಾಡಿಕೊಂಡು 'ಆತ್ಮನ್ಯೇವಾತ್ಮನಾತುಷ್ಟ'ನಾದ ಯೋಗಿಯಾಗಿ "ಸಂತುಷ್ಟಃ ಸತತಂ ಯೋಗೀ" ಎಂಬ ಆದರ್ಶವನ್ನು ಸರಲ ಸಾದಾ-ಸಾಂಪ್ರದಾಯಿಕ ಜೀವನವನ್ನು ಅಹಿಂಸಾಮಾರ್ಗದಲ್ಲಿ ಸಾಗಿಸಲು ಗಾಂಧೀಜಿ ಎತ್ತಿ ತೋರಿದರು. ಗಾಂಧೀಜಿಯ ಮಾರ್ಗದಂತೆ ಜೀವನದ ಆದರ್ಶವಿದ್ದರೆ ಆಗುವ ಯೋಜನೆಯ ರೀತಿಯು, ರೂಪವು ಬೇರೆಯೆ ಆಗುವುದು. ಮಾನವನು ಸುಖವಾಗಿ ಬಾಳಬೇಕು. ಮಾನವನು ವಿಕಾಸ ಹೊಂದುತ್ತಿರುವಂತೆ ಜೀವನವೂ ವಿಕಾಸಹೊಂದುತ್ತಲಿದೆ. ಆಧುನಿಕತೆಯು, ಔದ್ಯೋಗೀಕರಣವು ವಿಕಸಿತವಾದ ಇಂದಿನ ಜೀವನದ ಲಕ್ಷಣವು. ಆಕ್ರ-ಮಕ ವೃತ್ತಿ ಬೆಳೆಸಿಕೊಳ್ಳದಿದ್ದರೂ ಆತ್ಮಸಂರಕ್ಷಣೆಗಾಗಿಯಾದರೂ ಇತರ ಜನ-ಜನಾಂಗ ದೇಶ-ರಾಷ್ಟ್ರಗಳ ಸಮಸಮವಾಗಿ ನಿಲ್ಲಬೇಕಾದುದು ಇಂದಿನ ಯುಗಧರ್ಮವಾಗಿದೆ. ಆದ್ದರಿಂದ ಬೇಡಿಕೆಗಳಲ್ಲಿ ಆವಶ್ಯಕ ಮತ್ತು ವಿಷಾರಾಮದ ಬೇಡಿಕೆಗಳೆಂದು ವರ್ಗೀಕರಣ ಮಾಡಿ ಮೊದಲು ಆವಶ್ಯಕ ಬೇಡಿಕೆಗಳನ್ನು ಪೂರೈಸುವುದಕ್ಕೂ ನಂತರ ವಿಷಾರಾಮದ ಕಡೆಗೂ ಲಕ್ಷ್ಯ ಹಾಕುವುದು ಗಾಂಧೀಜಿಯವರ ದೃಷ್ಟಿಯಿಂದ ಬೇರೆಯಾದ ದೃಷ್ಟಿಯಾಗಿದೆ. ಮತ್ತು ಅದು ಇಂದಿನ ಯುಗದ ಪ್ರಚಲಿತ ದೃಷ್ಟಿಯಾಗಿದೆ.

ಇಲ್ಲಿಯೂ ಒಂದು ತೊಡಕು: ಯಾವುದು ಆವಶ್ಯಕ, ಯಾವುದು ವಿಷಾರಾಮ ಎಂದು ನಿರ್ಣಯಿಸುವವರು ಯಾರು? ಯಾವ ಅಳತೆಗೋಲಿ-ನಿಂದ ಅದನ್ನು ನಿರ್ಣಯಿಸುವುದು? ಪ್ರತಿಯೊಬ್ಬನು ವೈಯಕ್ತಿಕವಾಗಿ

ನಿರ್ಣಯಿಸಿಕೊಳ್ಳುವನೆ? ಸಮಾಜವು ಇಲ್ಲವೆ ಸರಕಾರವು ಸಾರ್ವಜನಿಕರ ಪರವಾಗಿ ನಿರ್ಣಯ ಕೈಕೊಳ್ಳುವುದೆ? ಸಾರ್ವಜನಿಕರ ಪರವಾಗಿ ಕೈಕೊಂಡ ಸರಕಾರದ ನಿರ್ಣಯದಿಂದ ಸಾರ್ವಜನಿಕರಿಗೆ ನಿಜವಾದ ಸುಖ-ತೃಪ್ತಿ-ಕಲ್ಯಾಣವಾಗುವುದೆ? ಇಂದಿನ ಜಟಿಲವಾದ ಜೀವನದಲ್ಲಿ ಶಾಸನಿಕವಾಗಿ ಸಾರಲ್ಪಟ್ಟ ವ್ಯಕ್ತಿಸ್ವಾತಂತ್ರ್ಯವು ವ್ಯಾವಹಾರಿಕವಾಗಿ ಸಾಧ್ಯವಾಗುವ ವಿಷಯವೆ? ಸಾಮಾಜಿಕ ಜೀವನದಲ್ಲಿ ವ್ಯಕ್ತಿಯ ಕಾರ್ಯಭಾಗವೇನು? ವ್ಯಕ್ತಿಯ ಜೀವನದಲ್ಲಿ ಸಮಾಜದ ಮತ್ತು ಸರಕಾರದ ಹೊಣೆ ಎಷ್ಟು? ಎಂಬೀ ಬಗೆಯಾಗಿ ಹುಟ್ಟುವ ಅನೇಕ ಪ್ರಾಥಮಿಕ ಮತ್ತು ಆನುಷಂಗಿಕ ಪ್ರಶ್ನೆಗಳ ಉತ್ತರಗಳನ್ನು ಪಡೆಯಲು ಯೋಜನೆಗಳು ಮಹತ್ವದ ಸಾಧನ-ಗಳಾಗಿವೆ. ಯಾವುದೊಂದು ದೇಶದ ಯಾವುದೊಂದು ಯೋಜನೆಯನ್ನು ಪರಿಶೀಲಿಸಿದರೆ ಆ ದೇಶದ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆದರ್ಶವು ತಿಳಿದುಬರುವುದು. ಭವಿಷ್ಯತ್ ಜೀವನದಲ್ಲಿ ಆ ದೇಶವು ಯಾವ ಬಗೆಯಾಗಿ ರೂಪುಗೊಳ್ಳುವುದು, ಪ್ರಪಂಚದಲ್ಲಿಯ ರಾಷ್ಟ್ರಗಳ ಜೀವನದಲ್ಲಿ ಆ ರಾಷ್ಟ್ರವು ಯಾವ ಸ್ಥಾನ ವಹಿಸುವುದು, ಅದರ ತೂಕ ಪ್ರಭಾವಗಳೇನಾಗಬಹುದು, ಎಂಬುದರ ಸ್ಪಷ್ಟ ಚಿತ್ರವು ಅಲ್ಲಿಯ ಯೋಜನೆಯ ಅಭ್ಯಾಸದಿಂದ ಕಂಡುಬರುವುದು. ಯೋಜನೆಯು ಆ ದೇಶದ ಸ್ಥಿತಿಗತಿಯನ್ನು ತಿಳಿಸುವುದು.

ಯೋಜನೆಯ ಕಲ್ಪನೆಯು ಉದಯವಾದುದಾದರೂ ಅವಕ್ಕೆಯೆ. ಸಂಪತ್‌ಸಮೃದ್ಧಿಯ ಕಾಲಕ್ಕೆ ಯೋಜನೆಯು ಉದಯವಾಗಿಲ್ಲವೆಂಬುದಕ್ಕೆ ಇತಿಹಾಸದ ಸಂಗತಿಗಳೇ ಸಾಕ್ಷಿಯಾಗಿವೆ. ಮಾನವ ಚಟುವಟಿಕೆಗಳ ಇತಿಹಾಸವು ಕಳೆದೈದು ಸಾವಿರ ವರುಷಗಳ ವರೆಗೆ ಸಪ್ರಮಾಣವಾಗಿ ಆಧಾರ ಸಹಿತವಾಗಿ ದೊರೆತಿದ್ದರೂ ಅಲ್ಲಿ ಎಲ್ಲಿಯೂ ಯೋಜನೆಗಳ ಉಲ್ಲೇಖವಿಲ್ಲ. ನೂರಾರು ಸಾಮ್ರಾಜ್ಯಗಳು ಉದಯವಾಗಿ ಅಳಿದುಹೋದರೂ ಇಂದಿನಂತಹ ಯೋಜನೆಗಳ ಆವಶ್ಯಕತೆ ಅನ್ನಿಸಲಿಲ್ಲ. ಅನೇಕ ಸಂಸ್ಕೃತಿ–ನಾಗರಿಕತೆಗಳು ತಲೆದೋರಿ ತಳಕಂಡರೂ ಎಲ್ಲಿಯೂ ಯೋಜನಾಬದ್ಧ ಸಾಮಾಜಿಕ ರಾಜ-ಕೀಯ ಆರ್ಥಿಕ ಜೀವನದ ಮಾತಿಲ್ಲ. ಇದಕ್ಕೆ ಕಾರಣವೇನಿರಬಹುದು, ಎಂದು ವಿಚಾರಿಸುವಾಗ ಆಗಿನ ಕಾಲವು ಸಮೃದ್ಧಿಯ ಕಾಲ; ಬೇಡಿಕೆಗಳ

ವ್ಯಾಪ್ತಿಯನ್ನು ಮೀರಿ ಪೂರೈಕೆಗಳ ವೈಪುಲ್ಯವಿದ್ದ ಕಾಲ, ಎಂದು ಒಂದು ರೀತಿಯ ಉತ್ತರ ಹೇಳಬಹುದು. ಮತ್ತು ಇನ್ನೊಂದು ರೀತಿಯಲ್ಲಿ ಹೇಳುವು-ದಾದರೆ, ಅಂದಿನದು ನೈಸರ್ಗಿಕವಾದ ಜೀವನವಾಗಿತ್ತು ; ದೈವದ ಮೇಲೆ ಭಾರ ಹಾಕಿದ ಜೀವನವಾಗಿತ್ತು. ರಾಜನು ಪ್ರತ್ಯಕ್ಷ ದೇವತೆಯೆಂಬ ಕಲ್ಪ-ನೆಯೂ ಗ್ಲಾನಿಯಾದಾಗ ದೇವರ ಅವತಾರವಾಗುವುದೆಂಬ ದೃಢ ನಂಬಿ-ಕೆಯೂ ಇದ್ದುದರಿಂದ ಸಾಮಾನ್ಯ ಮಾನವನ ಪ್ರಯತ್ನಕ್ಕೆ ಯಾವ ಪ್ರಾಶಸ್ತ್ಯವೂ ಇದ್ದಿರಲಿಲ್ಲವೆಂದೂ ಹೇಳಬಹುದು.

ಮೇಲೆ ವಿವರಿಸಿದ ಕಾರಣಮೀಮಾಂಸೆಗೆ ಇಂದಿನ ಹಳ್ಳಿ-ಪಟ್ಟಣಗಳು ಸಾಕ್ಷಿಯಾಗಿವೆ. ಹಳ್ಳಿಗಳ ರಚನೆಯಲ್ಲಿ, ಜೀವನ ರೀತಿಯಲ್ಲಿ ಯೋಜನೆ ಯೆಂಬ ಮಾನವ ಪ್ರಯತ್ನದ ವಿಚಾರವೇ ಕಾಣದು. ಕಟ್ಟಿದ್ದು ಮನೆ; ಬಿಟ್ಟಿದ್ದು ಬಯಲು. ಹಾಯ್ದಾಡುವುದಕ್ಕಾಗಿದ್ದುದು ಹಾದಿ. ಇಂಥಲ್ಲಿ ಹೀಗೆಯೆ ಮಾಡಬೇಕೆಂಬ ನಿರ್ಬಂಧವಿಲ್ಲ. ಒಂದು ಬಗೆಯ ವ್ಯವಸ್ಥೆಯಿದ್ದರೂ ಅಲ್ಲಿ ಯೋಜನೆಯಿಲ್ಲ. ಹಿಂದುಮುಂದಿನ ವಿಚಾರ ನಡೆಸಿ ಮಾಡಿದ ವ್ಯವಸ್ಥೆ ಯಿಲ್ಲ. ತಾನಾಗಿಯೆ ಬೆಳೆದು ಬಂದ ಒಂದು ಬಗೆಯ ನೈಸರ್ಗಿಕ ವ್ಯವಸ್ಥೆ ಅದು. ಆದರೆ ಪಟ್ಟಣದ ರಚನೆ ಹಾಗಲ್ಲ. ಅಲ್ಲಿ ಎಲ್ಲವೂ ಪೂರ್ವಾಪರ ವಿಚಾರದ ನಂತರ ಮಾಡಲ್ಪಡುವುದು. ಬೇಕಾದಲ್ಲಿ ಬೇಕಾದ ಹಾಗೆ ಮನೆಕಟ್ಟಲಾಗದು; ಬೇಕಾದಲ್ಲಿ ಬೇಕಾದಷ್ಟು ಬಯಲು ಬಿಡಲಾಗದು. ಹಾದಿಯಿದ್ದಲ್ಲಿಯೆ ಹಾಯ್ದಾಡಬೇಕು. ವ್ಯವಸ್ಥೆಯು ಅತಿರೇಕವೆನ್ನುವ ಹಾಗೆ ಎಲ್ಲವೂ ಪೂರ್ವವಿಚಾರಿತ ಯೋಜನೆಯ ಫಲವು. ಹಳ್ಳಿಯ ಜನಸಂಖ್ಯೆಯು ಸಲುವಾಗಿ ಬೇಕಾದುದಕ್ಕಿಂತ ಹಳ್ಳಿಯಲ್ಲಿ ಸ್ಥಳವೈಪುಲ್ಯವಿರುವುದರಿಂದ, ಸಾಗಾಟದ ಅನುಕೂಲತೆಯ ಬೇಡಿಕೆಯಕಿಂತ ಹಳ್ಳಿಯಲ್ಲಿ ಪೂರೈಕೆ ಹೆಚ್ಚಾ-ಗಿರುವುದರಿಂದ ಅಲಕ್ಷಿಸುವಷ್ಟು ಹೆಚ್ಚಾಗಿರುವುದರಿಂದ ಅವ್ಯವಸ್ಥೆಯೆಂದೆನ್ನಿ-ಸುವ ವ್ಯವಸ್ಥೆ ಅಲ್ಲಿ. ಪಟ್ಟಣದಲ್ಲಿ ಹಾಗಲ್ಲ. ಅಲ್ಲಿಯ ಜನಸಂಖ್ಯೆಗೆ ಸ್ಥಳ ಸಾಲದು. ಸಾಗಾಟ, ಸಾರಿಗೆ–ಸಂಪರ್ಕದ ಅನುಕೂಲತೆಯ ಬೇಡಿಕೆ ಹೆಚ್ಚು; ಪೂರೈಕೆ ಕಡಿಮೆ. ಕೊರತೆ ಎನ್ನಿಸುವಷ್ಟು ಪೂರೈಕೆ ಕಡಿಮೆ-ಯಾಗಿರುವುದರಿಂದ ಅಲ್ಲಿಯ ಅತಿರೇಕವಾದ ವ್ಯವಸ್ಥೆಯು ಯೋಜನಾಬದ್ಧ ವಾಗಬೇಕಾಗುವುದು. ಅಲ್ಲದೆ ಹಳ್ಳಿಯಂತೆ ದೈವಾನುಕೂಲತೆಯ ಮೇಲೆ

ಭಾರಹಾಕಿ ಅದಕ್ಕೆ ಹೊಂದಿಕೊಂಡು ಹೋಗಲಾರದೆ, ಮಾನವ ಪ್ರಯತ್ನ ವನ್ನು ದೈವಾನುಕೂಲತೆಗೆ ಜೋಡಿಸಿ, ದೈವಾನುಕೂಲತೆಯನ್ನು ಯೋಜನೆ-ಯನ್ವಯವಾಗಿ ಮಾನವನ ಅನುಕೂಲತೆಗಾಗಿ ಮಾರ್ಪಡಿಸುವ ಹವ್ಯಾಸ ಕಂಡುಬರುವುದು ಪಟ್ಟಣದಲ್ಲಿ. ಹಳ್ಳಿಗಳು ಹಿಂದಿನ ಕಾಲದ ಪ್ರತೀಕಗ-ಳಾಗಿದ್ದರೆ ಪಟ್ಟಣಗಳು ಇಂದಿನ ಯುಗದ ದ್ಯೋತಕಗಳಾಗಿವೆ. ಅದಕ್ಕಾಗಿಯೆ ಇಂದಿನ ಯುಗದ ಲಕ್ಷಣವಾದ ಯೋಜನೆಯು ಪಟ್ಟಣದಲ್ಲಿ ಕಂಡುಬರುವುದು. ಹಳ್ಳಿ ಪಟ್ಟಣಗಳ ಜೀವನದಲ್ಲಿಯ ಬೇಡಿಕೆ ಪೂರೈಕೆಗಳ ಸ್ಥಾನಮಾನ ಸ್ಥಿತಿ-ಗತಿಯನ್ನು ನೋಡಿದರೆ, ಬೇಡಿಕೆ ಪೂರೈಕೆಗಳ ಏರಾಟವನ್ನು ಮನದಂದು ಅವುಗಳಲ್ಲಿ ಹೊಂದಿಕೆಯುಂಟುಮಾಡಬೇಕಾದ ಪ್ರಸಂಗ ಬಂದಾಗಲೇ ಯೋಜನೆಯು ಅವತಾರವಾಗುವುದೆಂಬ ಮಾತು ಲಕ್ಷ್ಯಕ್ಕೆ ಬರುವುದು. ಪೂರೈಕೆಯಲ್ಲಿ ಕೊರತೆ ಕಂಡುಬಂದಾಗಲೇ ಯೋಜನೆಯ ಆವಶ್ಯಕತೆ-ಯುಂಟಾಗುವುದು; ಯೋಜನೆಯು ಸಮೃದ್ಧಿಕಾಲದ ಸಹಚಾರಿಯಲ್ಲ, ಆಪತ್ಕಾಲದ ಆಗಂತುಕವೆಂಬುದೂ ಸ್ಪಷ್ಟವಾಗುವುದು.

ಆಗಂತುಕನು ಆಮಂತ್ರಣ ಪಡೆದ ಅತಿಥಿಯಲ್ಲವೆಂಬುದು ಎಲ್ಲರೂ ತಿಳಿದ ಮಾತು. ಸತ್ಕಾರದ ಮಾತು ಹಾಗಿರಲಿ; ಸೌಜನ್ಯಕ್ಕನುಸರಿಸಿ ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾದ ಪ್ರಸಂಗ ತರುವನು ಆಗಂತುಕನು. ಯೋಜನೆಯ ಅವತಾರವಾದರೂ ಹಾಗೆಯೆ ಆಗಿದೆ. ಆಗಂತುಕನ ಅವತಾರ ತಾಳಿಬಂದರೂ ಆಶ್ರಯಕೊಟ್ಟವರ ಅಧಿಕಾರವನ್ನು ಕಸಿದುಕೊಂಡು ಅವರ ಮೇಲೆಯೆ ಸತ್ತಾಧಿಕಾರ ನಡಸುವ ಅಧಿಕಪ್ರಸಂಗವುಳ್ಳದ್ದಾಗಿದೆ. ಆ ಕಾರಣಕ್ಕಾಗಿ ಯೋಜನೆಯ ಅಸ್ತಿತ್ವವು ಅನಿವಾರ್ಯವಾಗಿದೆ. ಅತಿಥಿ ಯಜಮಾನನಾದ ಸಂದರ್ಭದ ನೆನಪು ತಂದುಕೊಡುವುದು ಈ ಯೋಜನೆಯ ವಿಚಾರ.

ಪ್ರಪಂಚದ ಮೊದಲನೆಯ ಮಹಾಯುದ್ಧದಲ್ಲಿ ಯೋಜನೆಯ ವಿಚಾರ ಪ್ರಣಾಲಿಯು ಜರ್ಮನಿಯಲ್ಲಿ ಅವತಾರ ತಾಳಿತೆಂದು ಅರ್ಥಶಾಸ್ತ್ರದ ಇತಿಹಾಸ ಕಾರರು ಹೇಳುತ್ತಾರೆ. ಆಗ ಅದು ಯುದ್ಧದ ಆಡಳಿತದ ತಂತ್ರವೆಂಬ ಹೆಸರಿನಲ್ಲಿ ರೂಪು ತಳೆದಿತ್ತು. ಸುತ್ತಲಿಂದಲೂ ಹತ್ತಿಕ್ಕಲ್ಪಟ್ಟಾಗ ಪರದೇಶಗಳ

ವ್ಯಾಪಾರಿಕ ವ್ಯಾವಹಾರಿಕ ಸಂಬಂಧ ಸಂಪರ್ಕ ತಪ್ಪಿದಾಗ ಸ್ವಾಧೀನ-ದಲ್ಲಿದ್ದ ಸಂಪತ್ತನ್ನು ಸದುಪಯೋಗ ಮಾಡಿಕೊಳ್ಳುವ ಪ್ರಸಂಗ ಮೈಮೇಲೆ ಬಂದಾಗ ಯೋಜನೆಯ ವಿಚಾರ ಹೊಳೆಯಿತು. ಯುದ್ಧಜನ್ಯ ಪರಿಸ್ಥಿತಿಯ ಮೂಲಕ ಪೂರೈಕೆಯ ಸಂಪತ್ ಸಾಧನಗಳು ಪರಿಮಿತವಾಗಿದ್ದುವಲ್ಲದೆ ಆವಶ್ಯಕ ಬೇಡಿಕೆಗಳ ವ್ಯಾಪ್ತಿ ಮತ್ತು ಒತ್ತಡವು ಹೆಚ್ಚಾಗುವುದರಲ್ಲಿಯೆ ಇದ್ದಿತು. ಬೇಡಿಕೆ ಪೂರೈಕೆ ಶಕ್ತಿ ಸಾಮರ್ಥ್ಯಗಳ ಅಂತರ ಹೆಚ್ಚಾಗ ಗೊಡದೆ ಎರಡೂ ಶಕ್ತಿಗಳ ತೂಕವನ್ನು ಹಿಡಿದು ರಾಜ್ಯಶಕಟವನ್ನು ಹೊಯ್ದಾಡಗೊಡದೆ ಯುದ್ಧಕಾರ್ಯವನ್ನು ಯಶಸ್ವಿಯಾಗಿ ಕಾರ್ಯಕ್ಷಮ-ವಾಗಿ ಮುನ್ನಡೆಯಿಸಬೇಕಾಗಿ ಬಂದಾಗ 'ಆಪತ್ ಬಾಂಧವ'ನ ರೂಪದಲ್ಲಿ ಒದಗಿಬಂದಿತು ಯೋಜನೆಯ ವಿಚಾರ. ಯುದ್ಧಕಾಲದ ಅನೇಕ ಅಸ್ತ್ರ-ಗಳಂತೆ ಯೋಜನೆಯ ವಿಚಾರ ಪ್ರಣಾಲಿಯಾದರೂ ಗುಟ್ಟಾಗಿಯೆ ಉಳಿಯಿತು.

ಆದರೆ ಅದೊಂದು ದಿವ್ಯಾಸ್ತ್ರವೆಂಬ ಭ್ರಮೆಯನ್ನು ಮಾತ್ರ ಹುಟ್ಟ-ಸಿತು. ಆಪತ್ಕಾಲದಲ್ಲಿ ಅದು ತನ್ನ ತಾರಕ ಶಕ್ತಿಯನ್ನೂ ತೋರಿದ್ದಿತು. ಆದರೆ ಆಪತ್ಕಾಲ ದಾಟಿದ ಮೇಲೆ, ಯುದ್ಧ ಪ್ರಸಂಗದ ಒತ್ತಡವು ಕಡಿಮೆ ಯಾದ ಮೇಲೆ ಶಾಂತಿ ಸುವ್ಯವಸ್ಥೆಯ ಕಾಲದಲ್ಲಿ ಅದರ ಉಪಯೋಗವಾಗ-ಬೇಕಾಗಿ ಬಂದಾಗ ಅದು ತನ್ನ ಮೂಲರೂಪವನ್ನು ಬದಲಿಸಿಕೊಂಡಿತು. ಯುದ್ಧಕಾಲದಲ್ಲಿ ಗಂಡಾಂತರ ಪರಿಸ್ಥಿತಿಯಿದೆಂದು ಸಾರಿದಾಗ ನಾಗರಿಕರು ಸ್ವಯಂಸ್ಫೂರ್ತಿಯಿಂದ ತಮ್ಮ ವ್ಯಕ್ತಿಸ್ವಾತಂತ್ರ್ಯವನ್ನು ರಾಜಕೀಯ ಧ್ಯೇಯ ಧೋರಣೆಗಾಗಿ ತ್ಯಾಗ ಮಾಡಿದುದರ ಲಾಭವನ್ನು, ಶಾಂತಿಕಾಲ ದಲ್ಲಿಯೂ ಪಡೆಯಬೇಕೆಂದು ರಾಜಕೀಯ ಸತ್ತಾಧಿಕಾರಿಗಳಿಗೆ ಅನ್ನಿಸಿತು. ಯುದ್ಧಕಾಲದಲ್ಲಿ ವ್ಯಕ್ತವಾಗಿದ್ದ ಮತ್ತು ಪ್ರತ್ಯಕ್ಷವಾಗಿದ್ದ ನಿಯಂತ್ರಣವನ್ನು ಶಾಂತಿಕಾಲದಲ್ಲಿ ಅವ್ಯಕ್ತವಾಗಿ ಮತ್ತು ಅಪ್ರತ್ಯಕ್ಷವಾಗಿ ಹಾಕಬೇಕೆಂದೂ ವ್ಯಕ್ತಿಗಳ ವೈಯಕ್ತಿಕ ಸ್ವಾತಂತ್ರ್ಯವನ್ನು ಮರ್ಯಾದಿತಗೊಳಿಸಿ ವ್ಯಕ್ತಿಯು ರಾಷ್ಟ್ರಜೀವನಕ್ಕೆ ಪೋಷಕವಾದ ಕಾರ್ಯದಲ್ಲಿಯೆ ತೊಡಗಬೇಕೆಂದೂ ವ್ಯಕ್ತಿಗಳ ಚಟುವಟಿಕೆಗಳು ರಾಷ್ಟ್ರಜೀವನದ ಪೋಷಣೆಯ—ಸರಕಾರದ ಸತ್ತಾಧಿಕಾರ ಸಂರಕ್ಷಣೆಯ ಅಳತೆಗೋಲಿನಿಂದಲೆ ಅಳೆಯಲ್ಪಡಬೇಕೆಂದೂ ಅಧಿಕಾರಾರೂಢವಾಗಿದ್ದ ಜನತೆಗೆ ಅನ್ನಿಸಿತು. ಮೇಲಾಗಿ, ಮೊದಲ

ಮಹಾಯುದ್ಧ ಕೊನೆಗೊಂಡಾಗ ಆದ ವರ್ಸಾಯಿ ಒಪ್ಪಂದದ ಕರಾರುಗಳಿಂದ ಆದ ಅನ್ಯಾಯದ ಭಾರದಿಂದ ಅಪ್ರತ್ಯಕ್ಷವಾಗಿ ಪಾರಾಗಬೇಕೆಂದು ಆರ್ಥಿಕ ಯೋಜನೆಯ ಹೆಸರಿನಲ್ಲಿ ಚಟುವಟಿಕೆ ನಡೆಸಿ ರಾಜ್ಯವನ್ನು ಬಲಪಡಿಸಿಕೊಳ್ಳ ಬೇಕೆಂದೂ ಅನ್ನಿಸಿತು. ದೇಶದ ಶಕ್ತಿಸಾಮರ್ಥ್ಯಗಳೇನು? ಸಂಪತ್ ಸಾಧನಗಳು ಯಾವವು? ಬೇಡಿಕೆ ಪೂರೈಕೆಗಳ ವ್ಯಾಪ್ತಿಯೆಷ್ಟು? ಅವುಗಳ ನಿಯಂತ್ರಣ-ವಿಕಾಸ ಮಾಡುವ ಹವಣು ಯಾವುದು? ವಿಕಾಸಯೋಗ್ಯ ವಾದ ಸುಪ್ತ ಸಾಧನಸಂಪತ್ತು ಎಷ್ಟಿದೆ? ದೇಶದ ಜನತೆಯ ದುಃಖ ದೌರ್ಬಲ್ಯಗಳು ಎಲ್ಲಿವೆ? ಅವುಗಳ ನಿವಾರಣೋಪಾಯ ಯಾವುದು? ಇವೆಲ್ಲವುಗಳ ವಿವರ ಪರಿಜ್ಞಾನ ಮಾಡಿಕೊಳ್ಳಲು ಆರ್ಥಿಕ ಯೋಜನೆಯು ಒಂದೇ ತಾರಕಮಂತ್ರವಾಗಿ ಪರಿಣಮಿಸಿತು. ಆರ್ಥಿಕ ಯೋಜನೆಯ ಚಿತ್ರ ಸಿದ್ಧವಾಗುವಾಗ ವ್ಯಕ್ತಿ, ಸಮಾಜ ಮತ್ತು ಸರಕಾರ ಇವರ ಸ್ಥಾನಮಾನ, ಹಕ್ಕು ಹೊಣೆಗಾರಿಕೆಗಳು, ಕಾರ್ಯ ಕರ್ತವ್ಯಗಳು ಯಾವವು, ಅವುಗಳ ಪರಿವ್ಯಾಪ್ತಿ ಎಷ್ಟು, ಎಂಬ ಬಗ್ಗೆ ತಾತ್ವಿಕವಾಗಿ ಹೊಸ ವಿಚಾರಗಳು ಮೂಡಿ ಬಂದುವು. ಈ ವಿಚಾರಗಳೇ ಇಪ್ಪತ್ತನೆಯ ಶತಕದಲ್ಲಿಯ ರಾಷ್ಟ್ರಗಳ ಉದಯಕ್ಕೆ ಕಾರಣವಾದುವು ಎಂದು ರಾಜ್ಯಶಾಸ್ತ್ರದ ಅಭ್ಯಾಸಿಗಳು ಹೇಳುತ್ತಾರೆ. ರಾಜ್ಯಗಳು ಮಾಯವಾಗಿ ರಾಷ್ಟ್ರಗಳು ರೂಪುತಾಳಿದ್ದು ಮೊದಲ ಮಹಾಯುದ್ಧದ ನಂತರವೇ ಎಂಬುದು ಇಂದು ಸ್ಪಷ್ಟವಾದ ಮಾತಾಗಿದೆ. ರಾಜ್ಯಭಾವನೆಯು ಸಾಮ್ರಾಜ್ಯವಾದಿತ್ವಕ್ಕೆ ಪೋಷಕವಾಗಿದ್ದರೆ ರಾಷ್ಟ್ರ-ಭಾವನೆಯು 'ನಮ್ಮ ದೇಶ ನಮ್ಮ ರಾಷ್ಟ್ರಿಕರಿಗಾಗಿ' ಎಂಬ ವಿಚಾರಕ್ಕೆ ಎಡೆ ಮಾಡಿಕೊಟ್ಟು ಹೊಸ ಬಗೆಯ ದ್ವೇಷಕ್ಕೆ ದಾರಿ ಮಾಡಿಕೊಟ್ಟಿತೆಂದು ಬಲ್ಲವರು ಹೇಳುತ್ತಾರೆ. ಈ ರಾಷ್ಟ್ರೀಯ ಭಾವನೆಯು ಹೊಸದಾಗಿ ಅವತಾರ ತಾಳಿದ್ದ ಆರ್ಥಿಕ ಯೋಜನೆಗೆ ತಾಯಿಬೇರಾಗಿ ಪರಿಣಮಿಸಿತೆಂಬುದು ಲಕ್ಷ್ಯ ಯೋಗ್ಯವಾಗಿದೆ.

ಜರ್ಮನಿಯಲ್ಲಿ ಜನ್ಮತಾಳಿದರೂ ಆರ್ಥಿಕ ಯೋಜನೆಯ ವಿಚಾರ ಪ್ರಣಾಲಿಯು ರಶಿಯದಲ್ಲಿ ಜಾಗ್ರತವಾಗಿ, ರೂಢವಾಗಿ, ಪ್ರಸಿದ್ಧಿಯನ್ನು ಪಡೆದಿತು. ಮೊದಲ ಮಹಾಯುದ್ಧ ಮುಗಿದ ಹೊತ್ತಿಗೆ ರಶಿಯದ ರಾಜ್ಯ ಕ್ರಾಂತಿಯಾಗಿ ಝಾರನ ರಾಜ್ಯದ ಆಡಳಿತ ಕೊನೆಗೊಂಡು ಬೋಲ್ಶೆವಿಕರ

ಆಡಳಿತವು ಲೆನಿನನ ಅಧಿಕಾರಸೂತ್ರದಲ್ಲಿ ಪ್ರಾರಂಭವಾಗಿದ್ದಿತು. ಝಾರನ ಆಡಳಿತದಲ್ಲಿ ಸಾಮಾನ್ಯ ಜನತೆಯು ಕಂಗಾಲಾಗಿದ್ದಿತು. ಅನ್ನ ಬಟ್ಟೆಗೂ ನಿರ್ಗತಿಕರಾಗಿದ್ದರು ರೈತರು. ಶೋಷಣೆಯ ಪರಮಾವಧಿ—ಸಾಮಾನ್ಯ ಜನತೆಯ ಕಲ್ಯಾಣದ ಅಲಕ್ಷ್ಯದ ಪರಮಾವಧಿ ಮುಟ್ಟಿದ್ದಿತು. ಮಹಾಯುದ್ಧವು ಒಂದು ದೃಷ್ಟಿಯಿಂದ ರಶಿಯದ ಸತ್ವವನ್ನು ಹಾಳುಮಾಡಿದ್ದರೆ ರಾಜ್ಯಕ್ರಾಂತಿಯು ಇನ್ನೊಂದು ಬಗೆಯಲ್ಲಿ ಹಾಳುಮಾಡಿದ್ದಿತು. ಅಧಿಕಾರ ಕಸಿದುಕೊಳ್ಳುವ ಹವ್ಯಾಸದಲ್ಲಿ ಸಾಧನಗಳ ಒಳಿತು–ಕೇಡುಗಳ ಗುಣದೋಷಗಳನ್ನು ಲೆಕ್ಕಿಸದೆ ಕ್ರಾಂತಿಕಾರರು ಮುಂದರಿದಿದ್ದರು. ಹೀಗಾಗಿ ರಾಜ್ಯಕ್ರಾಂತಿಯಲ್ಲಿ ಸೋತವರು ಸತ್ತು ಗೆದ್ದವರು ಸಾಯಲಾರದೆ ಉಳಿದು ಕೈಸೋತವರಾಗಿದ್ದರು. ಮೇಲಾಗಿ ಆಡಳಿತದ ಅಧಿಕಾರ–ಹೊಣೆ ಬೇರೆ ಕೈಗೆ ಬಂದಿದೆ; ರಾಜಸತ್ತೆಯು, ಶಿಷ್ಟಸತ್ತೆಯು ಮತ್ತು ಸರದಾರ–ಸಿರಿವಂತರ ಉಚ್ಚಾಟನವಾದ ಮೇಲೆ ಆಡಳಿತದಲ್ಲಿ ಎಲ್ಲಿಲ್ಲದ ಶೈಥಿಲ್ಯ ಬಂದಿತು. ಉತ್ಸಾಹವೊಂದೆ ಮಾರ್ಗದರ್ಶನ ಮಾಡುತ್ತಿದ್ದ ಕ್ರಾಂತಿಕಾರರ ಮುಂದಾಳುಗಳಿಗೆ ಆಡಳಿತದ ಅನುಭವವಿಲ್ಲ. ಹೊಸ ವಿಚಾರಗಳನುಸಾರವಾಗಿ ಸಾಮ್ಯವಾದದ ತಂತ್ರಗಳಿಗೆ ಬದ್ಧರಾಗಿ ರಾಜ್ಯದಾಡಳಿತ ನಡಸಲು ಇವರಿಗೂ ಅನುಭವವಿಲ್ಲ: ಮಾರ್ಗದರ್ಶನ ಮಾಡಬಹುದಾದ ಸಾಮ್ಯವಾದೀ ಸಾಹಿತ್ಯ ವಿಲ್ಲ. ಹೀಗೆ ದೇಶ ಜನತೆ ಮತ್ತು ಜನನಾಯಕರು ಕಂಗಾಲಾದ ಪರಿಸ್ಥಿತಿಯಿತ್ತು, ರಶಿಯದಲ್ಲಿ ರಾಜ್ಯಕ್ರಾಂತಿಯು ನಂತರ ಕ್ರಾಂತಿಕಾರರು ಅಧಿಕಾರಾರೂಢರಾದಾಗ. ಆಗ ಲೆನಿನ್ ಹೀಗೆ ಉಸುರಿದ್ದಾನೆ:

"ಬಂಡವಲುವಾದದ ಪದ್ಧತಿಯಿಂದ ಸಮಾಜವಾದ (ಸಾಮ್ಯವಾದ)ದ ಪದ್ಧತಿಗೆ ಬದಲಾಯಿಸಿ ಪುನರ್ಘಟಿಸಲು ಸಿದ್ಧವಾದ ಸಾಧನಕ್ರಮಗಳಿದ್ದಿಲ್ಲವೆಂಬುದು ನಾವು ಅಧಿಕಾರ ಕೈಗೆ ತೆಗೆದುಕೊಂಡಾಗ ನಮಗೆ ಗೊತ್ತಿದ್ದಿತು .... ಈ ಸಮಸ್ಯೆಗಳ ಪರಿಹಾರ ಸೂಚನೆಯನ್ನು ಯಾವ ಸಮಾಜವಾದಿಯೂ ಮಾಡಿದ ಹಾಗೆ ನನಗೆ ಗೊತ್ತಿಲ್ಲ."

ಲೆನಿನ್ನನ ಮನಃಸ್ಥಿತಿ ಹೀಗಿದ್ದಾಗ ಅವನಿಗೆ ಮಹಾಪ್ರಸಂಗವನ್ನೆ ಎದುರಿಸಬೇಕಾಗಿ ಬಂದಿತು. ಹದಗೆಟ್ಟ ಆರ್ಥಿಕಪರಿಸ್ಥಿತಿ ಒಂದೆಡೆ; ಕ್ರಾಂತಿಯ ಕಾಲಕ್ಕೆ ಆಸೆ ಆಮಿಷಗಳನ್ನು ನೀಡಿ ಉದ್ರೇಕಿಸಲ್ಪಟ್ಟ ಜನತೆಯು

ಸುಖ ಸಮಾಧಾನದ ಬೇಡಿಕೆಗಾಗಿ ಹಲುಬುತ್ತಿದ್ದುದು ಇನ್ನೊಂದೆಡೆ. ಬೇಡಿಕೆಗಳನ್ನು ಪೂರೈಸಲು ಸಾಧನವೂ ಇಲ್ಲ; ಸಂಪತ್ತೂ ಇಲ್ಲ. ಹೀಗಾಗಿ ಒದ್ದಾಡುತ್ತಿದ್ದಾಗ ಯೋಜನೆಯ ವಿಚಾರವು ಲೆನಿನ್ನನಿಗೆ ತಾಗಿತು; ಆಗ ಅವನು ತನ್ನ ಸಹಕಾರಿಯೊಬ್ಬನಿಗೆ ಹೀಗೆ ಬರೆದಿದ್ದಾನೆ.

"ಜನಸಾಮಾನ್ಯರು ತಿಳಿದುಕೊಳ್ಳುವಂತಹ ಯೋಜನೆ (ತಾಂತ್ರಿಕವಲ್ಲ, ಆದರೆ ರಾಜಕೀಯ ಹಂಚಿಕೆ)ಯನ್ನು ನಿರ್ಮಾಣ ಮಾಡಲಾರೆಯಾ? ಉದಾಹರಣೆಗಾಗಿ ಹತ್ತು ವರುಷಗಳಲ್ಲಿ (ಇಲ್ಲವೆ ೫ ವರುಷಗಳಲ್ಲಿ) ಇಡಿ ದೇಶವನ್ನು ವ್ಯಾಪಿಸುವ ೨೦ (೩೦ ಇಲ್ಲವೆ ೪೦) ವಿದ್ಯುದಾಗರಗಳನ್ನು ಕಟ್ಟುವುದು. ಎರಡು ಮೂರು ಮೈಲುಗಳಿಗೊಂದರಂತೆ ಅವು ಇದ್ದು ಜಾಲವಾಗಿ ಹಬ್ಬಿಕೊಂಡಿರಬೇಕು. ಸಾಮಾನ್ಯ ಜನತೆಯು ತಾನು ಏತಕ್ಕಾಗಿ ಸ್ವಾರ್ಥತ್ಯಾಗ ಮಾಡಿದೆವೆಂಬ ಬಗ್ಗೆ ಕಲ್ಪನೆಯುಂಟಾಗುವಂತಹ ನಾಳಿನ ಜೀವನದ ಮುಂಗು ತೋರಿಸುವಂತಹ ಯೋಜನೆ ನಮಗೆ ಬೇಕಾಗಿದೆ. ಹತ್ತು-ಇಪ್ಪತ್ತು ವರುಷಗಳಲ್ಲಿ ಇಡಿ ರಶಿಯವು—ಔದ್ಯೋಗಿಕ ಮತ್ತು ಕೃಷಿಕ ರಶಿಯವು ವಿದ್ಯುತೀಕರಿಸಲ್ಪಡಬೇಕು."

ಹೀಗೆ ಪ್ರಾರಂಭವಾದ ಯೋಜನೆಯು ರಶಿಯದಲ್ಲಿ ಬೇರೂರಿ ಪ್ರಪಂಚದಲ್ಲೆಲ್ಲ ಹಬ್ಬಿಕೊಂಡಿದೆ. ರಶಿಯದ ರಾಜಕೀಯ ತತ್ವವನ್ನು ಒಪ್ಪಿಕೊಳ್ಳದಿದ್ದವರೂ ಆರ್ಥಿಕ ಯೋಜನೆಯ ವಿಚಾರಪ್ರಣಾಲಿಗೆ ಮಾರುಹೋಗಿದ್ದಾರೆ. ಯೋಜನೆಗಳಿಂದ ರಶಿಯವು ಕಳೆದ ೨೫–೩೦ ವರುಷಗಳಲ್ಲಿ ಸಾಧಿಸಿದ ಕಾರ್ಯದಿಂದಲೂ ಆಶ್ಚರ್ಯಚಕಿತರಾಗಿದ್ದಾರೆ. ನಿಯಂತ್ರಿತ ಆರ್ಥಿಕಯೋಜನೆಗಳಿದ್ದರೆ ಕ್ಲಿಪ್ತಕಾಲದಲ್ಲಿ ಕೈಕೊಂಡ ಕಾರ್ಯವು ಸಾಧ್ಯವಾಗುವುದೆಂದೂ ಅಧಿಕಾರಾರೂಢವಾಗಿದ್ದ ಸರಕಾರವು ತನ್ನ ಅಧಿಕಾರ ಕಾಲಾವಧಿಯಲ್ಲಿ ಏನು ಮಾಡಿದೆಯೆಂದು ಪ್ರಶ್ನಿಸುವವರಿಗೆ ಬೊಟ್ಟುಮಾಡಿ ತೋರಿಸಲು ಕಾರ್ಯಯೋಜನೆಗಳಿಂದ ಆಗುವುದಲ್ಲದೆ ಮುಂದಿನ ಕಾಲಾವಧಿಯಲ್ಲಿ ಮತ್ತೆ ಅಧಿಕಾರ ದೊರೆತರೆ ಏನೇನು ಸಾಧಿಸಿ ತೋರಲು ಸಾಧ್ಯವಿದೆಯೆಂಬುದರ ಚಿತ್ರವನ್ನು ಕೊಡಲು ಅನುಕೂಲವಾಗುವುದೆಂದೂ ಬಗೆಯಲಾಗಿದೆ.

ಇದು ಯೋಜನೆಯ ಅಂತಃಶಕ್ತಿ ಮತ್ತು ಪ್ರದರ್ಶನಶಕ್ತಿ. ೨೦ನೆಯ

ಶತಕದಲ್ಲಿ ಪ್ರಪಂಚದ ಜನಸಂಖ್ಯೆ ಬೆಳೆದಂತೆ ಹಿಂದೆಂದೂ ಬೆಳೆದಿಲ್ಲ. ೨೦ನೆಯ ಶತಕದಲ್ಲಿ ತಲೆದೋರಿದ ರಾಷ್ಟ್ರೀಯ ಮನೋವೃತ್ತಿಯ ಭಾವನಾವೇಶ ಹಿಂದೆ ಎಂದೂ ಕಂಡುಬಂದಿಲ್ಲ. ಸಾರಿಗೆ–ಸಂಪರ್ಕ ಸಾಧನಗಳಲ್ಲಿಯ ಕ್ರಾಂತಿಯ ಮೂಲಕ ೨೦ನೆಯ ಶತಕದಲ್ಲಿ ಕಂಡಷ್ಟು ಪ್ರಪಂಚ ಹಿಂದೆ ಎಂದೂ ಸಣ್ಣದಾಗಿ ಕಂಡಿದ್ದಿಲ್ಲ. ಪ್ರಪಂಚದ ಪ್ರಗತಿಯನ್ನು ನೋಡಿದರೆ ಪರಸ್ಪರಾವಲಂಬನವು ಅನಿವಾರ್ಯವೆಂದು ಕಂಡುಬಂದರೂ ರಾಷ್ಟ್ರೀಯ ಮನೋವೃತ್ತಿಯು ಭಾವಾತಿರೇಕದ ಸ್ವಾವಲಂಬನದ ದಾರಿಯನ್ನೇ ತೋರುತ್ತಿದೆ. ಹೀಗೆ ವಿರೋಧಾಭಾಸವುಳ್ಳ ಪರಿಸ್ಥಿತಿಯು ಉಂಟಾಗಿರುವುದರಿಂದ ಯೋಜನೆಗೆ ಇನ್ನೂ ಹೆಚ್ಚಿನ ಮಹತ್ವ ಬಂದಿದೆ. ಇಂದಿನ ಜೀವನದ, ಶತಕದ ಪರಿಸ್ಥಿತಿಯಲ್ಲಿ ಯೋಜನೆಯು ಅನಿವಾರ್ಯವೆಂದು ಅನ್ನಿಸುವಂತಾಗಿದ್ದರೂ ಅರ್ಥಶಾಸ್ತ್ರ ತತ್ವಜ್ಞರಲ್ಲಿ ಕೆಲವರು ಮಾತ್ರ ಯೋಜನೆಯಿಂದ ಪಾರಿಣಾಮಿಕ ಮತ್ತು ಆತ್ಯಂತಿಕ ಸುಖ ಸಾಧಿಸೀತೆ ಎಂದು ಸಾಶಂಕವೃತ್ತಿಯವರಾಗಿದ್ದಾರೆ. ಜನತೆಯ ಕಲ್ಯಾಣ ಮಾಡುವುದು ಸರಕಾರದ ಸತ್ತೆಯ ಕರ್ತವ್ಯವೋ ಅಲ್ಲವೋ? ಕಲ್ಯಾಣ ಸಾಧಿಸುವ ಹವ್ಯಾಸವುಳ್ಳ ಸರಕಾರವು ನಿಜವಾಗಿ ಜನತೆಯ ಕಲ್ಯಾಣ ಮಾಡುವುದೆ? ಜನತೆಯ ನಿಜವಾದ ಕಲ್ಯಾಣದ ರೂಪಸ್ವರೂಪ, ಸಾಧನ-ಸಿದ್ಧಿಗಳನ್ನು ನಿರ್ಣಯಿಸುವವರು ಯಾರು? ಪ್ರಜಾಪ್ರಭುತ್ವದಲ್ಲಿ ಜನತೆಯು ಸರಕಾರ ನಡೆಸುತ್ತಿರುವುದರಿಂದ ಜನತೆ ಬೇರೆಯಲ್ಲ, ಸರಕಾರ ಬೇರೆಯಲ್ಲ ಎಂಬ ಸ್ಥಿತಿಯಿರುವಾಗ ಸರಕಾರವು ಜನತೆಯ ಆಸೆ ಆಕಾಂಕ್ಷೆಗಳನ್ನೇ ಪ್ರತಿನಿಧೀಕರಿಸುವುದಿಲ್ಲವೆ? ಪ್ರಾತಿನಿಧಿಕ ಸ್ವರೂಪದಲ್ಲಿದ್ದ ಸರಕಾರವು ರಾಜಕೀಯ ಅಧಿಕಾರವನ್ನು ಜನತೆಯಿಂದ ಪಡೆದಂತೆ ಆದರಿಂದ, ಸಾಮಾಜಿಕ, ಸಾಂಸ್ಕೃತಿಕ ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿಯ ಅಧಿಕಾರವನ್ನು ಪಡೆದಿರುವುದೆ? ರಾಜಕೀಯ ಕ್ಷೇತ್ರದಲ್ಲಿ ಪಡೆದ ಸತ್ತಾಧಿಕಾರದಿಂದ ರಾಜಕೀಯ ಗೊತ್ತುಗುರಿ ಸಾಧನೆಗಳಿಗಾಗಿ ಉಳಿದ ಕ್ಷೇತ್ರಗಳನ್ನು ಊರುಗೋಲುಗಳಾಗಿ ಬಳಸಿಕೊಳ್ಳಲಿಕ್ಕಿಲ್ಲವೆ? ಸರಕಾರ ನಡೆಸಲು ಅಧಿಕಾರ ಪಡೆದವರು ಅವನ್ನಾದರೂ ಸುಭದ್ರವಾಗಿ ನಡೆಸಿಕೊಂಡು ಹೋಗಲು ಸಮರ್ಥರಾಗಿರುವರೆ? ಒಂದುವೇಳೆ ಸರಕಾರ ನಡೆಸಲು ಸಮರ್ಥರಾಗಿರುವರೆಂದು ತಿಳಿದರೂ ಅವರು ಉಳಿದ ವ್ಯವಹಾರ, ವ್ಯಾಪಾರ, ವಾಣಿಜ್ಯ, ಮುಂತಾದ ವಿಶಿಷ್ಟ ಕೌಶಲದ

ಕ್ಷೇತ್ರಗಳಲ್ಲಿಯ ಪ್ರಗತಿಯನ್ನು ಸಾಧಿಸಲು ಸಮರ್ಥರಾಗಿರಬಹುದೇ ? ಈ ಬಗೆಯಾದ ಪ್ರಶ್ನಮಾಲಿಕೆಯನ್ನು ಎದುರಿಸುವಾಗ ಮುಖ್ಯ ಪ್ರಶ್ನೆಯೊಂದು ಬರುವುದು : ಸರಕಾರದಿಂದ ನಡೆಸಲ್ಪಟ್ಟ ಆರ್ಥಿಕ ನಿಯಂತ್ರಣ ಪದ್ಧತಿಯಿಂದ ಜನತೆ ಹೆಚ್ಚು ಸಿರಿವಂತವಾಗುವುದೆ ? ಇಲ್ಲವೆ ಹೆಚ್ಚು ಬಡವಾಗುವುದೆ ? ಅನಿಯಂತ್ರಿತ ಸಮಾಜರಚನೆಯಿಂದ, ಆರ್ಥಿಕಪದ್ಧತಿಯಿಂದ ಹೆಚ್ಚು ಸಿರಿವಂತವಾಗುವುದೆ ? ಯೋಜನೆಯುಳ್ಳ, ಆರ್ಥಿಕ ಪದ್ಧತಿಯು ಎಂತಹ ಸಮಾಜವನ್ನು ತನ್ನ ಗುರಿಯಾಗಿಟ್ಟುಕೊಂಡಿರುವುದು ?

ಯೋಜನೆಯ ನಿಯಂತ್ರಿತ ಆರ್ಥಿಕ ಪದ್ಧತಿಯು ಉದಯವಾಗಿ ತೇಜಯಾಗುವ ಮೊದಲು ಅನಿಯಂತ್ರಿತ—ನೈಸರ್ಗಿಕ ವಿಕಾಸ ಸ್ವಾತಂತ್ರ್ಯವುಳ್ಳ ಆರ್ಥಿಕ ಪದ್ಧತಿಯಿದ್ದಿತು. ಆ ಪದ್ಧತಿಯಲ್ಲಿ ವೈಯಕ್ತಿಕ (ಖಾಸಗಿ) ಸೊತ್ತಿಗೆ ಸ್ಥಾನವಿದ್ದಿತು. ಬಳಕೆಗಾರನೆ ಪೂರೈಕೆಯ ಬಗ್ಗೆ ಪ್ರಭುತ್ವವುಳ್ಳವನು; ವ್ಯಕ್ತಿ ವ್ಯಕ್ತಿಗಳ ನಡುವಿನ ವ್ಯವಹಾರವು ಅವರ ಒಲವುಗಳನ್ನು ಅವಲಂಬಿಸಿದ್ದಿತು ; ವ್ಯಕ್ತಿಗಳು ತಮ್ಮ ಒಲವಿನ ಪ್ರಕಾರ ವ್ಯವಸಾಯಗಳನ್ನು ಆಯ್ದುಕೊಳ್ಳುತ್ತಿದ್ದರು ; ಗಿರಾಕಿಯಾಗಿ ಯಾವುದೇ ವ್ಯಕ್ತಿಯನ್ನು, ರಾಷ್ಟ್ರವನ್ನು ಪಡೆಯುವ ಸ್ವಾತಂತ್ರ್ಯವಿದ್ದಿತು ; ಯಾವುದೇ ಉದ್ಯಮವನ್ನು ಪ್ರಾರಂಭಿಸಲು, ಸಾಗಿಸಿಕೊಂಡು ಹೋಗಲು ಸ್ವಾತಂತ್ರ್ಯವಿದ್ದಿತು; ಆ ಉದ್ಯಮದಲ್ಲಿಯ ಲಾಭವೇ ಮಾರ್ಗದರ್ಶಕ ಚುಕ್ಕಾಣಿಯಾಗಿದ್ದಿತು. ಜನತೆಯ ಬೆಂಬಲವೇ ಲಾಭದ ಮೂಲವಾಗಿದ್ದಿತು. ಮಾರುಬೆಲೆ, ಕೊಳ್ಳುಬೆಲೆ ಬೇಡಿಕೆ ಪೂರೈಕೆಗಳಿಂದ ನಿರ್ಣಯಿತವಾಗುತ್ತಿದ್ದಿತು. ಈ ಸ್ವಾತಂತ್ರ್ಯವು ಸ್ವೈರವಿಹಾರವಲ್ಲವೆಂಬುದಕ್ಕೆ ಬಳಕೆಗಾರನೇ ನಿಯಂತ್ರಕನಾಗಿರುತ್ತಿದ್ದನು.

ಯೋಜನಾಬದ್ಧ ನಿಯಂತ್ರಿತ ಆರ್ಥಿಕ ಪದ್ಧತಿಯಲ್ಲಿ ಸರಕಾರದ ಸತ್ತೆಯು ಬಂಡವಲಿನ ಉಪಯೋಗದ ನಿರ್ದೇಶನವನ್ನು ಮಾಡುವುದು. ಅದರ ವಿತರಣವನ್ನು ಸೂಚಿಸುವುದು. ಬಳಕೆಗಾರನ ಆಸೆಗಳನ್ನು ನಿಯಂತ್ರಿಸುವುದು; 'ನಿನಗೆ ಬೇಕಾದುದನ್ನು ಪಡೆ' ಎನ್ನುವ ಬದಲು "ಇಲ್ಲ ಸಿಕ್ಕುವ ವಸ್ತುಗಳಲ್ಲಿಯ ಯಾವುದನ್ನಾದರೂ ನೀನು ತೆಗೆದುಕೊ" ಎನ್ನುವುದು; ಬೆಲೆ ನಿಯಂತ್ರಿಸಲ್ಪಟ್ಟಿರುವುದು. ವೈಯಕ್ತಿಕ ಸೊತ್ತುಗಳು ಕರಗಿ—ಕಮರಿ—ಸಾರ್ವಜನಿಕ ಸೊತ್ತುಗಳು ಬೆಳೆಯುವುವು. ರಾಷ್ಟ್ರವು ಸ್ವಾವಲಂಬಿಯಾಗಲು

ಪ್ರಯುಕ್ತಿಸುವುದು. ಯಾವ ಉದ್ಯೋಗ, ವ್ಯವಹಾರ, ವ್ಯವಸಾಯವಿರಲಿ, ಅದಕ್ಕೆ ಎಲ್ಲಿಯೊ ಒಂದೆಡೆ ನಿಯಂತ್ರಣದ ಸಂಕೋಲೆ ಇದ್ದುದು ಭಾಸವಾಗುವುದು.

ಈ ಎರಡೂ ಪದ್ಧತಿಗಳಲ್ಲಿಯ ಮರ್ಮವನ್ನು ತಿಳಿದರೆ ಮೊದಲನೆಯದು ವ್ಯಕ್ತಿಪ್ರಧಾನವಾದುದು; ಎರಡನೆಯದು ರಾಷ್ಟ್ರಪ್ರಧಾನವಾದುದು. ವ್ಯಕ್ತಿ ಪ್ರಾಧಾನ್ಯದಿಂದ ರಾಷ್ಟ್ರದ ಪ್ರಗತಿಗೆ ಅಡ್ಡಿಯಾಗುವುದೆ; ರಾಷ್ಟ್ರಪ್ರಧಾನ ಪದ್ಧತಿಯಿಂದ ವ್ಯಕ್ತಿಯ ವಿಕಾಸವು ಕಮರುವುದೆ? ಈ ದ್ವಂದ್ವದ ಹಿನ್ನೆಲೆಯಲ್ಲಿ ಅಡಗಿದ ಪ್ರಶ್ನೆಯು ಬಹು ಮಹತ್ವದ್ದಾಗಿದೆ. ವ್ಯಕ್ತಿಯ ಸ್ವಾತಂತ್ರ್ಯ ಎಷ್ಟು ಮಟ್ಟಿಗೆ? ವ್ಯಕ್ತಿಸ್ವಾತಂತ್ರ್ಯವು ರಾಷ್ಟ್ರವಿಘಾತಕವಾಗುತ್ತಿದ್ದರೆ ಅದನ್ನು ಮಿತಗೊಳಿಸಬಾರದೆ? ರಾಷ್ಟ್ರದ ಪ್ರಗತಿ ಎಂಬುದು ವ್ಯಕ್ತಿಗಳ ವಿಕಾಸವನ್ನು ಬಿಟ್ಟು ಬೇರೆಯಾಗಿದೆಯೆ? ರಾಷ್ಟ್ರಶಕ್ತಿಯನ್ನು ಬೆಳೆಸುವಾಗ ವ್ಯಕ್ತಿಯು ಮುರುಟಿಹೋದರೆ, ರಾಷ್ಟ್ರವು ಸಾಧಿಸುವ ಕಲ್ಯಾಣವಾದರೂ ಯಾರದು?

ಈ ಮಹತ್ವಪೂರ್ಣ ಪ್ರಶ್ನೆಗಳು ಇಂದು ಮಧ್ಯಮ ದಾರಿಯನ್ನು ಹುಡುಕಿವೆ. ಹಿಂದಿನ ಕಾಲದ ಸ್ವತಂತ್ರ–ಅನಿಯಂತ್ರಿತ ಆರ್ಥಿಕ ವ್ಯವಸ್ಥೆಯು ಇಂದಿನ ಪರಿಸ್ಥಿತಿಗೆ ಸಲ್ಲದು; ಸಂಪೂರ್ಣ ನಿಯಂತ್ರಿತ, ಸರಕಾರ ಸತ್ತಾಧೀನವಾದ ಸರ್ವಾಧಿಕಾರಿ ಪ್ರವೃತ್ತಿಯುಳ್ಳ ಕೇಂದ್ರೀಕೃತ ಆರ್ಥಿಕ ಪದ್ಧತಿಯೂ ಬೆಳೆಯುತ್ತಿರುವ ಪ್ರಜಾಪ್ರಭುತ್ವ ತತ್ವಕ್ಕೆ ಸಲ್ಲದು. ಆದುದರಿಂದ ಎರಡರಲ್ಲಿಯ ವೈಗುಣ್ಯಗಳನ್ನು ಇಲ್ಲವಾಗಿಸಿ ಎರಡರಲ್ಲಿಯ ಗುಣಗಳನ್ನು ಆಯ್ದು, ಒಂದಕ್ಕೊಂದು ಹೊಂದುಗೂಡುವಂತೆ ಮಿಶ್ರಪದ್ಧತಿಯನ್ನು ಕಂಡುಕೊಳ್ಳುವುದೇ ಮಧ್ಯಮಾರ್ಗದ ಚಿಹ್ನವಾಗಿದೆ. ಈ ಮಧ್ಯಮಾರ್ಗವು ಕೂಡ ದೇಶ, ಕಾಲ, ಪರಿಸ್ಥಿತಿಗೆ ತಕ್ಕಂತೆ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಾದುದರಿಂದ ಮಿಶ್ರಪದ್ಧತಿಯೆಂದು ಹೆಸರು ಗಳಿಸಿದರೆ ಎಲ್ಲೆಡೆಯಲ್ಲಿಯೂ ಒಂದೆ ಮಾದರಿ ಕಾಣದು ಇದಕ್ಕಾಗಿಯೆ ಇಂದು ಈ ಹೊಸ ರೂಪಕ್ಕೆ—ವೈವಿಧ್ಯಪೂರ್ಣ ರೂಪಕ್ಕೆ, ಪರಿಸ್ಥಿತಿಗನ್ವಯಿಸಿಕೊಂಡ ರೂಪಕ್ಕೆ ರಾಷ್ಟ್ರೀಯ ಪದ್ಧತಿ ಇಲ್ಲವೆ ರಾಷ್ಟ್ರೀಯ ಯೋಜನೆಗಳು ಎಂಬ ಹೊಸ ಹೆಸರು ಬಂದಿದೆ.

ರಾಷ್ಟ್ರವೆಂಬ ಕಲ್ಪನೆಯಲ್ಲಿ ಆಂತರಿಕ ಸಾರ್ವಭೌಮತ್ವ ಮತ್ತು ಬಾಹ್ಯ ಜಗತ್ತಿನಿಂದ ಸ್ವತಂತ್ರತೆ ಇವು ಎರಡು ಮೂಲವಾಗಿರುವುವು. ರಾಷ್ಟ್ರವು ರಾಷ್ಟ್ರವಾಗಿ ಉಳಿಯಬೇಕಾದರೆ, ಬೆಳೆದು ಬಾಳಬೇಕಾದರೆ ಇವೆರಡು ಸುಭದ್ರವಾಗಿರಬೇಕಾಗುವುದು. ರಾಷ್ಟ್ರೀಯ ಯೋಜನೆಯೆಂಬುದರಲ್ಲಿ ಇವೆರಡಕ್ಕೆ ಮೊದಲ ಸ್ಥಾನ. ತನ್ನ ಅಸ್ತಿತ್ವದ ಸ್ವತಂತ್ರತೆ ಮತ್ತು ಸುಭದ್ರತೆಗಳನ್ನು ಲಕ್ಷ್ಯವಾಗಿಟ್ಟುಕೊಂಡೇ ರಾಷ್ಟ್ರೀಯ ಯೋಜನೆಯು ಸಿದ್ಧವಾಗುವುದು. ಆದುದರಿಂದ ರಾಷ್ಟ್ರೀಯ ಯೋಜನೆಯು ಆರ್ಥಿಕ ಯೋಜನೆಯಾದರೂ ಅದಕ್ಕೆ ಬೆನ್ನೆಲುವಾಗಿ ರಾಜಕೀಯ ತಂತ್ರ ಯೋಜನೆಯು, ವಿಕಾಸಯೋಜನೆಯು ಇರುವುದು. ಯಾವುದೊಂದು ರಾಷ್ಟ್ರೀಯ ಯೋಜನೆಯನ್ನು ನೋಡುವಾಗ ಆ ರಾಷ್ಟ್ರವು ತನ್ನ ರಾಜಕೀಯ ಪ್ರಗತಿಗಾಗಿ ಇಟ್ಟುಕೊಂಡ ಧ್ಯೇಯ ಧೋರಣೆಗಳು ಯಾವು, ಅದನು ಕಾರ್ಯಕಾರಿಯಾಗಿಸುವ ಸಾಧನ–ರೀತಿಗಳು ಯಾವು, ಇವುಗಳಲ್ಲಿ ವ್ಯಕ್ತ–ಅವ್ಯಕ್ತ ರೂಪಸ್ವರೂಪಗಳು ಯಾವುವು ಎಂಬುದನ್ನು ನೋಡಬೇಕಾಗುವುದು. ಆಗ. ಇಂದಿನ ಅವರ ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸಿದ್ಧವಾದ ಆರ್ಥಿಕ ಯೋಜನೆಯು ವ್ಯಾಪ್ತಿ ಮತ್ತು ಸಾಮರ್ಥ್ಯ ತಿಳಿವುದಲ್ಲದೆ ನಾಳಿನ ಜೀವನದಲ್ಲಿ ಅದು ಗಳಿಸಬೇಕೆಂದಿದ್ದ ರಾಜಕೀಯ ಸ್ಥಾನಮಾನದ ಕಲ್ಪನೆಯೂ ಭವಿಷ್ಯತ್ ಜೀವನದಲ್ಲಿಯ ಆರ್ಥಿಕ ರಚನೆಯೂ ತನ್ಮೂಲಕ ಉಂಟಾಗುವ ಸಾಮಾಜಿಕ ರಚನೆಯೂ, ಶೈಕ್ಷಣಿಕ ವಿಕಾಸವು, ಸಾಂಸ್ಕೃತಿಕ ಪುನರುತ್ಥಾನವೂ ಔದ್ಯಮಿಕ ಬೆಳವಣಿಗೆಯೂ ವ್ಯಕ್ತಿಗಳ ಜೀವನಮಟ್ಟವೂ ತಿಳಿದುಬರುವುದು. ಉಳಿದ ರಾಷ್ಟ್ರೀಯ ಯೋಜನೆಗಳನ್ನು ಈ ದೃಷ್ಟಿಯಿಂದ ನೋಡುವಂತೆ ಭಾರತದ ಪ್ರಥಮ ರಾಷ್ಟ್ರೀಯ ಪಂಚವಾರ್ಷಿಕ ಯೋಜನೆಯನ್ನು ನೋಡುವುದು ಆಗತ್ಯವಾಗಿದೆ. ಅದನ್ನು ಮುಂದೆ ನೋಡುವಾ.

---

**ಪ್ರಕರಣ ಎರಡು:**

# ಭಾರತದ ಪಂಚವಾರ್ಷಿಕ ಯೋಜನೆ

## ಹಿನ್ನೆಲೆ

ಭಾರತದಲ್ಲಿ ಯೋಜನೆಯ ವಿಚಾರವು ಮೊದಲು ರೂಪುಗೊಂಡುದು ೧೯೩೮ರ ಅಕ್ಟೋಬರದಲ್ಲಿ. ಆಗ ಇಂಡಿಯನ್ ನ್ಯಾಶನಲ್ ಕಾಂಗ್ರೆಸು ರಾಷ್ಟ್ರೀಯ ಯೋಜನಾ ಸಮಿತಿಯನ್ನು ಶ್ರೀ ಜವಾಹರಲಾಲ ನೆಹರು ಅವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಿತು. ಭಾರತದ ಪುನರುಜ್ಜೀವನವನ್ನು ಸಾಧಿಸಬೇಕೆಂದು, ಅದಕ್ಕಾಗಿ ಸ್ವಾತಂತ್ರ್ಯವನ್ನು ಪಡೆಯಬೇಕೆಂದು ಕಟಿಬದ್ಧವಾದ ಮತ್ತು ಭಾರತೀಯರ ಆಸೆ ಆಕಾಂಕ್ಷೆಗಳನ್ನು ಪ್ರತಿನಿಧೀಕರಿಸುವ ಸಂಸ್ಥೆಯಾಗಿತ್ತು ಕಾಂಗ್ರೆಸು. ಶಾಸನಿಕ ಸತ್ತಾಧಿಕಾರವಿಲ್ಲದೆ ಇದ್ದರೂ ಜನತೆಯ ಮೇಲೆ ಅಧಿಕಾರ ಬೀರುವ ಸಂಸ್ಥೆಯಾಗಿತ್ತು, ಕಾಂಗ್ರೆಸ್ಸು. ಸ್ಥಾಪಿತ ಸರಕಾರವು ಜನತೆಯ ಆಗುಹೋಗುಗಳ ಬಗ್ಗೆ ವಿಚಾರಿಸುವಂತೆ, ಕಾರ್ಯಪ್ರವೃತ್ತವಾಗುವಂತೆ ಕಾಂಗ್ರೆಸ್ಸು ಕಾರ್ಯಮಾಡುತ್ತಿತ್ತು. ರಾಷ್ಟ್ರೀಯ ಅಂತರರಾಷ್ಟ್ರೀಯ ವಿಚಾರವ್ಯವಹಾರಗಳನ್ನು ನಿರೀಕ್ಷಿಸಿ, ಮಾರ್ಗದರ್ಶನ ಮಾಡಲು ಅನೇಕ ಸಮಿತಿ ಉಪಸಮಿತಿಗಳು ಕಾಂಗ್ರೆಸ ಸಂಸ್ಥೆಯಲ್ಲಿದ್ದುವು. ಅಂತಹ ಮಹತ್ವಪೂರ್ಣ ಸಮಿತಿಗಳಲ್ಲಿ ಯೋಜನಾ ಸಮಿತಿಯೂ ಒಂದಾಗಿತ್ತು. ಈ ಯೋಜನಾ ಸಮಿತಿಯು ದೇಶದ ಆರ್ಥಿಕ ಸ್ಥಿತಿಗತಿಯ ಪರಿಶೀಲನೆ ಮಾಡಿತಲ್ಲದೆ, ಜನತೆಯು ಯೋಜನಾವಿಚಾರಗಳಲ್ಲಿ ಆಸಕ್ತಿ ತಳೆಯುವಂತೆ ಮಾಡಿತು, ದೇಶದ ಆರ್ಥಿಕಸ್ಥಿತಿಯು ಹೀನಾಯವಾದುದಕ್ಕೆ ಕಾರಣಗಳೇನು, ಅದರ ಪರಿಸ್ಥಿತಿ ಸುಧಾರಿಸಲು ಮಾಡಬೇಕಾದ ಪರಿಹಾರೋಪಾಯಗಳೇನು ಎಂಬುದರ ಬಗ್ಗೆ ಸ್ಥೂಲವಾಗಿಯೇಕೆ ಆಗಲೊಲ್ಲದು, ಸಂಗತಿಗಳನ್ನು ಕಲೆ ಹಾಕಿತ್ತು.

ಕಾಂಗ್ರೆಸು ದೇಶದಲ್ಲಿನ ಮಹಾಸಂಸ್ಥೆಯಾಗಿದ್ದರೂ ಅದು ಒಂದು ವಿಚಾರಪ್ರಣಾಲಿಯನ್ನು ಸಮರ್ಥಿಸುವ ಒಂದು ಪಕ್ಷವೂ ಆಗಿತ್ತು. ಆದುದರಿಂದ ಕಾಂಗ್ರೆಸ್ ವಿಚಾರಪ್ರಣಾಲಿಯನ್ನು ಒಪ್ಪದೇ ಇದ್ದ ಚಿಕ್ಕಪುಟ್ಟ ಪಕ್ಷ ಸಂಸ್ಥೆಗಳೂ ಹುಟ್ಟಿಕೊಂಡಿದ್ದುವು. ಕಾಂಗ್ರೆಸು ಒಂದು ಯೋಜನೆಯನ್ನು ಮುಂದೆ ಮಾಡಿದಾಗ, ಬೇರೆ ಪಕ್ಷ ಪಂಗಡಗಳವರು ಕೂಡ ತಮ್ಮ ತಮ್ಮ ದೃಷ್ಟಿಯಿಂದ ದೇಶದ ಉನ್ನತಿಗಾಗಿ ಯೋಜನೆಗಳನ್ನು ಸಿದ್ಧಪಡಿಸಿದ್ದರು. ಕಳೆದ ದಶಕದ ಮೊದಲರ್ಧದಲ್ಲಿ ನಾಲ್ಕಾರು ಯೋಜನೆಗಳು ಜನತೆಯ ಮುಂದೆ ಬಂದಿದ್ದುವು. ಬಂಡವಲುಗಾರರು ಮಾಡಿದ ಯೋಜನೆ, ಸಮಾಜವಾದಿಗಳು ಮಾಡಿದ ಯೋಜನೆ, ವಿಚಾರವಂತ ವ್ಯಕ್ತಿಗಳು ಸಿದ್ಧಪಡಿಸಿದ ಯೋಜನೆಗಳು ಮತ್ತು ಕಾಂಗ್ರೆಸು ಸಿದ್ಧಪಡಿಸಿದ ಯೋಜನೆ ಇವುಗಳ ರೂಪರೇಷೆಗಳು ಪ್ರಕಟವಾದುವು. ಆಗ ಈ ಯೋಜನೆಗಳಿಂದ ಯಾವ ಕಾರ್ಯ ಸಾಧಿಸದೇ ಇದ್ದರೂ ಅಂಕೆ ಸಂಖ್ಯೆ, ಸಂಗತಿಗಳು ದೊರೆತುವು. ಯೋಜನೆಯನ್ನು ಕಾರ್ಯಕಾರಿ ಮಾಡುವುದಕ್ಕೆ, ಈ ಪ್ರಥಮ ಪಂಚವಾರ್ಷಿಕ ಯೋಜನೆಯನ್ನು ಸಿದ್ಧಪಡಿಸುವುದಕ್ಕೆ, ಪೂರ್ವಭಾವಿಯಾಗಿ ರಚಿತವಾದ ಆ ವಿವಿಧ ಯೋಜನೆಗಳು ನೆರವಾದುವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ದೇಶದ ಆರ್ಥಿಕ ಸ್ಥಿತಿ ಸುಧಾರಿಸಲು ಮುಂಗಾಣೆಯ ಹಾಗೆ ಯೋಜನೆಯು ಪ್ರಜಾಪ್ರಭುತ್ವದ ರಾಷ್ಟ್ರಗಳಲ್ಲಿಯೂ ಸರ್ವಾಧಿಕಾರಿ ಪ್ರವೃತ್ತಿಯ ರಾಷ್ಟ್ರಗಳಲ್ಲಿಯೂ ಮನ್ನಣೆ ಪಡೆದ ಪದ್ಧತಿಯಾಗಿದ್ದಿತು ಎಂಬುದೂ ಲಕ್ಷಿಸಬೇಕಾದ ಸಂಗತಿಯಾಗಿದೆ.

## ಸ್ವತಂತ್ರ ಭಾರತದ ಸ್ಥಿತಿ

ಅಧಿಕಾರ ಹಸ್ತಾಂತರವಾಗಿ ಭಾರತವು ಸ್ವತಂತ್ರ ರಾಷ್ಟ್ರವೆಂದಾಯಿತು. ಸ್ವಾತಂತ್ರ್ಯದ ಹೋರಾಟದ ಕಾಲದಲ್ಲಿ, ಸ್ವಾತಂತ್ರ್ಯ ಸಂಪಾದನೆಯ ನಂತರ, ಸುಖಸಮಾಧಾನ ಸಮೃದ್ಧಿಗಳು ದೊರೆಯುವುವು ಎಂಬ ಭಾವನೆ ಬಲವಾದದ್ದಿತ್ತು. ಪಾರತಂತ್ರ್ಯದಿಂದ ಪರಿಸ್ಥಿತಿಯು ಹದಗೆಟ್ಟು ಹಾಳಾಗಿ ಹೋಗಿದೆ; ಈ ಪರಿಸ್ಥಿತಿಯು ಪಲ್ಲಟವಾಗಬೇಕಾದರೆ ಸ್ವಾತಂತ್ರ್ಯವೊಂದೆ ದಿವ್ಯ

ಸಾಧನವೆಂದು ಆ ಕಾಲದಲ್ಲಿ ಪ್ರಚಾರ ಮಾಡಲಾಗುತ್ತಿದ್ದುದರಿಂದ ಸಾಮಾನ್ಯ ಜನತೆಯು ಸ್ವಾತಂತ್ರ್ಯದ ನಂತರ ಸುಖಸಮಾಧಾನಗಳು ಸಂಪತ್ ಸಮೃದ್ಧಿಯು ಉಂಟಾಗುವುವೆಂದು ಆಶಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಸ್ವಾತಂತ್ರ್ಯ ಪಡೆದ ದಿನದಿಂದಲೇ ಹೊಸಯುಗ ಪ್ರಾರಂಭವಾಗುವುದೆಂದು ಜನತೆ ಎಣಿಸಿತ್ತು; ಜೀವನರೀತಿಯು ಒಮ್ಮೆಲೆ ಬದಲಾಗುವುದೆಂದು ಅಪೇಕ್ಷಿಸಿತ್ತು. ಆದರೆ ಆರ್ಥಿಕ ಉತ್ಕರ್ಷವು ತಾತ್ಕಾಲಿಕ ಸಾಧ್ಯವಾಗುವ ಸಂಗತಿಯಲ್ಲವೆಂಬುದನ್ನು ಸಾಮಾನ್ಯರು ತಿಳಿದಿದ್ದಿಲ್ಲ.

ನೂರೈವತ್ತು ವರುಷ ಪಾರತಂತ್ರ್ಯದಲ್ಲಿ ಶೋಷಿತವಾಗಿ ರಸಹೀನವಾದ ದೇಶದ ಸ್ಥಿತಿಯು ಒಂದು ಬಗೆಯದಾದರೆ, ಎರಡನೆಯ ಮಹಾಯುದ್ಧ ಮತ್ತು ದೇಶದ ವಿಭಜನೆ ಇವುಗಳಿಂದುಂಟಾದ ಸ್ಥಿತಿಯು ಇನ್ನೊಂದು ಬಗೆಯದಾಗಿತ್ತು. ಈ ಮೂರೂ ಕಾರಣಗಳ ಮೂಲಕ ದೇಶವು ಎಲ್ಲ ಬಗೆಯಿಂದ ನಿರ್ಜೀವವಾಗಿದ್ದಿತು ಎಂದು ಹೇಳಿದರೆ ಹೆಚ್ಚಲ್ಲ. ಇವುಗಳಿಗೆ ಜತೆಯಾಗಿ, ಬೆಳೆಯುತ್ತಿರುವ ಭಾರತದ ಜನಸಂಖ್ಯೆಯೂ ಒಂದು ಹೆಚ್ಚಿನ ಸಮಸ್ಯೆಯನ್ನು ತಂದೊಡ್ಡಿದ್ದಿತು. ದೊರೆತ ಸ್ವಾತಂತ್ರ್ಯದ ಉಬ್ಬು-ಉತ್ಸವಗಳ ಸೌಖ್ಯವನ್ನು ಉಪಭೋಗಿಸಲು ಕೂಡ ಸಾಮರ್ಥ್ಯವಿಲ್ಲದ ಹಾಗೆ ಜನತೆಯ ಸ್ಥಿತಿಯಾಗಿತ್ತು. ಅನ್ನ, ಅರಿವೆ, ವಸತಿ, ಉದ್ಯೋಗಗಳಿಗಾಗಿ ಬಾಯಿಬಿಡುವ ಜನತೆ ಒಂದೆಡೆ; ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯವನ್ನು ದಕ್ಕಿಸಿಕೊಳ್ಳಬೇಕಾದ ಹೊಣೆಗಾರಿಕೆ ಇನ್ನೊಂದೆಡೆ; ಬರಿದಾದ ಬೊಕ್ಕಸ, ಶೋಷಿತ ಸಂಪತ್‌ಸಾಧನಗಳು ಅಲಕ್ಷಿಸಲ್ಪಟ್ಟ, ಕೃಷಿ, ಕೈಗಾರಿಕೆ, ಉದ್ಯಮಗಳು ಮಗದೊಂದೆಡೆ, ಹೀಗಾಗಿ ಆಡಳಿತ ಸೂತ್ರ ಧರಿಸಿದ ಅಧಿಕಾರಿ ವರ್ಗಕ್ಕೆ ತಾವು ಇದುವರೆಗೆ ಕೊಟ್ಟ ಅಭಿವಚನಗಳನ್ನು ಜನತೆಗೆ ಹೇಗೆ ಪಾಲಿಸಿ ತೋರಿಸಬೇಕೆಂಬ ಕಳವಳ ಉಂಟಾಯಿತು. ಆಗ ರಾಷ್ಟ್ರದ ಸ್ಥಿತಿಗತಿಯ ಪರಿಶೀಲನೆಮಾಡುವ, ಹೊಸ ಜೀವನ ಕುದುರಿಸುವ ರಾಷ್ಟ್ರೀಯ ಯೋಜನೆಯನ್ನು ಮಾಡಬೇಕೆಂದು ಮೂಡಿತು. ಬಾಯಿಬಿಡುವ ಜನತೆಗೆ ಭವಿಷ್ಯತ್‌ಜೀವನದ ಚಿತ್ರವೊಂದನ್ನಾದರೂ ಕೊಡುವಂತೆಯಾಗುವುದೆಂದು ರಾಷ್ಟ್ರೀಯ ಯೋಜನೆಯನ್ನು ರೂಪಿಸುವ ಪ್ರವೃತ್ತಿ ಕಂಡುಬಂದಿತು.

## ಯೋಜನಾಸಮಿತಿ ವಿಚಾರಿಸಬೇಕಾದ ವಿಷಯಗಳು

" ಈ ಮೂರು ನಾಲ್ಕು ವರುಷಗಳಲ್ಲಿ ನಮ್ಮ ಸರಕಾರವು ಮಾಡಿದ ಜಾಣತನದ ಕಾರ್ಯವೆಂದರೆ ಯೋಜನಾ ಸಮಿತಿಯನ್ನು ನಿಯಮಿಸುವುದು " ಎಂದು ಶ್ರೀ ಜವಾಹರಲಾಲರು ಅಂದರು. ಈ ಯೋಜನಾ ಸಮಿತಿಯು ೧೯೫೦ ರ ಮಾರ್ಚದಲ್ಲಿ ನೇಮಕವಾಯಿತು. ಅದು ಲಕ್ಷಿಸಬೇಕಿದ್ದ ವಿಷಯ ಗಳ ವಿವರ ಹೀಗಿತ್ತು:

(೧) ತಾಂತ್ರಿಕ ಕೆಲಸಗಾರ ತಂಡವನ್ನು ಒಳಗೊಂಡು ಮಾನವ ಸಂಪತ್ತು, ಬಂಡವಾಳ, ಉತ್ಪಾದನ ಸಾಮಗ್ರಿ ಇವುಗಳ ವ್ಯಾಪ್ತಿಯೆಷ್ಟಿದೆ ಯೆಂಬುದನ್ನು ನೋಡುವುದಕ್ಕಾಗಿ ಮತ್ತು ರಾಷ್ಟ್ರೀಯ ಅವಶ್ಯಕತೆಗಳಿಗಾಗಿ ಈಗಿದ್ದ ಉತ್ಪಾದನ ಸಾಮಗ್ರಿಗೆ ಜೋಡಿಸಲು ಅನುವಾಗುವ ಸಾಧನಗಳ ಶಕ್ಯತೆಯನ್ನು ಅನ್ವೇಷಣ ಮಾಡುವುದಕ್ಕಾಗಿ ಲಕ್ಷ್ಯಹಾಕಬೇಕು.

(೨) ರಾಷ್ಟ್ರದ ಸಾಂಪತ್ತಿಯನ್ನು ಪರಿಣಾಮಕಾರಕವಾಗುವಂತೆ ಮತ್ತು ಸಮತೂಕವಾಗುವಂತೆ ಉಪಯೋಗಿಸಲು ಯೋಜನೆ ಸಿದ್ಧಪಡಿಸ ಬೇಕು.

(೩) ಕಾರ್ಯಗಳ ಪ್ರಾಥಮಿಕತೆಯನ್ನು ನಿರ್ಧರಿಸಿ ಯೋಜನೆಯು ಯಾವ ಕ್ರಮದಲ್ಲಿ ಕಾರ್ಯಕಾರಿಯಾಗಬೇಕೆಂಬುದನ್ನೂ ಮತ್ತು ಒಂದೊಂದು ಅವಸ್ಥೆಯು ಪರಿಪೂರ್ಣವಾಗುವುದಕ್ಕೆ ಎಷ್ಟು ಸಂಪತ್ ವಿನಿಯೋಗವಾಗ ಬೇಕೆಂಬುದನ್ನೂ ಸೂಚಿಸಬೇಕು.

(೪) ಆರ್ಥಿಕ ಬೆಳೆಗೆಯನ್ನು ತಡೆಹಿಡಿಯುವಂತಹ ಸಂಗತಿಗಳನ್ನು ಸೂಚಿಸಬೇಕು. ಮತ್ತು ಇಂದಿನ ಸಾಮಾಜಿಕ ಮತ್ತು ರಾಜಕೀಯ ಸನ್ನಿ ವೇಶವನ್ನು ಮನದಂದು ಯೋಜನೆಯು ಕಾರ್ಯಕಾರಿಯಾಗಲು ಎಂತಹ ಪರಿಸರವನ್ನು ಉಂಟಾಗಿಸಬೇಕೆಂಬುದನ್ನು ಸೂಚಿಸಬೇಕು.

(೫) ಯೋಜನೆಯು ಎಲ್ಲ ಅವಸ್ಥೆಗಳಲ್ಲಿ ಪ್ರಗತಿಯಾಗಿಸಲು ಯಾವ ಮಾದರಿಯ ಆಡಳಿತಯಂತ್ರ ಇರಬೇಕೆಂಬುದನ್ನು ನಿಶ್ಚಿತಗೊಳಿಸಬೇಕು.

(೬) ಯೋಜನೆಯ ಒಂದೊಂದು ಅವಸ್ಥೆಯ ಕಾರ್ಯನಿರ್ವಹಣೆಯಲ್ಲಿಯ ಪ್ರಗತಿಯನ್ನು ನಿವೇದಿಸಬೇಕು ಮತ್ತು ಇಂತಹ ನಿವೇದನೆಯಿಂದ ಆವಶ್ಯಕವಾಗುವಂತಹ ಉಪಾಯ ಮತ್ತು ಧೋರಣೆಗಳನ್ನು ಶಿಫಾರಸು ಮಾಡಬೇಕು.

(೭) ಅದಕ್ಕೆ ಕೊಟ್ಟ ಕಾರ್ಯವನ್ನು ಸುಗಮವಾಗಿಸಲು ಯೋಗ್ಯವಾದ ಇಲ್ಲವೆ ಪ್ರಚಲಿತ ಆರ್ಥಿಕ ಪರಿಸ್ಥಿತಿಯನ್ನು, ಧೋರಣೆಯನ್ನು, ಉಪಾಯಗಳನ್ನು ಮತ್ತು ಅಭಿವೃದ್ಧಿಕಾರ್ಯಕ್ರಮಗಳನ್ನು ಮನದಂದು ಯೋಗ್ಯವಾದ, ಇಲ್ಲವೆ, ರಾಜ್ಯ ಇಲ್ಲವೆ ಕೇಂದ್ರ ಸರಕಾರಗಳಿಂದ ಕೇಳಲಾದ ವಿಶಿಷ್ಟ ಸಮಸ್ಯೆಗಳ ಬಗ್ಗೆ ಪರಿಶೀಲನೆ ಮಾಡಿ ಯೋಗ್ಯವಾದ ಮಧ್ಯಂತರ ಇಲ್ಲವೆ ಆನುಷಂಗಿಕ ಶಿಫಾರಸುಗಳನ್ನು ಮಾಡಬೇಕು.

## ಮೂಲ ಸಮಸ್ಯೆಗಳು

ಭಾರತದ ಆರ್ಥಿಕ ರಚನೆಯಲ್ಲಿಯ ಕೆಲ ವೈಗುಣ್ಯಗಳು ಸಮಸ್ಯಾತ್ಮಕ ರೂಪು ತಳೆದಿದ್ದುವು. ದೇಶದ ಜನತೆಯ ಎರಡು ಮೂರಾಂಶ ಜನರು ನೆಲವನ್ನು ಅವಲಂಬಿಸಿದವರು. ನೆಲವಾದರೊ, ಪೂರ್ಣ ಅಲಕ್ಷಿಸಲ್ಪಟ್ಟು ಹುಟ್ಟುವಳಿಯು ತೀರ ಕೆಳಮಟ್ಟಕ್ಕೆ ಇಳಿದುದು. ಜಪಾನದಲ್ಲಿ ಒಂದು ಎಕರೆಗೆ ೧೭೧೩ ಪೌಂಡು ಗೋದಿ ಬಂದರೆ, ಇಜಿಪ್ತದಲ್ಲಿ ೧೯೧೮ ಪೌಂಡು ಗೋದಿ ಒಂದು ಎಕರೆಗೆ ಹುಟ್ಟುವಳಿಯಾದರೆ, ಭಾರತದಲ್ಲಿ ಒಂದು ಎಕರೆಗೆ ಸುಮಾರು ೬೬೦ ಪೌಂಡುಗಳಷ್ಟು ಬೆಳೆಯುತ್ತಿತ್ತು. ಹುಟ್ಟುವಳಿಯು ಇಷ್ಟು ಹೀನಾಯವಾಗಿದ್ದರೆ ದೇಶವು ಬಡತನದಿಂದ ಕಂಗಾಲಾಗುವುದರಲ್ಲಿ, ಬರಗಾಲಕ್ಕೆ ತುತ್ತಾಗುವುದರಲ್ಲಿ, ಆಹಾರ ಮತ್ತು ಕಚ್ಚಾ ಸರಕುಗಳಲ್ಲಿ ಕೊರತೆಯುಂಟಾಗುವುದರಲ್ಲಿ, ನಿರುದ್ಯೋಗ ಬೆಳೆಯುವುದರಲ್ಲಿ ಯಾವ ಆಶ್ಚರ್ಯವಿಲ್ಲ.

ಕೃಷಿಯ ಪರಿಸ್ಥಿತಿ ಹಾಗಿದ್ದಾಗ, ಅದನ್ನು ಅವಲಂಬಿಸಿದ ಉದ್ಯಮದ ಸ್ಥಿತಿಯು ಆಶಾದಾಯಕವಾಗಿದ್ದಿಲ್ಲ. ಕಳೆದ ಮೂರು ದಶಕಗಳಲ್ಲಿ ಔದ್ಯೋಗಿಕ ಬೆಳಗೆಯಾಗಿದ್ದರೂ ಅದು ಬೆಳೆಯುತ್ತಿದ್ದ ಜನಸಂಖ್ಯೆಗೆ ಸಮಾನವಾಗಿದ್ದಿಲ್ಲ. ಅದರಿಂದ ಕೃಷಿಯ ಮೇಲಿನ ಭಾರ ಕಡಿಮೆಯಾಗಲಿಲ್ಲ. ಇಂತಹ ವಿಶಾಲವಾದ ದೇಶದಲ್ಲಿ, ಇಷ್ಟು ಪರಿವ್ಯಾಪ್ತಿಯ ಜನಸಂಖ್ಯೆಯಲ್ಲಿ ಕೇವಲ ೨೫ ಲಕ್ಷ

ಜನರು ಸಂಘಟಿತ ಉದ್ಯೋಗಗಳಲ್ಲಿ ತೊಡಗಿದ ಕಾರ್ಮಿಕರು ಎಂದು ತಿಳಿದರೆ ಔದ್ಯೋಗಿಕ ವಿಕಾಸವು ಆಗಿಲ್ಲವೆಂಬುದಕ್ಕೆ ಬೇರೆ ಸಾಕ್ಷಿ ಏಕೆ ಬೇಕು ?

ಸಂಪದುತ್ಪಾದನ ಸಾಧನಗಳಾದ ಕೃಷಿ ಮತ್ತು ಉದ್ಯಮಗಳು ಮುರುಟಿಕೊಂಡಿದ್ದ ಮೇಲೆ ಜೀವನಮಟ್ಟವು ಮೇಲ್ತರಗತಿಯದೆಂತಾಗುವುದು ? ಭಾರತೀಯನ ವಾರ್ಷಿಕ ಸರಾಸರಿ ತಲಾ ಉತ್ಪನ್ನವು ೨೫೫ ರೂ. ಗಳಾಗಿದ್ದಾಗ ತಲೆಯೆತ್ತಿ ಬಾಳಲು ಯಾವ ಅವಕಾಶವಿದ್ದಿತು ? ಉತ್ಪಾದನ ಮಟ್ಟವು ಇಷ್ಟು ನಿಕೃಷ್ಟವಾಗಿರುವಾಗ ಅಭಿವೃದ್ಧಿಗೆ ಉಳಿತಾಯ ವೆಲ್ಲಿಂದಾಗಬೇಕು ? ನಮ್ಮ ಆರ್ಥಿಕ ಅಭಿವೃದ್ಧಿಯಾಗದ ಹೊರತು ರಾಷ್ಟ್ರೀಯ ಆದಾಯವು ಹೆಚ್ಚುವುದೆಂತು ?

ಸಮಸ್ಯೆಗಳು ಒಂದೊಂದಾಗಿ ಹೀಗೆ ಸಾಲಾಗಿ ಎದುರಿಸಿಬಂದಾಗ ಕೇಂದ್ರ ಮತ್ತು ರಾಜ್ಯ ಸರಕಾರಗಳು ತತ್‌ಕ್ಷಣ ಪರಿಹಾರಗಳನ್ನು ಹುಡುಕಲೇ ಬೇಕಾಯಿತು. ಜನತೆಯ ಜೀವನ ಮಟ್ಟವನ್ನು ಸುಧಾರಿಸಬೇಕೆಂಬ ಹಂಬಲು ತೀವ್ರವಾಯಿತು. ಆರ್ಥಿಕ ಅಭಿವೃದ್ಧಿಯನ್ನುಂಟುಮಾಡುವ, ಸಾಮಾಜಿಕ ಪುನರುಜ್ಜೀವನ ಮಾಡುವ ಅನೇಕ ಹಂಚಿಕೆಗಳನ್ನು ಹಾಕಿದರು. ಆದರೆ ಜನ–ಧನ–ಸಾಧನ ಸಾಮಗ್ರಿಗಳು ಮಿತವಾಗಿದ್ದು ಬೇಡಿಕೆಗಳು ಅಮಿತವಾಗಿರುವುವೆಂಬ ಭಾವನೆ ಉಂಟಾಗುವ ಹಾಗೆ ವ್ಯಾಪಕವಾಗಿದ್ದುದರಿಂದ ಬೇಡಿಕೆ ಪೂರೈಕೆಗಳಲ್ಲಿ ಸಮನ್ವಯ–ಸಮತೂಕ ತರುವ ಯೋಜನೆಯೊಂದು ಅವಶ್ಯವೆನ್ನಿಸಿತು. ಅದಕ್ಕಾಗಿಯೆ ಯೋಜನಾ ಸಮಿತಿಯು ನೇಮಿಸಲ್ಪಟ್ಟಿತು.

ಸಮಿತಿಯು ೧೫ ತಿಂಗಳುಗಳ ವರೆಗೆ ಅವಿರತವಾಗಿ ದುಡಿಯಿತು. ಅನೇಕ ಮೂಲ ಮತ್ತು ಮಹತ್ವದ ಸಮಸ್ಯೆಗಳನ್ನು ಅಭ್ಯಸಿಸಿತಲ್ಲದೆ ಆನುಷಂಗಿಕವಾಗಿರುವ ಇನ್ನೂ ಅನೇಕ ಸಮಸ್ಯೆಗಳನ್ನು ಪರಿಶೀಲಿಸಿತು. ಕೇಂದ್ರ ಮತ್ತು ರಾಜ್ಯಗಳ ಮಂತ್ರಿ ಮಂಡಲಗಳೊಡನೆ, ಮತ್ತು ದೇಶದಲ್ಲಿಯ ವಿವಿಧ ಹಿತಸಂಬಂಧಗಳೊಡನೆ, ಬೇರೆ ಬೇರೆ ದೃಷ್ಟಿ, ವಿಚಾರ ಪಂಥ ಪ್ರಣಾಲಿಗಳುಳ್ಳವರೊಡನೆ ಚರ್ಚೆ ಮಾಡಿತು. ಈ ಎಲ್ಲ ಚರ್ಚೆ, ವಿಚಾರವಿನಿಮಯದ ಫಲವಾಗಿ ಪಂಚವಾರ್ಷಿಕ ಯೋಜನೆಯು ಸಿದ್ಧವಾಯಿತು. ೧೯೫೧ರ ಎಪ್ರಿಲ್‌ದಿಂದ ೧೯೫೬ರ ಮಾರ್ಚದ ವರೆಗಿನ ಕಾಲಾವಧಿಯೆ ಈ ಯೋಜನೆಯು ಐದು

ವರುಷದ ಕಾಲಾವಧಿಯಾದುದರಿಂದ ಯೋಜನೆಯು ಸಿದ್ಧವಾಗುವ ಹೊತ್ತಿಗೆ ಕಾರ್ಯಕಾರಿಯಾಗುತ್ತಲಿದ್ದ ಅನೇಕ ಅಭಿವೃದ್ಧಿ ಯೋಜನೆಗಳನ್ನು ಒಳಗೊಂಡಿತಲ್ಲದೆ, ಹೊಸದಾಗಿ ಪ್ರಾರಂಭವಾಗಬೇಕಿದ್ದವುಗಳನ್ನು ಸಮಾವೇಶ ಮಾಡಿಕೊಂಡಿತು. ಕರಡು ರೂಪದಲ್ಲಿದ್ದ ಯೋಜನೆಯು **೧೭೯೩ ಕೋಟಿ ರೂಪಾಯಿಗಳ** ವೆಚ್ಚದ ವಿವರವನ್ನು ಒಳಗೊಂಡಿತ್ತು. ಆದರೆ ಇಂದು ಸ್ವೀಕೃತವಾದ ಯೋಜನೆಯು **೨೦೬೯ ಕೋಟಿ ರೂಪಾಯಿಗಳ** ವೆಚ್ಚದ ವ್ಯಾಪ್ತಿಯನ್ನು ಇಟ್ಟುಕೊಂಡಿದೆ.

## ಯೋಜನೆಯ ಗುರಿ

ಸ್ಥೂಲವಾಗಿ ನೋಡಿದರೆ ಯೋಜನೆಯಲ್ಲಿ ಎರಡು ಗುರಿಗಳು ಕಂಡು ಬರುವುವು. ಒಂದು, ಜನತೆಯ ಜೀವನ ಮಟ್ಟವನ್ನು ಏರಿಸುವುದು; ಎರಡು ಸಾಮಾಜಿಕ ನ್ಯಾಯ ಒದಗಿಸುವುದು, ಅಂದರೆ ಸಮತೆಯನ್ನುಂಟುಮಾಡುವುದು. ಗುರಿಗಳ ಈ ಆದರ್ಶವು ನಮ್ಮ ಭಾರತದ ರಾಜ್ಯಘಟನೆಯಲ್ಲಿಯ ನಿರ್ದೇಶಕ ತತ್ವಗಳಲ್ಲಿ ಅಡಕವಾಗಿದೆ. ಆ ತತ್ವಗಳು ಸಮಾನ ಕಾರ್ಯಾವಕಾಶವನ್ನು, ದುಡಿಮೆಯ ಹಕ್ಕನ್ನು, ದುಡಿಮೆಗೆ ತಕ್ಕ ಯೋಗ್ಯವೇತನ ಮತ್ತು ಎಲ್ಲ ನಾಗರಿಕರಿಗೆ ಯೋಗ್ಯ ಸಾಮಾಜಿಕ ಭದ್ರತೆಗಳ ಹಕ್ಕುಗಳನ್ನು ಕಣ್ಣು ಮುಂದಿಟ್ಟುಕೊಂಡಿವೆ. ಜನತೆಯ ಕಲ್ಯಾಣವನ್ನು ಸಾಧಿಸುವ ಸರಕಾರದ ಧ್ಯೇಯವನ್ನು ರಾಜ್ಯಘಟನೆಯು ದೃಷ್ಟಿಯಲ್ಲಿಟ್ಟುಕೊಂಡಿದೆ. ಈ ದೃಷ್ಟಿಯಿಂದ ಸಾಗಬೇಕಾಗಿರುವಾಗ ಯೋಜನೆಯು ತಾತ್ಕಾಲಿಕ ಸಮಸ್ಯೆಗಳ ಪರಿಹಾರವನ್ನು ಮತ್ತು ಭವಿಷ್ಯತ್‌ಕಾಲದ ಭದ್ರತೆಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದು ಅಗತ್ಯವಾಯಿತು.

ಈ ಗೊತ್ತುಗುರಿಗಳನ್ನು ಸಾಧಿಸಲು ಎಂತಹ ಯೋಜನೆಯಾಗಿರಬೇಕು ಎಂಬುದನ್ನು ಗಮನಿಸಲಾಗಿದೆ. ಸರ್ವಾಧಿಕಾರಿತ್ವದಲ್ಲಿ ಕೇಂದ್ರೀಕೃತವಾದ ಯೋಜನೆಯ ಪದ್ಧತಿಯು ಅನೇಕರ ಮನಸ್ಸನ್ನು ಸೆಳೆದಿತು. ಆ ಪದ್ಧತಿಯಿಂದ ಅಲ್ಪಾವಕಾಶದಲ್ಲಿ ಮಾನವನ ಆವಶ್ಯಕ ಬೇಡಿಕೆಗಳ ಪೂರೈಕೆಯೂ ಆಗಬಹುದಿತ್ತು. ಆದರೆ ಆ ಪದ್ಧತಿಯನ್ನು ಅನುಸರಿಸಿದ್ದರೆ, ಒತ್ತಾಯ ಮತ್ತು ವ್ಯಕ್ತಿ ಸ್ವಾತಂತ್ರ್ಯದ ಅಭಾವ ಉಂಟಾಗುತ್ತಿದ್ದಿತು. ಇವು ನಮ್ಮ

ಸಾಂಸ್ಕೃತಿಕ ಜೀವನದ ವಿರುದ್ಧವೂ ರಾಜ್ಯಘಟನೆಯ ತತ್ವದ ವಿರುದ್ಧವೂ ಆದ ವಾತಾವರಣವನ್ನು ನಿರ್ಮಿಸುತ್ತಿದ್ದವು. ಪ್ರಜಾಸತ್ತೆಯೆ ನಮ್ಮ ಗುರಿ ಸಾಧನೆಯಲ್ಲಿಯ ಸ್ವೀಕೃತ ದಾರಿ ಮತ್ತು ಪದ್ಧತಿಯಾದುದರಿಂದ ಸಾರ್ವಜನಿಕರ ಸಹಕಾರವನ್ನು ಅವಲಂಬಿಸುವ, ತನ್ಮೂಲಕ ಅವರಿಗೆ ಶಿಕ್ಷಣ ಕೊಡುವ ಪದ್ಧತಿ ಅಗತ್ಯವಾದುದರಿಂದ ಸರ್ವಾಧಿಕಾರಿತ್ವದ ಕೇಂದ್ರೀಕೃತ ಪದ್ಧತಿಯನ್ನು ಬಿಟ್ಟುಕೊಡಲಾಯಿತು.

ಯೋಜನೆಯ ಒಂದು ಬಗೆಯ ನಿಯಂತ್ರಣವನ್ನು ತರುವುದರಿಂದ ಹಳೆಯ ಸ್ವತಂತ್ರ ಆರ್ಥಿಕ ಪದ್ಧತಿಯೂ ಒಗ್ಗದ ವಿಷಯವಾಯಿತು. ಸ್ವತಂತ್ರ ಆರ್ಥಿಕ ಪದ್ಧತಿಯಲ್ಲಿಯಂತೆ ವೈಯಕ್ತಿಕ ಸಾಹಸ ಪ್ರಯತ್ನಗಳಿಗೆ ಅನಿಯಮಿತ, ಅನಿಯಂತ್ರಿತ ಅಧಿಕಾರವನ್ನು ಬಿಟ್ಟುಕೊಡುವುದೂ ಅಸಾಧ್ಯವಾಯಿತು; ಸರ್ವಾಧಿಕಾರಿ ಪದ್ಧತಿಯಂತೆ ಎಲ್ಲವನ್ನು ಸರಕಾರದ ಕೈಯಲ್ಲಿ ಕೇಂದ್ರೀಕರಿಸಿಕೊಳ್ಳುವುದನ್ನು ಪ್ರಜಾಸತ್ತೆಯ ಗುರಿಯ ಕಾರಣಕ್ಕಾಗಿ ಬಿಟ್ಟುಕೊಡಲಾಯಿತು. ಎರಡೂ ಪದ್ಧತಿಗಳಲ್ಲಿ ಗುಣಯುಕ್ತ ಭಾಗವನ್ನು ಅಂಗೀಕರಿಸಿ, ಸರಕಾರ ಮತ್ತು ಸಾರ್ವಜನಿಕ ಎರಡೂ ವಿಭಾಗಗಳು ಸಮತೂಕದಿಂದ ಬೆಳೆದು ಒಂದು ಮತ್ತೊಂದನ್ನು ಪೋಷಿಸಿ ಎರಡೂ ಪೂರ್ಣ ವಿಕಾಸ ಪಡೆಯುವ ಸಹಕಾರದ ಪದ್ಧತಿಯನ್ನು ಈ ನಮ್ಮ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಯಿತು. ಇಲ್ಲಿ ತ್ಯಾಗಬುದ್ಧಿಯ ಸಾರ್ವಜನಿಕ ಸಹಕಾರವಿದೆ; ಜನತೆಯ ಕಲ್ಯಾಣ ಮಾಡಬೇಕೆಂದಿರುವ ಸರಕಾರದ ಸತ್ತೆಯಿದೆ. ಇದರಿಂದ ಖಾಸಗೀ ಕ್ಷೇತ್ರಗಳ ಸಾಹಸಕಾರ್ಯಗಳೂ ಕುದುರುವುವು; ಸರಕಾರದ ಅಂತರ್ಗತವಾಗಿ ಬಂದ ಕ್ಷೇತ್ರಗಳಲ್ಲಿಯ ಕಾರ್ಯದ ಅಭಿವೃದ್ಧಿಯೂ ಆಗುವುದು. ಇದರಲ್ಲಿ ನಾಗರಿಕನು ಕಾರ್ಯಮಾಡುತ್ತ ಕಲಿತು ತನ್ನ ಗುಣ ಶಕ್ತಿಗಳನ್ನು ಹೆಚ್ಚಿಸಿಕೊಳ್ಳುವನು. ಸಾರ್ವಜನಿಕ ಹಿತಕ್ಕಾಗಿ ಸ್ವಂತದ ತ್ಯಾಗ ಹೇಗೆ ಮತ್ತು ಎಷ್ಟು ಮಾಡಬೇಕೆಂದು ಕಲಿತುಕೊಳ್ಳುವನು. ಈ ಪದ್ಧತಿಗೆ ಸಹಕಾರೀ ಪ್ರವೃತ್ತಿಯ ಪ್ರಜಾಸತ್ತೆಯ ಪದ್ಧತಿಯೆಂದು ಕರೆಯಬಹುದು. ಇದನ್ನು ನಮ್ಮ ರಾಷ್ಟ್ರದ ಜನತೆಯ ಮತ್ತು ಸಂಪತ್ತಿನ ಸ್ಥಿತಿಗತಿ, ಸಂಸ್ಕೃತಿ ಸಂಪ್ರದಾಯಗಳನ್ನು ಲಕ್ಷಿಸಿ ಮಾಡಿದ್ದರಿಂದ ಇದು ರಾಷ್ಟ್ರೀಯ ಯೋಜನೆಯಾಗಿದೆ.

## ಕಾರ್ಯವಿತರಣ ವ್ಯವಸ್ಥೆ

ಸರಕಾರ ಮತ್ತು ಸಾರ್ವಜನಿಕರ ಸಹಕಾರದಿಂದ ಸಿದ್ಧಿ ಸಾಧಿಸುವ ಸಾಧಕವುಳ್ಳ ರಾಷ್ಟ್ರೀಯ ಯೋಜನೆಯು ಇದಾಗಿದೆಯೆಂದು ಹೇಳಿದ ಮೇಲೆ ಕಾರ್ಯಭಾಗಗಳ ವಿತರಣ ವ್ಯವಸ್ಥೆ ಹೇಗಾಗಿದೆ ಎಂದು ನೋಡುವುದು ಅವಶ್ಯವಾಗುವುದು. ಕೃಷಿ, ನೀರಾವರಿ, ವಿದ್ಯುತ್‌ಶಕ್ತಿ, ಸಾಮಾಜಿಕ-ಕಲ್ಯಾಣ ಸೇವೆ ಮತ್ತು ಈಗಾಗಲೆ ಸರಕಾರವು ಪ್ರಾರಂಭಿಸಿದ ಉದ್ಯಮಗಳ ಅಭಿವೃದ್ಧಿ ಇವು ಸರಕಾರದ ಕಾರ್ಯದಲ್ಲಿ ಬರುವುವು. ಕೆಲಕಾಲದ ವರೆಗೆ ಸರಕಾರವು ಉದ್ಯಮ ಮತ್ತು ವಾಣಿಜ್ಯದಲ್ಲಿ ತನ್ನ ಕೈಹಾಕುವುದಿಲ್ಲ. ಇವುಗಳನ್ನು ಸಾರ್ವಜನಿಕರ ಖಾಸಗಿ ವ್ಯವಹಾರಕ್ಕೆ ಬಿಟ್ಟುಕೊಡುವುದು. ಆದರೆ ಮೊದಲಿನಂತೆ ಈ ಕ್ಷೇತ್ರಗಳಲ್ಲಿಯು ಕಾರ್ಯವು ಅನಿಯಂತ್ರಿತವಾಗಿರಲಾರದು. ರಾಷ್ಟ್ರದ ಹಿತದ ದೃಷ್ಟಿಯಿಂದ ಅಗತ್ಯವೆನ್ನಿಸುವಷ್ಟು ಮಟ್ಟಿಗೆ ಇಲ್ಲಿಯ ವ್ಯವಹಾರವನ್ನು ನಿರ್ದೇಶನ ಮಾಡುವ ಅಧಿಕಾರವನ್ನು ಸರಕಾರವು ಇಟ್ಟುಕೊಂಡು ಉಳಿದ ವಿಕಾಸಕ್ರಮ, ಅಭಿವೃದ್ಧಿಯ ವ್ಯಾಪ್ತಿ ಇವುಗಳನ್ನು ಖಾಸಗಿ ಉದ್ಯಮದಾರರಿಗೆ, ವ್ಯಾಪಾರಿಗಳಿಗೆ, ವಾಣಿಜ್ಯ ವ್ಯವಹಾರಾಸಕ್ತರಿಗೆ ಬಿಟ್ಟಿರುತ್ತದೆ. ಎರಡೂ ಕ್ಷೇತ್ರಗಳಲ್ಲಿಯ ಕಾರ್ಯವು ಸುಗಮವಾಗಿ ಸಾಗಿ, ಮೇಲ್ಮಿತಿಯ ಉತ್ಪಾದನ, ನಿರುದ್ಯೋಗಿತೆಯ ಅಭಾವ, ಕೆಳಮಿತಿಯ ಬೆಲೆಗಳು, ಆದಾಯದಲ್ಲಿ ಸಮಾನತೆಗಳು ಸಾಧಿಸಬೇಕೆಂಬ ದೃಷ್ಟಿಯನ್ನು ಇಟ್ಟುಕೊಂಡಿದೆ. ಸಮನ್ವಯದ ಸಮತೂಕದ ದೃಷ್ಟಿಯಿರುವುದರಿಂದ ಇಲ್ಲಿ ಎರಡೂ ಕ್ಷೇತ್ರಗಳ ನಡುವೆ ವಿರಾಟಕ್ಕೆ ಆಸ್ಪದವಾಗಲಿ, ಹತ್ತಿಕ್ಕುವ ಹವಣು ಹಂಚಿಕೆಗಳಾಗಲಿ ಇಲ್ಲ.

## ಇಂದು ಆಗಬೇಕಾಗಿರುವುದೇನು ?

ಇಂದು ಅತಿ ಅಗತ್ಯವಿರುವುದು ಆಹಾರ ಮತ್ತು ಅವಶ್ಯಕ ಸರಕು. ಇವುಗಳ ಉತ್ಪಾದನೆಯ ಮೇಲೆಯೆ ಕೇವಲ ಲಕ್ಷ್ಯವನ್ನು ಹಾಕಿದರೆ. ಇಂದಿನ ಪರಿಸ್ಥಿತಿಯಲ್ಲಿ ಪರಿಹಾರ ಕಂಡತಾದರೂ ಭವಿಷ್ಯತ್ ಜೀವನವು ಇನ್ನೂ ಭಯಾನಕವಾಗುವುದು. ನಾಳಿನ ಬಾಳು ಹೆಚ್ಚು ಸೌಲಭ್ಯಗಳಿಂದ ಕೂಡಿದು

ದಾಗಬೇಕೆಂದು ಬಯಸಿದರೆ ಇಂದು ತುಸು ತ್ಯಾಗಕ್ಕೆ, ಕಷ್ಟ ನಿಷ್ಠುರಕ್ಕೆ ಸಿದ್ಧರಾಗಬೇಕಾಗುವುದು. ಆಹಾರ ಮತ್ತು ಅವಶ್ಯಕ ಸರಕುಗಳ ಹೆಚ್ಚಿನ ಉತ್ಪಾದನ ಮಾಡುವುದರ ಕಡೆಗೆ ಲಕ್ಷ್ಯಹಾಕುವ ಜತೆಗೆ ನಮ್ಮ ಆರ್ಥಿಕ ವ್ಯವಸ್ಥೆಯ ಬುನಾದಿಯನ್ನು ಭದ್ರಗೊಳಿಸುವ ಮತ್ತು ಪ್ರಗತಿಯನ್ನು ತಡೆಗಟ್ಟಬಹುದಾದ ಸಂಗತಿಗಳತ್ತ ಲಕ್ಷ್ಯ ಪೂರೈಸಬೇಕು. ಅದಕ್ಕಾಗಿಯೆ ಮೂಲಧನದಲ್ಲಿಯ ಕೆಲ ಭಾಗವನ್ನು ನದೀ ಕೊಳ್ಳಗಳ ಯೋಜನೆಗಳಲ್ಲಿ ತೊಡಗಿಸಬೇಕಾಗಿ ಬಂದಿದೆ.

ಆರ್ಥಿಕ ವ್ಯವಸ್ಥೆಯು ಭದ್ರವಾಗಬೇಕಾದರೆ ನಿರುದ್ಯೋಗಿತೆಯ ನಾಶವಾಗಲೇಬೇಕು. ಬೆಳೆಯುತ್ತಿರುವ ನಮ್ಮ ದೇಶದ ಜನತೆಯನ್ನೆಲ್ಲ ಮೂಲೋದ್ಯೋಗವಾದ ಕೃಷಿಯಲ್ಲಿ ತೊಡಗಿಸಲು ಅನುವಾಗುವಷ್ಟು ಸಾಕಷ್ಟು ಕ್ಷೇತ್ರವೂ ಇಲ್ಲ ; ಸಾಧನ ಸಾಮಗ್ರಿಯೂ ಇಲ್ಲ. ದೇಶದಲ್ಲಿನ ಮಾನವ ಬಲವನ್ನು ಕೃಷಿಯು ಬಳಸಿಕೊಳ್ಳಲಾರದು. ವಿವಿಧ ಮುಖವಾಗಿ ಬೆಳೆಯುವ ಸಣ್ಣ ದೊಡ್ಡ ಪ್ರಮಾಣದ ಔದ್ಯೋಗೀಕರಣವೇ ದಿವ್ಯ ಸಾಧನವೆನ್ನಿಸಿಕೊಳ್ಳುವುದು.

ಮುಂದಿನ ಹೆಜ್ಜೆಯೆಂದರೆ ಆರ್ಥಿಕ ಸಮಾನತೆಯನ್ನು ಒದವಿಸುವುದು. ಸದ್ಯಕ್ಕೆ ದೇಶದ ಸಂಪತ್ತು ಅಸಮಾನವಾಗಿ ಹಂಚಿ ಹೋಗಿದೆ. ಸಿರಿವಂತರು ಅತಿ ಶ್ರೀಮಂತರಾಗಿದ್ದಾರೆ; ಬಡವರು ಕಂಗಾಲಾಗಿದ್ದಾರೆ. ಪಟ್ಟಣಗಳಲ್ಲಿ ಸಮೃದ್ಧಿಯ ವಾತಾವರಣ ಕಂಡುಬಂದರೆ ಹಳ್ಳಿಗಳು ಹೀನಾಯವಾಗಿವೆ. ನಮ್ಮ ದೇಶದಲ್ಲಿ ಪ್ರಜಾಸತ್ತೆಯು ಉಳಿದು ಬಾಳಬೇಕಾದರೆ ಆರ್ಥಿಕ ಸಮಾನತೆಯುಂಟಾಗಲೇಬೇಕಾಗುವುದು. ಇದನ್ನು ಎರಡು ರೀತಿಯಿಂದ ಸಾಧಿಸಬಹುದಾಗಿದೆ; ಒಂದು ಸಿರಿವಂತರೆಂಬುವವರ ಮಿತಿಮೀರಿದ ಸಂಪತ್ತನ್ನು, ಕರ-ತೆರಿಗೆ-ಸುಂಕಗಳ ರೂಪದಲ್ಲಿ ಶಾಸನಿಕ ವಿಧಾನಗಳಿಂದ ಕಿತ್ತಿಕೊಳ್ಳುವುದು ; ಇನ್ನೊಂದು ಜನಸಾಮಾನ್ಯರ ಜೀವನಮಟ್ಟವನ್ನು ಸುಧಾರಿಸುವುದು. ಸಮಾಜದ ಉತ್ಪಾದನ ಸಾಮರ್ಥ್ಯವನ್ನು ಹೆಚ್ಚಿಸುವುದು ; ರೈತರು, ಕಾರ್ಮಿಕರು, ಹಿಂದುಳಿದವರು ಇವರಿಗೆ ಅವಶ್ಯಕ ಸಂರಕ್ಷಣೆ ಕೊಟ್ಟು ಅವರ ಸತ್ವವನ್ನು ಹೆಚ್ಚಿಸುವುದು.

ಈ ಗುರಿಯನ್ನು ಕ್ರಮಕ್ರಮವಾಗಿ ಕಾರ್ಯ ಸಾಧಿಸುವ ಧೋರಣೆಯನ್ನು ಈ ಯೋಜನೆಯು ಇಟ್ಟುಕೊಂಡಿದೆ. ಸಾವಕಾಶವಾಗಿ ಸಾವಧಾನವಾಗಿ ಸಾಗುವುದರಿಂದಲೇ ಸಮಾಧಾನಕಾರಕವಾಗಿ ಸರಾಗವಾಗಿ ಸಾರ್ವಜನಿಕರ ಪ್ರಗತಿಯು ಸಾಧಿಸುವುದು.

## ಇದರಿಂದ ಸಾಧಿಸುವುದಾದರೂ ಏನು ?

ಉತ್ಪಾದನೆಯ ಮಟ್ಟವು ಮತ್ತು ಸಮಾಜದ ಕಲ್ಯಾಣವು ಆ ಸಮಾಜದ ಬಳಿ ಇರುವ ಬಂಡವಲಿನ ಗಾತ್ರದ ಮೇಲೆ ಅವಲಂಬಿಸಿರುತ್ತದೆ. ಪ್ರತಿಯೊಬ್ಬನಿಗೆ ಬರುವ ನೆಲವೆಷ್ಟು, ಉತ್ಪಾದನದ ಉಪಕರಣಗಳೆಷ್ಟು,— ಅಂದರೆ, ಕಾರಖಾನೆಗಳು, ಯಂತ್ರಗಳು, ನೀರಾವರಿ, ಚಾಲಕ ಶಕ್ತಿಸಾಧನಗಳು ಮತ್ತು ಸಂಪರ್ಕ ಸಾಧನಗಳು. ಈ ರೀತಿಯ ಬಂಡವಲಿನಲ್ಲಿ ಹೆಚ್ಚಳ ಮತ್ತು ಅವುಗಳನ್ನು ಉಪಯೋಗಿಸುವ ಕೌಶಲದಲ್ಲಿ ಪ್ರಗತಿ ಉಂಟಾದರೆ ಸಮಾಜದ ಜೀವನಮಟ್ಟವನ್ನು ಏರಿಸಲು ಸಹಾಯಕವಾಗುವ ಸರಕು-ಸೇವೆಗಳ ಉತ್ಪಾದನದಲ್ಲಿ ಅಭಿವೃದ್ಧಿಯಾಗುವುದು ಆರ್ಥಿಕ ಪ್ರಗತಿಗೆ ಬಂಡವಲಿನ ಹೆಚ್ಚಳವೆ ಬುನಾದಿ.

ಭಾರತದಲ್ಲಿ ಜಲಸಂಪತ್ತಿಯು ಸಮೃದ್ಧಿಯಿದೆ. ಜಲಶಕ್ತಿ ಮತ್ತು ಖನಿಜಗಳು ಇನ್ನೂ ಉಪಯೋಗಕ್ಕಾಗಿ ಬೇಕಾದಷ್ಟಿವೆ; ಸಾಗುವಳಿ ಮಾಡಲು ಬರಬಹುದಾದ ಭೂಮಿಯು ಸಾಕಷ್ಟಿದೆ; ಉದ್ಯಮಗಳು ಉಗಮವಾಗಲು ಅಸಾಧಾರಣ ಅವಕಾಶವಿದೆ. ಇವುಗಳನ್ನೆಲ್ಲ ಹೊಂದಿಸಿ ಅಭಿವೃದ್ಧಿ ಮಾಡಲು ಸದ್ಯದ ತಾತ್ಕಾಲಿಕ ವೆಚ್ಚದಲ್ಲಿ ಹಿಡಿತ ತಂದು ಭವಿಷ್ಯತ್ಕಾಲದ ಭಾಗ್ಯಕ್ಕಾಗಿ ಬಂಡವಲನ್ನು ಉಳಿಸಿಕೊಳ್ಳಬೇಕಾಗಿದೆ. ಈ ವಿಚಾರ ಮಾಡುವಾಗ ಬೆಳೆಯುತ್ತಿರುವ ಭಾರತದ ಜನಸಂಖ್ಯೆಯನ್ನು ಮರೆಯಲಾಗದು. ವರುಷಕ್ಕೆ ೧-೨೫ ಶತಾಂಶದಷ್ಟು ಜನಸಂಖ್ಯೆಯು ಬೆಳೆಯುತ್ತಿದೆ. ಈಗಿನ ರೀತಿಯಲ್ಲಿ ಪ್ರಗತಿ ನಡೆದರೆ ಅದೆಲ್ಲ ಬೆಳೆದ ಈ ಜನಸಂಖ್ಯೆಯ ಬಾಯಿಗೆ ಬಿದ್ದು ಮುಂದಿನ ಕಾರ್ಯಕ್ಕಾಗಿ ಕೈಗೆ ಹಣವೇ ಉಳಿಯದು. ಆದುದರಿಂದ ಬಂಡವಲು ಹೆಚ್ಚಿಸಬೇಕಾದರೆ ಜನಸಂಖ್ಯೆಯ ನಿಯಂತ್ರಣದ ಜತೆಗೆ ಉತ್ಪಾದನಾಧಿಕ್ಯ ಸಾಧಿಸುವುದು ಅಗತ್ಯವಾಗಿದೆ. ೧೯೫೦-೫೧ ರಲ್ಲಿ

ಭಾರತದ ರಾಷ್ಟ್ರದ ಆದಾಯದಲ್ಲಿ ನೂರಕ್ಕೆ ೫ ರಷ್ಟು ಉಳಿತಾಯ ವಾಯಿತು. ಉಳಿದ ದೇಶಗಳ ಉಳಿತಾಯದ ಅಂಕಿಗಳನ್ನು ನೋಡಿದರೆ ಇದು ತೀರ ಕಡಿಮೆಯದೆಂದು ಹೇಳಬಹುದು. ಆದರೆ ಭಾರತದಲ್ಲಿ ಬೆಳೆ ಯುತ್ತಿರುವ ಜನಸಂಖ್ಯೆಯನ್ನು ಮನದಂದರೆ ಇದೂ ಒಂದು ದೊಡ್ಡ ಸಾಧನೆ ಯೆಂದೆ ಹೇಳಬೇಕಾದೀತು.

೧೯೫೦–೫೧ ರಲ್ಲಿ ಭಾರತ ರಾಷ್ಟ್ರದ ಆದಾಯವು ೯೦೦೦ ಕೋಟಿ ರೂಪಾಯಿಗಳಷ್ಟಿತ್ತು. ಪ್ರಥಮ ಪಂಚವಾರ್ಷಿಕ ಯೋಜನೆಯು ಕಾರ್ಯ ಕಾರಿಯಾಗುವ ಹೊತ್ತಿಗೆ ಅಂದರೆ ೧೯೫೫–೫೬ ರಲ್ಲಿ ರಾಷ್ಟ್ರದ ಆದಾಯವು ೧೦,೦೦೦ ಕೋಟಿಗಳಷ್ಟಾಗುವುದೆಂದು ಆಶಿಸಲಾಗಿದೆ. ಈ ಐದು ವರುಷ ಗಳಲ್ಲಿ ವರುಷವರುಷವೂ ಹೆಚ್ಚಾಗುತ್ತಿದ್ದ ರಾಷ್ಟ್ರದ ಆದಾಯದಲ್ಲಿಯ ನೂರಕ್ಕೆ ೨೦ ರಷ್ಟು ಬಂಡವಲೆಂದು ಬಳಸಲಾಗುವುದು. ಇದರಿಂದ ೫ ವರು ಷದ ಯೋಜನೆಯ ಕಾಲಾವಧಿಯು ಪೂರ್ಣವಾಗುವ ಹೊತ್ತಿಗೆ ರಾಷ್ಟ್ರದ ಆದಾಯದ ನೂರಕ್ಕೆ ೬·೭೫ ರಷ್ಟು ಬಂಡವಲಾಗಿ ರೂಪುಗೊಳ್ಳುತ್ತ ಹೋಗು ವುದು. ಇದು ಹೀಗೆ ಸಾಗಿದರೆ ವರುಷ ವರುಷಕ್ಕೆ ಹೆಚ್ಚು ಹೆಚ್ಚು ಬಂಡವಲು ಕೂಡಿಬಿದ್ದು ೨೦ ವರುಷಗಳಲ್ಲಿ ರಾಷ್ಟ್ರದಲ್ಲಿಯ ಪ್ರತಿಯೊಬ್ಬನ ಸರಾಸರಿ ಆದಾಯವು ಇಂದಿನ ಎರಡು ಪಟ್ಟಾಗುವುದು.

## ಪ್ರಾಥಮಿಕತೆ

ಬೇಡಿಕೆಯ ಪರಿವ್ಯಾಪ್ತಿಯಿಂದ ಅಳೆದು ನೋಡಲಾಗಿ ಅಭಿವೃದ್ಧಿಗಾಗಿ ಉಪಲಬ್ಧವಿದ್ದ ದೇಶದ ಸಂಪತ್ತು ಬಹಳ ಕಡಿಮೆಯೆಂದು ಕಂಡುಬರುವುದು. ಮೇಲೆ ಹೇಳಿದಂತೆ ರಾಷ್ಟ್ರದ ಆದಾಯದಲ್ಲಿ ನೂರಕ್ಕೆ ೫ ರಷ್ಟು ಅಂದರೆ ಸುಮಾರು ೪೫೦ ಕೋಟಿ ಮಾತ್ರ ವಾರ್ಷಿಕ ಉಳಿತಾಯವಾಗುವುದು. ೧೯೫೫–೫೬ ರ ಹೊತ್ತಿಗೆ ವಾರ್ಷಿಕ ಉಳಿತಾಯವು ೬೭೫ ಕೋಟಿಗಳಷ್ಟಾಗ ಬಹುದು. ಆದುದರಿಂದ ಈ ಉಳಿತಾಯದ ಸದುಪಯೋಗಕ್ಕಾಗಿ ಹೆಚ್ಚಿನ ಜಾಗರೂಕತೆ ವಹಿಸಲಾಗಿದೆ. ದೇಶದಲ್ಲಿ ಆಗಬೇಕಾದ ಕಾರ್ಯದ ವ್ಯಾಪ್ತಿ ಯನ್ನು ನೋಡಿದರೆ ಬರುವ ವರುಷಗಳಲ್ಲಿ ಯಾವ ಕ್ಷೇತ್ರದಲ್ಲಿ ಹಣ ಎಷ್ಟು

ತೊಡಗಿಸಿದರೂ ಕಡಿಮೆಯೆ ಎನ್ನುವ ಹಾಗಿದೆ. ಆದರೆ ಕಾಲಾವಧಿಯು ಕಿರಿದಾಗಿರುವುದರಿಂದ ವೆಚ್ಚದ ಸ್ವರೂಪವೇ ಬದಲಾಗುವುದು ಮತ್ತು ಯಾವುದಕ್ಕೆ ಮೊದಲು ವೆಚ್ಚ ಅಗತ್ಯ ಎಂಬದರ ನಿರ್ಣಯವು ಅತ್ಯವಶ್ಯವಾಗುವುದು. ಆಯಾ ಕ್ಷೇತ್ರಗಳು ಪ್ರಾಥಮಿಕತೆ ಪಡೆದು, ಬೆಳೆದು, ಉಳಿದವುಗಳಿಗೆ ಪೋಷಕಪ್ರಾಯವಾಗುತ್ತ ಹೋದಹಾಗೆ ಪ್ರಾಥಮಿಕತೆಯು ಒಂದು ಕ್ಷೇತ್ರದಿಂದ ಇನ್ನೊಂದಕ್ಕೆ ಬದಲಾಗುತ್ತ ಹೋಗುವುದು.

ಈ ಯೋಜನೆಯು ಐದು ವರುಷಗಳಲ್ಲಿ ಕೃಷಿ, ನೀರಾವರಿ, ಚಾಲಕ ಶಕ್ತಿ ಇವುಗಳು ಅತಿ ಪ್ರಾಥಮಿಕತೆ ಪಡೆಯುವವು. ಈಗಾಗಲೆ ಕಾರ್ಯಕಾರಿಯಾಗುತ್ತಿದ್ದ ಬೇರೆ ಬೇರೆ ಯೋಜನೆಗಳು ಪೂರ್ಣವಾಗುವುದಕ್ಕೆ ಇದು ಅಗತ್ಯವಾಗಿದೆ. ಅಲ್ಲದೆ ಆಹಾರ ಮತ್ತು ಆವಶ್ಯಕ ಸರಕುಗಳ ಅಧಿಕ ಉತ್ಪಾದನೆಯಾಗದ ಹೊರತು ಇವುಗಳಿಂದ ಪೋಷಿತವಾಗುವ ಉಳಿದ ಉದ್ಯಮಗಳು ಬೆಳೆಯುವುದಾದರೂ ಹೇಗೆ? ಯಾವುದೇ ರೀತಿಯ ಅಭಿವೃದ್ಧಿಗೂ ಆಹಾರ ಮತ್ತು ಆವಶ್ಯಕ ಸರಕುಗಳ ಅಧಿಕ ಉತ್ಪಾದನೆ ಅಗತ್ಯ. ಈ ಕ್ಷೇತ್ರಗಳಲ್ಲಿಯ ಸಮೃದ್ಧಿ, ಸ್ವಯಂಪೂರ್ಣತೆ, ವೈಪುಲ್ಯಗಳು ಸಕಲ ಅಭಿವೃದ್ಧಿ ಯೋಜನೆಗಳ ಮೂಲಾಧಾರವಾಗಿವೆ.

ಕೃಷಿಯಲ್ಲಿಯ ಸುಧಾರಣೆಯು ಸರಕಾರವು ಹೆಚ್ಚು ಹಣ ತೊಡಗಿಸುವುದರಿಂದಲೇ ಸಾಧ್ಯವಾಗಬೇಕು. ಮತ್ತು ಕೃಷಿಗೆ ಅತಿ ಪ್ರಾಥಮಿಕತೆ ಕೊಡಲ್ಪಟ್ಟಿದ್ದರಿಂದ ಈ ಅವಧಿಯಲ್ಲಿ ಸರಕಾರವು ಉದ್ಯಮಗಳಲ್ಲಿ ಹಣ ತೊಡಗಿಸುವುದು ಮಿತವಾಗಿರುವುದು. ಉದ್ಯಮಗಳ ಪ್ರಗತಿಯು ಖಾಸಗಿ ಉದ್ದಿಮೆದಾರರ ಸಾಹಸವನ್ನೆ ಅವಲಂಬಿಸಿದೆ. ಸರಕಾರವು ಮಾತ್ರ ಮೂಲಭೂತ ಸಾಧನಗಳಾದ ಚಾಲಕಶಕ್ತಿ-ಸಾರಿಗೆ, ಸಂಪರ್ಕಗಳ ಮೇಲೆ ಕೇಂದ್ರೀಕರಿಸುವುದು. ಆದರೆ ಮಹತ್ವದ ಉದ್ಯೋಗಗಳಾದ, ಕಬ್ಬಿಣ, ಉಕ್ಕು, ರಸಾಯನ, ವಿದ್ಯುತ್‌ಸಲಕರಣೆಗಳು ಇವುಗಳತ್ತ ಸರಕಾರವು ಲಕ್ಷ್ಯ ಹಾಕುವುದು. ಇವಿಲ್ಲದಿದ್ದರೆ ಆಧುನಿಕ ಯುಗದಲ್ಲಿ ಯಾವ ಉದ್ಯಮವೂ ಅಭಿವೃದ್ಧಿ ಹೊಂದಲಾರದು. ಕೃಷಿಯ ನಂತರ ಇವುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಗುವುದು.

ಅಧಿಕೋತ್ಪಾದನೆ ಮಾಡುವುದರ ಕಡೆಗೆ ಹೆಚ್ಚಿನ ಗಮನ ಕೊಡುವುದು ಅನಿವಾರ್ಯವಾದರೂ ಅದರಷ್ಟೇ ಮಹತ್ವದ್ದು ಮಾನವ ಕಾರ್ಯಕೌಶಲವನ್ನು ಹೆಚ್ಚಿಸುವುದು ಆಗಿದೆ. ಕಾರ್ಯಕೌಶಲವೂ ಅಧಿಕೋತ್ಪಾದನೆಗೆ ನೆರವಾಗುವುದು. ಅದಕ್ಕಾಗಿ, ಪೋಷಕಾಂಗಗಳಾದ ಶಿಕ್ಷಣ, ತಾಂತ್ರಿಕ ತರಬೇತು, ಆರೋಗ್ಯವರ್ಧನ ಮುಂತಾದ ಸಾಮಾಜಿಕ ಸೇವೆಗಳೂ ಮಹತ್ವದ ಸ್ಥಾನ ಪಡೆಯುವುವು. ಸಾರ್ವಜನಿಕರ ಸಹಕಾರ ಹೆಚ್ಚಿದ ಹಾಗೆಲ್ಲ ಸಾಕ್ಷರತೆಯ ಆಂದೋಲನವು ಸರಕಾರ ವೆಚ್ಚಮಾಡಬಹುದಾದ ಹಣದಕಿಂತ ಹೆಚ್ಚಿನ ಕಾರ್ಯ ಸಾಧಿಸುವುದು.

ಅಲ್ಲಲ್ಲಿಯ ನಿರುದ್ಯೋಗಿಗಳ ಸಂಖ್ಯೆಯನ್ನು ಲಕ್ಷಿಸಿ ಯೋಜನೆಗಳಿಗೆ ಸ್ಥಾನಿಕ ಕಾರ್ಮಿಕರನ್ನೆ ಸಂಪಾದಿಸುವುದಕ್ಕೆ ಮೊದಲ ಸ್ಥಾನ ಕೊಡಲಾಗಿದೆ. ಇದರಿಂದ ಸಮಾಜದಲ್ಲಿ ಒಂದು ಬಗೆಯ ಜಾಗ್ರತಿ, ಯೋಜನೆಯ ಬಗ್ಗೆ ಪ್ರಜ್ಞೆ ಇವುಗಳು ಉತ್ಪನ್ನವಾಗುವುವು. ಈ ದೃಷ್ಟಿಯಿಂದ ನೋಡಿದಾಗ ಸಮಾಜವಿಕಾಸಯೋಜನೆಯ ಕೇಂದ್ರಗಳು ಬಹು ಮಹತ್ವದ ಕಾರ್ಯವನ್ನು ಸಾಧಿಸುವುವು.

ಈ ಪ್ರಾಥಮಿಕತೆಯ ವಿವರಣೆಯು ಸಾಮಾನ್ಯವಾದುದು. ವಿಶಾಲವಾದ ದೇಶದಲ್ಲಿ ಎಲ್ಲೆಡೆಯಲ್ಲಿಯೂ ಒಂದೇ ಬಗೆಯ ಅವಶ್ಯಕತೆಯಿಲ್ಲ. ಒಂದೇ ಬಗೆಯ ವಿಕಾಸವು ಸಾಧ್ಯವಿಲ್ಲ. ಆದುದರಿಂದ ಪ್ರಾದೇಶಿಕ ಅವಶ್ಯಕತೆ, ಅನುಕೂಲತೆ ಮತ್ತು ಬೇಡಿಕೆಯನ್ನು ಅನುಲಕ್ಷಿಸಿ ಪ್ರಾಥಮಿಕತೆಯನ್ನು ನಿರ್ಣಯಿಸಲಾಗುವುದು. ಆದರೆ ಅದು ಒಟ್ಟಿನಲ್ಲಿ ಸಾಮಾನ್ಯ ಧೋರಣೆಗೆ ಹೊಂದಿಕೊಂಡು ಸಾಗುವುದು.

## ಯೋಜನೆಯ ತಂತ್ರ

ಮೇಲೆ ವಿವರಿಸಿದ ಪ್ರಾಥಮಿಕತೆಯ ಕ್ರಮವನ್ನು ಸಾಧಿಸುವ ಬಗೆ ಹೇಗೆ? ಒಂದೇ ಸೂತ್ರದಲ್ಲಿ ಹೇಳುವುದಾದರೆ "ಸಮಾಜದ ಉಳಿತಾಯದ ಹಣವನ್ನು ಅಪೇಕ್ಷಿತ ಕ್ಷೇತ್ರಗಳಲ್ಲಿ ತಕ್ಕ ಪ್ರಮಾಣದಲ್ಲಿ ತೊಡಗಿಸುವುದು" ಎಂದು ಹೇಳಬೇಕಾದೀತು. ಇದಿಷ್ಟೇ ಹೇಳಿದರೆ ಯೋಜನೆಯ ತಂತ್ರವನ್ನು

ಹೇಳಿದ ಹಾಗಾಗುವುದಿಲ್ಲ. ಅದರ ವಿವರ ಹೀಗಿದೆ: ಉಳಿತಾಯವಾಗುವುದು ಮೂರು ಕ್ಷೇತ್ರಗಳಲ್ಲಿ: ಖಾಸಗಿ ವ್ಯಕ್ತಿಗಳು ಮಾಡುವ ಉಳಿತಾಯ; ಸಾಮಾಜಿಕ ಸಂಸ್ಥೆಗಳು ಮಾಡುವ ಉಳಿತಾಯ; ಮತ್ತು ಸಾರ್ವಜನಿಕ (ಸರ್ಕಾರಿಯ) ರೀತಿಯ ಉಳಿತಾಯ. ಕೊನೆಯದಾದ ಸಾರ್ವಜನಿಕ ರೀತಿಯ ಉಳಿತಾಯವನ್ನು ಹೇಗೆ ವಿನಿಯೋಗ ಮಾಡಬೇಕೆಂಬುದನ್ನು ಸರಕಾರವು ನಿರ್ಣಯಿಸಲು ಸಾಧ್ಯವಾಗಬಹುದಾದರೂ ವ್ಯಕ್ತಿಗಳ ಮತ್ತು ಸಾಮಾಜಿಕ ಸಂಸ್ಥೆಗಳ ಉಳಿತಾಯದ ಹಣ ತೊಡಗಿಸುವಲ್ಲಿ ಸರಕಾರವು ನಿರ್ಣಯ ಕೊಡುವುದು ಸಾಧ್ಯವಾಗದು. ನಿರ್ದೇಶನ ಸೂಚನೆಗಳ ಮುಖಾಂತರ ಅವರ ಒಲವನ್ನು ಯೋಜನೆಯ ಗುರಿಯ ಸಾಧನೆಯ ಕಡೆಗೆ ಒಗ್ಗಿಸುವ ಪ್ರಭಾವ ಬೀರಬಹುದು. ರಾಷ್ಟ್ರೀಯ ಯೋಜನೆಯಲ್ಲಿ ಖಾಸಗಿ ವ್ಯಕ್ತಿಗಳ ಮತ್ತು ಸಂಸ್ಥೆಗಳ ಉಳಿತಾಯದ ಮಹತ್ವದ ಕಾರ್ಯವು ಸಾಮಾನ್ಯವಾಗಿ ಲಕ್ಷಿಸಲ್ಪಟ್ಟಿರುವುದಿಲ್ಲ. ಆ ಹಣವು ಬೇಕಾದಹಾಗೆ ಬಳಸಲ್ಪಟ್ಟರೆ ಯಾವ ಹಾನಿಯೂ ಇಲ್ಲವೆಂದು ತಿಳಿಯಲಾಗಿರುವುದು. ರಾಷ್ಟ್ರದ ಒಟ್ಟು ಉಳಿತಾಯದಲ್ಲಿ ಖಾಸಗಿ ಉಳಿತಾಯವು ಲಕ್ಷ್ಯಯೋಗ್ಯ ಭಾಗವಾಗಿರುವುದರಿಂದ ಅವರ ವಿನಿಯೋಗವು ಅನಿಯಂತ್ರಿತವಾಗಿರುವುದು ಒಳ್ಳೆಯದಲ್ಲ. ಯೋಜನೆಯ ಈ ಐದು ವರುಷದ ಕಾಲಾವಧಿಯಲ್ಲಿ ಸುಮಾರು ೩೫೦೦ ಕೋಟಿ ರೂಪಾಯಿ ಒಟ್ಟು ಉಳಿತಾಯದಲ್ಲಿ ಸಾರ್ವಜನಿಕ (ಸರಕಾರದ) ಭಾಗವು, ತೆರಿಗೆ, ಕರ ಮುಂತಾದ ರೂಪದಲ್ಲಿ ಸುಮಾರು ೧೨೫೦ ಕೋಟಿ ರೂಪಾಯಿಗಳಷ್ಟಾಗುವುದು. ಉಳಿದುದೆಲ್ಲ ಖಾಸಗಿ ಕ್ಷೇತ್ರದ ಉಳಿತಾಯವೆ. ಯೋಜನೆಯ ೨೦೬೯ ಕೋಟಿ ರೂ. ವೆಚ್ಚವನ್ನು ಸರಕಾರದ ಉಳಿತಾಯ ಮತ್ತು ಸಾಲದಿಂದ ಸಾಗಿಸಬೇಕೆಂದಿದೆ. ಆದರೆ ಪರದೇಶದ ಸಾಲದ ಬದಲು ಖಾಸಗಿ ಉಳಿತಾಯದ ನೆರವು ದೊರಕಿಸಿಕೊಳ್ಳಬೇಕೆಂದು ಅಪೇಕ್ಷಿಸಲಾಗಿದೆ. ಏನೇ ಆದರೂ ಖಾಸಗಿ ಉಳಿತಾಯದ ೧೫೦೦ ಕೋಟಿ ರೂಪಾಯಿಗಳನ್ನು ಸುಮ್ಮನೆ ಅಲಕ್ಷಿಸುವಂತಿಲ್ಲ. ಅದನ್ನು ಹೆಚ್ಚಿನ ಕರರೂಪದಿಂದಾಗಲಿ, ಇಲ್ಲವೆ ಖಾಸಗಿ ಹಣ ತೊಡಗಿಸುವಿಕೆಯ ನಿಯಂತ್ರಣದಿಂದಾಗಲಿ ಯೋಜನೆಯ ಪೋಷಣೆಗೆ ಬಳಸಿಕೊಳ್ಳುವುದು ಅಗತ್ಯವಾಗಿದೆ. ಈ ಎರಡನೆಯ ದಿಕ್ಕಿನ ಕಾರ್ಯವನ್ನು ರಿಜರ್ವ ಬ್ಯಾಂಕು ತನ್ನ ಧೋರಣೆಯನ್ನು ಕಾಲಕಾಲಕ್ಕೆ ನಿರ್ಣಯಿಸಿ

ರಾಷ್ಟ್ರದಲ್ಲಿ ಹಣದ ಬಳಕೆಯನ್ನು, ರೀತಿಯನ್ನು ನಿಯಂತ್ರಿಸುವುದು. ಇದರಿಂದ ದೇಶದಲ್ಲಿನ ಅಧಿಕೋತ್ಪಾದನದ ಬದಲು ವ್ಯಾಪಾರಕ್ಕಾಗಿರುವ ಪ್ರಚಲಿತ ಒಲವನ್ನು ತಡೆಗಟ್ಟಲಾಗುವುದು. ವ್ಯಾಪಾರದಲ್ಲಿ ಸರಕಾರವೂ ಕೈಹಾಕುವುದರಿಂದ ರಾಷ್ಟ್ರದ ಆರ್ಥಿಕ ಆಗುಹೋಗುಗಳನ್ನು ಅಳವಿನಲ್ಲಿ ಇಟ್ಟುಕೊಳ್ಳುವುದಕ್ಕೆ ನೆರವಾಗುವುದು. ಸರಕಾರವು ಸಲ್ಲದ ಹಸ್ತಕ್ಷೇಪವನ್ನು ಎಲ್ಲ ಕ್ಷೇತ್ರದಲ್ಲಿ ಮಾಡುತ್ತಿದೆಯೆಂದೂ ಖಾಸಗಿ ವ್ಯಾಪಾರಿಗಳಿಗೆ ಆತಂಕ ವಾಗುತ್ತಿದೆಯೆಂದೂ ಉಂಟಾದ ಭಾವನೆಯನ್ನು ಹೋಗಲಾಡಿಸಲು ಸಹಕಾರಿ ಪದ್ಧತಿಯ ಸಂಸ್ಥೆಗಳನ್ನು ಉತ್ತೇಜಿಸಲಾಗುತ್ತಿದೆ. ಸಹಕಾರಿ ಪದ್ಧತಿಯ ಸಂಸ್ಥೆಗಳ ಉದಯದಿಂದ ವ್ಯಕ್ತಿಗಳಲ್ಲಿ ಹಣದ ಕೇಂದ್ರೀಕರಣವನ್ನು ತಪ್ಪಿಸಿ ದಂತಾಗುವುದಲ್ಲದೆ, ಸರಕಾರದ ಭಾರವೂ ಕಡಿಮೆಯಾಗುವುದು; ಖಾಸಗಿ ಉಳಿತಾಯದ ಸದುಪಯೋಗವೂ ಆಗುವುದು.

## ಬೆಲೆಯ ನಿಯಂತ್ರಣ

ರಾಷ್ಟ್ರದ ಎಲ್ಲ ಕ್ಷೇತ್ರಗಳಲ್ಲಿ ಉಳಿತಾಯ ಹೆಚ್ಚಬೇಕಾದರೆ ಸರಕುಗಳ ಬೆಲೆಯ ನಿಯಂತ್ರಣವಾಗಬೇಕಾಗುವುದು. ಮೊದಲಿನ ಅವಸ್ಥೆಗಳಲ್ಲಿ ಯೋಜನೆಗಾಗಿ ಹಣದ ವೆಚ್ಚ ಹೆಚ್ಚಾಗಿ ಉತ್ಪಾದನವು ಅಷ್ಟುಮಟ್ಟಿಗೆ ಹೆಚ್ಚಾಗಿರುವುದು. ಕ್ರಮೇಣ ಉತ್ಪಾದನ ಹೆಚ್ಚಿದ ಹಾಗೆ ಹಣದ ವೆಚ್ಚವು ಮಿತವಾಗುತ್ತ ಹೋಗಿ ಬೆಲೆಗಳ ಸ್ಥಿರತ್ವ ಕಾಯ್ದುಕೊಳ್ಳಲು ಅನುಕೂಲ ವಾಗುವುದು. ಮೊದಲಿನ ಅವಸ್ಥೆಯಲ್ಲಿ ಬೆಲೆಯ ನಿಯಂತ್ರಣ ಮಾಡದಿದ್ದರೆ ಕಾರ್ಮಿಕರ ಜೀವನಕ್ಕೆ ಧಕ್ಕೆಯಾಗುವುದಲ್ಲದೆ ಯೋಜನೆಯ ವೆಚ್ಚವೂ ಹೆಚ್ಚಾಗಿ ಹಣದ ಉಬ್ಬರದ ಅನವಸ್ಥೆಯುಂಟಾಗುವ ಸಂಭವವಿದೆ. ಆದುದ ರಿಂದ ಈ ಕಾಲಾವಧಿಯಲ್ಲಿ ನಿಯಂತ್ರಣವನ್ನು ಉತ್ಪಾದನ ಮತ್ತು ವಿತರಣ ವ್ಯವಸ್ಥೆಯಲ್ಲಿ ಸಾಧಿಸಲೇಬೇಕಾಗುವುದು. ಯೋಜನೆಯೆಂದರೆ ನಿಯಂತ್ರಿತ ವಿನಿಯೋಗವೆಂದಮೇಲೆ ಸಂಪೂರ್ಣ ವಿನಿಯಂತ್ರಣವು ವಿಸಂಗತವಾಗುವುದು. ಬೆಲೆಯ ಮಟ್ಟವನ್ನು ಹತೋಟಿಯಲ್ಲಿರಿಸಿಕೊಳ್ಳಲು ನಿಯಂತ್ರಣ ಬೇಕು. ಆದರಿಂದ ಹೆಚ್ಚಿನ ಉಳಿತಾಯವಾಗುವುದು.

## ಅನುಕೂಲ ರಾಜಕೀಯ ಪರಿಸ್ಥಿತಿ

ಆರ್ಥಿಕ ಯೋಜನೆಗಳು ಯಶಸ್ವಿಯಾಗಬೇಕಾದರೆ ಅನುಕೂಲ ರಾಜಕೀಯ ಪರಿಸ್ಥಿತಿಯಿದ್ದು ಆಡಳಿತವು ಸುವ್ಯವಸ್ಥಿತವಾಗಿರಲೇಬೇಕಾಗುವುದು; ಅದಕ್ಕೆ ಈ ಕೆಳಗಿನ ಸಂಗತಿಗಳು ಅತ್ಯವಶ್ಯವೆನ್ನಿಸುವುವು:

(೧) ಧೋರಣೆಯ ಬಗ್ಗೆ ಸಾರ್ವಜನಿಕರಲ್ಲಿ ಸಾಮಾನ್ಯವಾದ ಒಮ್ಮತವಿರಬೇಕು;

(೨) ಸಾರ್ವಜನಿಕರ ಸಹಕಾರದ ಮೇಲೆ ಅವಲಂಬಿಸಿ ಸರಕಾರದ ಕೈಯಲ್ಲಿ ಪರಿಣಾಮಕಾರಿಯಾದ ಅಧಿಕಾರವಿರಬೇಕು; ಗುರಿ ಸಾಧನೆಗಾಗಿ ಆ ಅಧಿಕಾರವು ಧ್ಯೇಯಬದ್ಧವಾಗಿ ಮತ್ತು ಉತ್ಕಟತೆಯಿಂದ ಉಪಯೋಗಿಸಲ್ಪಡಬೇಕು.

(೩) ಯೋಗ್ಯ ಸಾಮರ್ಥ್ಯ ಮತ್ತು ಗುಣಧರ್ಮವುಳ್ಳ ಕಾರ್ಯಕರ್ತರನ್ನೊಳಗೊಂಡ ಆಡಳಿತ ರಚನೆ ಇರಬೇಕು.

ರಾಷ್ಟ್ರದಲ್ಲಿ ರಾಜಕೀಯ ಪಕ್ಷ—ಉಪಪಕ್ಷಗಳು ಎಷ್ಟೇ ಇದ್ದರೂ ಯೋಜನೆಯ ಬಗ್ಗೆ ಅವುಗಳಲ್ಲಿ ಮೂಲಭೂತ ಒಕ್ಕಟ್ಟು ಇರುವುದು ಅವಶ್ಯ. ಈ ಒಕ್ಕಟ್ಟು ಇದ್ದರೇನೇ ಯೋಜನೆಗೆ ದೇಶದ ಆತ್ಮೀಯ ಬಲ ಬರುವುದು. ಅದೇ ಆದರ ಯಶಸ್ಸಿಗೆ ಕಾರಣವಾಗುವುದು. ಧ್ಯೇಯ-ಧೋರಣದ ಬಗ್ಗೆ ಒಮ್ಮತ, ಸುವ್ಯವಸ್ಥಿತವಾದ ಆಡಳಿತ ಯಂತ್ರ ಧ್ಯೇಯಸಾಧನೆಯಲ್ಲಿ ಉತ್ಕಟತೆ, ಪರಿಣಾಮಕಾರಿಯಾದ ಸರಕಾರದ ಸತ್ತೆ, ಮತ್ತು ಸಾರ್ವಜನಿಕರ ಸಹಕಾರ, ಈ ಪಂಚ ಪೋಷಕಾಂಗಗಳು ಕಾರ್ಯಪ್ರವೃತ್ತವಾದರೆ ಯೋಜನೆಯ ಯಶಸ್ಸಿನ ಬಗ್ಗೆ ಸಂದೇಹಪಡುವ ಕಾರಣವೇ ಇಲ್ಲ.

## ಪ್ರಕರಣ ಮೂರು :

# ಸಂಪತ್ ಸಾಮಗ್ರಿಯ ಪರಿವ್ಯಾಪ್ತಿ

ಈ ಪ್ರಥಮ ಪಂಚವಾರ್ಷಿಕ ಯೋಜನೆಯು ೧೯೫೧–೫೬ ರ ಕಾಲಾವಧಿಯಲ್ಲಿ ಒಟ್ಟಿನಲ್ಲಿ ೨೦೬೯ ಕೋಟಿ ರೂಪಾಯಿಗಳನ್ನು ವೆಚ್ಚಮಾಡಬೇಕೆಂದು ಎಣಿಕೆಹಾಕಿದೆ. ಈ ಹಣವನ್ನು ಯಾವ ಯಾವ ಕ್ಷೇತ್ರಗಳಲ್ಲಿ ಎಷ್ಟು ಎಷ್ಟು ವೆಚ್ಚ ಮಾಡಬೇಕೆಂಬುದನ್ನು ನಿರ್ದಿಷ್ಟಪಡಿಸಲಾಗಿದೆ. ಇಡಿ ರಾಷ್ಟ್ರದ ಆರ್ಥಿಕ ಸ್ಥಿತಿಯ ಅಭಿವೃದ್ಧಿಯನ್ನು ಸಾಧಿಸಬೇಕೆಂದು ಮಾಡಿದ್ದರಿಂದ ಸಾರ್ವಜನಿಕ ಕ್ಷೇತ್ರದ ಸಂಪತ್ ಸಾಮಗ್ರಿಯನ್ನು ಲಕ್ಷ್ಯಕ್ಕೆ ತರುವಾಗ ಖಾಸಗೀ ಕ್ಷೇತ್ರಗಳಲ್ಲಿಯ ಸಂಪತ್ತನ್ನೂ ಅಳೆಯುವುದು ಅಗತ್ಯವಾಗುವುದು. ಅಂದರೆ ಒಟ್ಟಿನಲ್ಲಿ ರಾಷ್ಟ್ರಕ್ಕೆ ಸಂಪತ್ ಸಾಮಗ್ರಿ ಎಷ್ಟಿದೆ ಎಂಬುದನ್ನು ತಿಳಿಯಬೇಕಾಗಿದೆಯಲ್ಲದೆ ಎರಡೂ ವಿಭಾಗಗಳು ಎಷ್ಟುಮಟ್ಟಿಗೆ ವೆಚ್ಚದ ಭಾರವನ್ನು ಒಗ್ಗಿಸಿಕೊಳ್ಳಲು ಸಮರ್ಥವಾಗಿವೆಯೆಂಬುದನ್ನು ತಿಳಿಯುವುದು ಅಗತ್ಯವಿದೆ. ಅಂದರೆ ನಿಶ್ಚಿತ ಪ್ರಾಥಮಿಕತೆಯ ಕ್ರಮದನುಸಾರವಾಗಿ ವೆಚ್ಚಮಾಡಲಿಕ್ಕೂ ಒಟ್ಟಿನಲ್ಲಿ ಪ್ರಗತಿ ಸಾಧಿಸಲಿಕ್ಕೂ ಅನುಕೂಲವಾಗುವುದು.

ಆದರೆ ಅಂಕೆ–ಸಂಖ್ಯೆಗಳ ಪ್ರಮಾಣಪಾವಿತ್ರ್ಯವನ್ನರಿಯದ ನಮ್ಮ ದೇಶದಲಿ ಆವಶ್ಯಕವಾದ ಪ್ರಾಮಾಣಿಕವಾದ ಮತ್ತು ನಂಬಲರ್ಹವಾದ ಅಂಕೆ–ಸಂಖ್ಯೆಗಳು ಸಿಕ್ಕುವುದು ದುರ್ಲಭವಾಗಿದೆ. ಯಾವುದನ್ನು ಹೇಳಿದರೂ ಸ್ಥೂಲಮಾನದಿಂದಲೇ ಗುಣಿಸಲ್ಪಟ್ಟದ್ದೆಂದು ತಿಳಿಯಬೇಕಾಗಿದೆ. ೧೯೫೦-೫೧ ರಲ್ಲಿ ಸ್ಥೂಲಮಾನದಿಂದ ರಾಷ್ಟ್ರದ ಉತ್ಪನ್ನವು ಸುಮಾರು ೯೦೦೦ ಕೋಟಿ ರೂಪಾಯಿಗಳೆಂದು ಕಂಡುಬಂದಿದೆಯೆಂದು ಹೇಳಲಾಗಿದೆ. ಇದರಲ್ಲಿ

ಉಳಿತಾಯವೆಂದು ೪೫೦ ಕೋಟಿಗಿಂತ ಹೆಚ್ಚು ಆಗಲಾರದೆಂದೂ ಹೇಳಿಯದೆ. ಈ ಐದು ವರುಷಗಳಲ್ಲಿ ರಾಷ್ಟ್ರದ ಆದಾಯವು ೧೦೦೦೦ ಕೋಟಿ ರೂಪಾಯಿ ಒಟ್ಟಿನಲ್ಲಿ ಹೆಚ್ಚಾಗಬಹುದೆಂದು ಎಣಿಸಲಾಗಿದೆ. ಅಂದರೆ ೧೯೫೫–೫೬ ರಷ್ಟರಲ್ಲಿ ರಾಷ್ಟ್ರದ ಆದಾಯವು ೧೦,೦೦೦ ಕೋಟಿಗಳಷ್ಟಾಗುವುದು. ಆಂತರಿಕ ಉಳಿತಾಯವನ್ನು ಹೆಚ್ಚಿಸುವ ಉದ್ದೇಶದಿಂದ ವಾರ್ಷಿಕ ವೆಚ್ಚದಲ್ಲಿ ೨೦ ಶತಾಂಶದಂತೆ ಪ್ರತ್ಯೇಕಿಸುವ ಉದ್ದೇಶವಿದೆ. ಈ ರೀತಿಯಲ್ಲಿ ಮಾಡಿ-ದಾಗ ಈ ಐದು ವರುಷದ ಅವಧಿಯಲ್ಲಿ ಒಟ್ಟಿನಲ್ಲಿ ಆಂತರಿಕ ಉಳಿತಾಯವು ಸುಮಾರು ೨೮೦೦ ಕೋಟಿಯಷ್ಟಾಗುವುದು. ಇದಕ್ಕೆ ಪೂರಕವಾಗಿ ಸ್ಟರ್ಲಿಂಗ ಉಳಿತಾಯದಿಂದಲೂ ಮತ್ತು ಬೇರೆ ವಿದೇಶಿ ಸಂಪತ್ತಿನಿಂದಲೂ ಸಹಾಯ ಪಡೆಯಲಾಗುವುದು. ಈ ಬಗೆಯಾಗಿ ಬಂದುದು ಸುಮಾರು ೮೦೦ ಕೋಟಿಗಳಷ್ಟಾಗುವುದು. ಅಂದರೆ ಹಣವನ್ನು ತೊಡಗಿಸಲು ಒಟ್ಟಿನಲ್ಲಿ ಸುಮಾರು ೩೬೦೦ ಕೋಟಿ ರೂಪಾಯಿಗಳಷ್ಟು ದೊರೆಯುವುದು.

ಸಾರ್ವಜನಿಕ ಕ್ಷೇತ್ರದ ಅಧಿಕಾರದಿಂದ ವೆಚ್ಚಮಾಡಬೇಕೆಂದಿರುವ ೨೦೬೯ ಕೋಟಿ ರೂಪಾಯಿಗಳಲ್ಲಿ ಸುಮಾರು ೪೦೦ ಕೋಟಿಗಳಷ್ಟು ಸಾಮಾ-ಜಿಕಸೇವೆ, ಕೃಷಿ ಅಭಿವೃದ್ಧಿ ಮುಂತಾದ ಕ್ಷೇತ್ರಗಳಲ್ಲಿಯ ಆವೃತ್ತ ವೆಚ್ಚವಾಗುವುದು. ಈ ವೆಚ್ಚವು ಕೇಂದ್ರ ಮತ್ತು ರಾಜ್ಯಗಳ ಸಾಮಾನ್ಯ ಕಂದಾಯಗಳಿಂದ ಕೊಡಲ್ಪಡಲಾಗುವುದು. ಇದನ್ನು ಒಪ್ಪಿಕೊಂಡರೂ ಸಾರ್ವಜನಿಕ ಕ್ಷೇತ್ರದ ಅಭಿವೃದ್ಧಿ ಕಾರ್ಯಕ್ರಮಕ್ಕೆ ಈ ಕಾಲಾವಧಿಯಲ್ಲಿ ಉಳಿತಾಯವಾಗುವ ಹಣದ ೫೦ ಶತಾಂಶದಷ್ಟು ಹಣವನ್ನು ತೊಡಗಿಸ-ಬೇಕಾಗಿ ಬರುವುದು. ಇದು ಬಹು ದೊಡ್ಡ ಪ್ರಮಾಣವಾಗುವುದು ಉಳಿದ ದೇಶಗಳಲ್ಲಿ ೫೦ ಶತಾಂಶ ವೆಚ್ಚವೆಂದರೆ ಬಹುದೊಡ್ಡ ಪ್ರಮಾಣವೆಂದು ತಿಳಿದರೂ ಭಾರತಕ್ಕೆ ಅಷ್ಟು ಪ್ರಮಾಣ ಅನಿವಾರ್ಯವಾಗುವುದು. ಏಕೆಂದರೆ ಭಾರತದಲ್ಲಿ ನೀರಾವರಿ, ವಿದ್ಯುತ್‌ಶಕ್ತಿ, ಸಾರಿಗೆ ಮುಂತಾದ ಕ್ಷೇತ್ರಗಳಲ್ಲಿಯ ಬೇಡಿಕೆಯು ತೀವ್ರತಮವಾಗಿದೆ. ಈ ಕ್ಷೇತ್ರಗಳಲ್ಲಿ ಖಾಸಗಿ ಸಾಹಸಿಗರು ಸಾಮಾನ್ಯವಾಗಿ ಕೈ ಹಾಕುವುದಿಲ್ಲ. ಆದರೆ ಉತ್ತರೋತ್ತರ ಅಭಿವೃದ್ಧಿಗೆ ಈ ಕ್ಷೇತ್ರಗಳ ಬೆಳಿಗೆಯು ಬುನಾದಿಯಾಗಿದೆ.

ಹಣ ತೊಡಗಿಸಲು ಸಿಕ್ಕುವ ಉಳಿತಾಯದ ಮೊತ್ತವು ಅಷ್ಟು ನಿಶ್ಚಿತ-ವೆಂದೂ ತಿಳಿಯಲಾಗದು. ಕೆಲವೊಂದು ಪರಿಮಿತಿಯಲ್ಲಿ ಸರಕಾರವು ವೆಚ್ಚವನ್ನು ನಿಯಂತ್ರಿಸಬಹುದು; ಸಾಮಾನ್ಯವಾಗಿ ಹೊರಬರಲಾರದ ಹಣವನ್ನು ಆಕರ್ಷಿಸಲೂ ಬಹುದು. ಆದರೆ, ಸಾರ್ವಜನಿಕ ಸಂಸ್ಥೆಗಳ ಉಳಿತಾಯ ಹೆಚ್ಚಾಗಿರದ ಹಿಂದುಳಿದ ರಾಷ್ಟ್ರಗಳಲ್ಲಿ ಸಾರ್ವಜನಿಕ ಉಳಿ-ತಾಯದ ಮೊತ್ತವನ್ನು ಹೆಚ್ಚಿಸಲು ಕರಭಾರ ಹೆಚ್ಚಿಸುವುದೊಂದೇ ಉಪಾಯ ವಾಗುವುದು. ಭವಿಷ್ಯತ್‌ಕಾಲದ ಮೇಲೆ ಕಣ್ಣಿಟ್ಟು ನೋಡಿದರೆ ಕರಭಾರ ಹೆಚ್ಚಿಸುವುದು ಅಭಿವೃದ್ಧಿಗಾಗಿ ಅನಿವಾರ್ಯವೆಂದು ಕಂಡುಬರುವುದು. ಈ ಯೋಜನೆಯ ಕಾಲಾವಧಿಯಲ್ಲಿಯೂ ಕೆಲ ಪ್ರಮಾಣದಲ್ಲಿ ಕರದ ಹೆಚ್ಚಳ-ವಾಗುವುದು ಅಗತ್ಯವೆನ್ನಿಸುವುದು.

೧೯೫೦–೫೧ ರಲ್ಲಿ ಕೇಂದ್ರ ಮತ್ತು ರಾಜ್ಯಗಳ ಕರಗಳ ಆದಾಯದ ಮೊತ್ತವು ೬೨೫ ಕೋಟಿ ರೂಪಾಯಿಗಳಷ್ಟಿತ್ತು. ರಾಷ್ಟ್ರದ ಆದಾಯದ ದೃಷ್ಟಿಯಿಂದ ಈ ಮೊತ್ತವು ೭ ಶತಾಂಶದಷ್ಟಾಗುವುದು; ಈ ಪ್ರಮಾಣವು ಇಡಿ ಪ್ರಪಂಚದಲ್ಲಿಯೆ ತೀರ ಕೆಳವಟ್ಟದ್ದು ಆಗಿರುತ್ತದೆ. ತುಲನಾತ್ಮಕ-ವಾಗಿ ನೋಡಿದರೆ ಇಂಗ್ಲಂಡದಲ್ಲಿ ೩೫ ಶತಾಂಶದಷ್ಟಿದೆ, ಜಪಾನದಲ್ಲಿ ೨೩ ಶತಾಂಶ, ಆಸ್ಟ್ರೇಲಿಯಾದಲ್ಲಿ ೨೨ ಶತಾಂಶ, ಸಿಂಹಳದಲ್ಲಿ ೨೦ ಶತಾಂಶ ದಷ್ಟಿದೆ. ನಮ್ಮ ದೇಶದಲ್ಲಿನ ಸರಾಸರಿ ಆದಾಯದ ದೃಷ್ಟಿಯಿಂದ ನಮ್ಮ ದೇಶದ ಪ್ರಮಾಣವು ತೀರ ಕಡಿಮೆಯೆಂದೆನ್ನಿಸದಿದ್ದರೂ ಅದನ್ನು ಅಲಕ್ಷಿಸು-ವಂತಿಲ್ಲ. ಯಾಕೆಂದರೆ, ರಾಷ್ಟ್ರದ ಆದಾಯದಲ್ಲಿ ಕರದ ಆದಾಯದ ಈ ಪ್ರಮಾಣ ಇಷ್ಟು ಕೆಳಮಿತಿಯಲ್ಲಿಯೆ ಮುಂದೆಯೂ ಉಳಿಯುವುದಾದರೆ, ರಾಷ್ಟ್ರದ ಆರ್ಥಿಕ ವ್ಯವಸ್ಥೆಯಲ್ಲಿ ಹಣ ತೊಡಗಿಸುವ ಮಟ್ಟವನ್ನು ಏರಿಸಲು ಸಾರ್ವಜನಿಕ ಉಳಿತಾಯವನ್ನು ಸಾಕಷ್ಟು ಹೆಚ್ಚಿಸುವ ಆಸೆಯೆ ಉಳಿಯದು.

ಭಾರತದ ಸದ್ಯದ ಕರಭಾರದ ರಚನೆಯ ಮುಖ್ಯ ಲಕ್ಷಣವೆಂದರೆ ಜನಸಂಖ್ಯೆಯಲ್ಲಿ ತೀರ ಕಡಿಮೆ ಪ್ರಮಾಣದಲ್ಲಿ ಜನ ಕರದಿಂದ ಬಾಧಿಸಲ್ಪ-ಟ್ಟಿದ್ದಾರೆ. ಒಟ್ಟು ಕರ ಆದಾಯದಲ್ಲಿಯ ಸುಮಾರು ೨೮ ಶತಾಂಶದಷ್ಟು ಪ್ರತ್ಯಕ್ಷ ಕರದಿಂದ ( ಇದರಲ್ಲಿ ಭೂಕಂದಾಯ ಸೇರಿಲ್ಲ ) ಬರುವುದು. ಇದು

೩ ಶತಾಂಶದಷ್ಟು ಕಾರ್ಯನಿರತ ಜನಸಂಖ್ಯೆಯನ್ನು ಮಾತ್ರ ಬಾಧಿಸುತ್ತದೆ. ಸುಮಾರು ೧೭ ಶತಾಂಶದಷ್ಟು ಆಯಾತಕರದಿಂದ ಬರುವುದು. ಈ ಕರವು, ಮೋಟರು, ಉಚ್ಚತರಗತಿಯ ತಂಬಾಕು, ರೇಶಿಮೆ, ರೇಶಿಮೆಸರಕು, ಮದ್ಯ, ಸರೆ ಮುಂತಾದ ಪದಾರ್ಥಗಳನ್ನು ಬಳಸುವವರಿಂದ ಬರುವುದಾದ್ದರಿಂದ ಜನಸಂಖ್ಯೆಯಲ್ಲಿ ತೀರ ಸಂಕುಚಿತ ಕ್ಷೇತ್ರಕ್ಕೆ ಅದು ತಟ್ಟುವುದು. ಆದರೆ ಭೂಕಂದಾಯವು— ಯುದ್ಧಪೂರ್ವದಲ್ಲಿ ರೈತನಿಗೆ ಅತಿ ಭಾರವಾಗಿದ್ದು ೧೯೩೯ ರಲ್ಲಿ ೩೯ ಶತಾಂಶ ಬರುತ್ತಿದ್ದರೆ,— ಈಗ ರಾಷ್ಟ್ರದ ಕರ ಆದಾಯದ ೮ ಶತಾಂಶದಷ್ಟು ಮಾತ್ರ ಬರುತ್ತಿದೆ. ಈ ದಿಕ್ಕಿನಲ್ಲಿ ಹೇಳಿಕೊಳ್ಳುವಷ್ಟು ಪ್ರಮಾಣದಲ್ಲಿ ಕರ ಆದಾಯ ಬೆಳೆಯದೆ ಇದ್ದರೂ ಕರವಿಮರ್ಶೆಯಾದರೆ, ಸಾಕಷ್ಟು ಬೆಳೆಯಲು ಆಸ್ಪದವಿದೆ. ಕರಭಾರವು ಹೀಗೆ ಕಡಿಮೆಯಾಗಿರುವುದರಿಂದ— ಇದೇ ಹೆಚ್ಚು ಭಾರವೆಂದೂ ತಿಳಿಯಲಾಗಿದೆ— ಸಾರ್ವಜನಿಕ ಉಳಿತಾಯದಲ್ಲಿ ಬೆಳಿಗೆ ಸಾಧಿಸಿಲ್ಲ. ರಾಷ್ಟ್ರದ ಆದಾಯದಲ್ಲಿ ವಾರ್ಷಿಕವಾಗಿ ಆಗುವ ೫ ಶತಾಂಶದಷ್ಟರಿಂದಲೇ ಅಭಿವೃದ್ಧಿಯು ದುಸ್ಸಾಧ್ಯವಾಗುವುದೆಂದು ತಿಳಿದಮೇಲೆ ಪ್ರಚಲಿತ ಪರಿಸ್ಥಿತಿಯನ್ನು ಮಾರ್ಪಡಿಸದೆ ಗತ್ಯಂತರವಿಲ್ಲವೆಂಬುದು ಸ್ಪಷ್ಟವಾಗುವುದು. ಯೋಜನೆಯ ಮೊದಲಿನ ಅವಸ್ಥೆಗಳಲ್ಲಿ, ರಾಜಕೀಯ ಮತ್ತು ಆರ್ಥಿಕ ರಚನೆಯಿಂದ ಪರಿಮಿತವಾದ ವಾತಾವರಣವನ್ನು ಮನದಂದು, ಅಸ್ತಿತ್ವದಲ್ಲಿದ್ದ ಆಡಳಿತ ಮತ್ತು ರಾಜ್ಯಾದಾಯದ ಯಂತ್ರವನ್ನು ಲಕ್ಷಿಸಿ, ಸಂಪತ್ಸಾಮಗ್ರಿಯನ್ನು, ಕಾರ್ಯಕ್ರಮದ ಪರಿವ್ಯಾಪ್ತಿಯನ್ನು ನಿಶ್ಚಿತಗೊಳಿಸುವುದು ಅಗತ್ಯ. ಅಭಿವೃದ್ಧಿ ಯೋಜನೆಯ ಆವಶ್ಯಕತೆಗಳನ್ನು ಅನುಲಕ್ಷಿಸಿ ಕರ ಆದಾಯವನ್ನು ಹೆಚ್ಚಿಸುವ ಹಂಚಿಕೆ ಹಾಕುವುದು ಆವಶ್ಯಕವೆನ್ನಿಸಿದರೂ ಪ್ರಸ್ತುತ ಸಾಮಾಜಿಕ ಮತ್ತು ಆರ್ಥಿಕ ರಚನಾಬಂಧನಕ್ಕೆ ಅದು ಹೊಂದಿಕೊಂಡು ಹೋಗುವಂತೆ ಮಾಡುವುದೂ ಅಷ್ಟೇ ಆವಶ್ಯಕವಾಗಿದೆ.

ಸಾರ್ವಜನಿಕ ಕ್ಷೇತ್ರದಲ್ಲಿಯ ಯೋಜನೆಯ ವೆಚ್ಚವೆಂದು ಗೊತ್ತುಮಾಡಲಾದ ೨೦೬೯ ಕೋಟಿ ರೂಪಾಯಿಗಳ ಸಂಪತ್ಸಾಧನಗಳ ವಿವರ ಹೀಗಿದೆ:

| | | ಕೋಟಿ ರೂಪಾಯಿ |
|---|---|---|
| (i) | ಅಭಿವೃದ್ಧಿ ವೆಚ್ಚವೆಂದಾಗಿರದ ಬೇರೆ ವೆಚ್ಚವನ್ನು ಮಾಡಿ ಕೇಂದ್ರ ಮತ್ತು ರಾಜ್ಯಗಳ (ರೇಲ್ವೆ ಸೇರಿ) ವಾರ್ಷಿಕ ಕಂದಾಯದಲ್ಲಿಯ ಉಳಿತಾಯ : | ೭೩೮ |
| (ii) | ಆಂತರಿಕ ಸಾಲ, ಕಿರಿ ಉಳಿತಾಯ ಮುಂತಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಮಾಡಿದ ಹಣ : | ೫೭೦ |
| (iii) | ಸ್ಟರ್ಲಿಂಗ ಉಳಿತಾಯದ ಮೇಲೆ ಮಾಡಲಾದ ಕೊರತೆ ಹಣಕಾಸಿನ ವ್ಯವಸ್ಥೆಯಿಂದ : | ೨೯೦ |
| (iv) | ಇದುವರೆಗೆ ದೊರೆತ ವಿದೇಶೀ ಸಹಾಯದಿಂದ : | ೧೫೬ |
| (v) | ಇನ್ನು ಮುಂದೂ ದೊರೆಯಬಹುದಾದ ವಿದೇಶೀ ಸಹಾಯದಿಂದ ಇಲ್ಲವೆ ಆಂತರಿಕವಾಗಿ ಕರಭಾರ ಹೆಚ್ಚಿಸಿ ಮತ್ತು ಸಾಲ ತೆಗೆದು ಮತ್ತು ಕೊರತೆ ಹಣಕಾಸಿನ ವ್ಯವಸ್ಥೆ ಮಾಡಿ | ೩೬೫ |
| | ಒಟ್ಟು | ೩೧೬೯ |

ಮೇಲೆ ವಿವರಿಸಿದ (i) ಮತ್ತು (ii) ರಲ್ಲಿಯ ಮುಂಗಾಣಿಯ ಅಂಕೆಗಳನ್ನು ಕಳೆದ ಹಿಂದಣ ಒಂದು ವರುಷದ ಪ್ರತ್ಯಕ್ಷ ಅಂಕೆಗಳಿಂದಲೆ ತಿಳಿಯಬಹುದು. (i) ರ ಸಂಬಂಧವಾಗಿ ೧೯೫೦–೫೧ ರಲ್ಲಿ ಪ್ರಚಲಿತ ಆದಾಯದಲ್ಲಿಯ ಉಳಿತಾಯವೆಂದು ಸುಮಾರು ೧೪೫ ಕೋಟಿ ಆಗಿತ್ತು. ಆ ವರುಷದ ಮಟ್ಟವೇ ಈ ಐದು ವರುಷದಲ್ಲಿ ಉಳಿಯುವುದೆಂದು ತಿಳಿದು ಗುಣಿಸಲಾಗಿದೆ. ಉಳಿತಾಯವು ಹೆಚ್ಚಾಗದೇ ಅದೇ ಮಟ್ಟಕ್ಕೆ ಉಳಿಯುವು-ದೆಂಬುದಕ್ಕೆ ಎರಡು ಕಾರಣಗಳಿವೆ : ಒಂದು ಆ ವರುಷದಲ್ಲಿ ನಿರ್ಯಾತ ಕರವು ಹೆಚ್ಚಾಗಿತ್ತು. ಎರಡನೆಯದಾಗಿ, ಆ ವರುಷದಿಂದ ಇತ್ತೀಚೆ ಸಂರಕ್ಷಣ ವೆಚ್ಚದಲ್ಲಿ ಸಾಕಷ್ಟು ಹೆಚ್ಚಳವಾಗಿದೆ. ಈ ಎರಡೂ ಮಾತುಗಳನ್ನು ಲಕ್ಷಿಸಿ, ತುಸು ಹೆಚ್ಚಿನ ಕರಭಾರವನ್ನು ಗಮನಿಸಿ ಉಳಿತಾಯವು ಅದೇ ಮಟ್ಟಕ್ಕೆ ಸುಮಾರಾಗಿ ಉಳಿಯುವುದೆಂದು ಅಂದಾಜು ಮಾಡಲಾಗಿದೆ. ಕಳೆದ ವರುಷ

ಮಾಡಿದ ಅಂದಾಜು ಪಟ್ಟಿಯಿಂದ ಈ ಐದು ವರುಷಗಳಲ್ಲಿ ರಾಜ್ಯ ಸರಕಾರ-ಗಳು ಸುಮಾರು ೨೩೨ ಕೋಟಿ ರೂಪಾಯಿಗಳಷ್ಟು ಹೆಚ್ಚಿನ ಆದಾಯ ಮಾಡಿಕೊಳ್ಳಬೇಕಾಗಿದೆ. ಇದನ್ನು ಸಾಧಿಸುವುದಕ್ಕೆ, ರಾಜ್ಯ ಸರಕಾರಗ-ಳೊಡನೆ ವಿಚಾರವಿನಿಮಯ ಮಾಡಿ ಈ ಕೆಳಗಿನ ಉಪಾಯಯೋಜನೆ-ಗಳನ್ನು ನಿಶ್ಚಿತಗೊಳಿಸಲಾಗಿದೆ:

| | | ಕೋಟಿ ರೂಪಾಯಿ |
|---|---|---|
| (೧) | ಭೂಕಂದಾಯ (ಭೂಕಂದಾಯ ಮತ್ತು ಕೃಷಿ ಆದಾಯ ಕರ ಸೇರಿ) | ೩೪·೦ |
| (೨) | ನೀರಾವರಿ ಕಂದಾಯ (ನೀರಾವರಿ ತೆರಿಗೆ ಮತ್ತು ಅಭಿವೃದ್ಧಿ ಲೆವ್ಹಿ ಸೇರಿ) | ೨೯·೫ |
| (೩) | ಸರಕಾರದ ಬೇರೆ ವ್ಯಾಪಾರಿಕ ಕಾರ್ಯ (ಅರಣ್ಯ, ವಿದ್ಯುತ್, ಮತ್ತು ಖನಿಜ)ಗಳಿಂದ | ೪·೮ |
| (೪) | ಬಂಡವಲಿನ ಹಸ್ತಾಂತರ (ಆಸ್ತಿಕರ) ದಿಂದ | ೨೧·೩ |
| (೫) | ಸಾಮಾನ್ಯ ವ್ಯಾಪಾರಿಕ ಚಟುವಟಿಕೆಗಳ ಮೇಲಿನ ಕರ (ಮಾರಾಟಕರ) ದಿಂದ | ೨೫·೫ |
| (೬) | ಇತರ ಉಗಮ (ವಿಷಾರಾಮದ ಮೇಲಿನ ಕರ) ಗಳಿಂದ | ೩೭·೫ |
| (೭) | ಅಭಿವೃದ್ಧಿ ವೆಚ್ಚವೆಂದಾಗದ ವೆಚ್ಚದಲ್ಲಿ ಉಳಿತಾಯದಿಂದ | ೧೨·೪ |
| | | ೧೬೫·೦ |

ಇನ್ನೂ ೬೭ ಕೋಟಿ ರೂಪಾಯಿಗಳನ್ನು ಕೂಡಿಸಬೇಕಾಗುವುದೆಂದು ಇದರಿಂದ ಕಂಡುಬರುವುದೇನೋ ನಿಜ. ಆದರೆ ಈ ಹಣವು ರಾಜ್ಯಸರಕಾರಗಳ ಹೆಚ್ಚಿದ ಅಭಿವೃದ್ಧಿ ಬೇಡಿಕೆಗಳ ಮೂಲಕವಾಗಿಯೆ ಇರುವುದರಿಂದ ರಾಜ್ಯಸರಕಾರಗಳು ತಮ್ಮ ಹೊಣೆಯ ಮೇಲೆ ಅಷ್ಟು ಕೂಡಿಸಬೇಕೆಂಬ ತಿಳಿವಳಿಕೆಯ ಮೇಲೆ ಇದನ್ನು ಒಟ್ಟಿನಲ್ಲಿ ಸೇರಿಸಿ ೨೩೨ ಕೋಟಿ ಎಂದು ಮಾಡಲಾಗಿದೆ.

(ii) ನೆಯ ವಿಷಯುವಾಗಿ ಮಾತನಾಡುವುದಾದರೆ, ಸಾಲ, ಕಿರಿ ಉಳಿತಾಯ, ಠೇವು ಮತ್ತು ಫಂಡು ಮತ್ತು ಇತರ ಆರ್ಥಿಕ ಉಗಮಗಳು ೧೯೫೦-೫೧ ರ ಮಟ್ಟದಕಿಂತಲೂ ಸುಧಾರಿಸುವುವೆಂದು ಆಶಿಸಲಾಗಿದೆ. ಆಗ ನಿಕ್ಕಿ ಆದಾಯುವು ೭೭ ಕೋಟಿ ರೂಪಾಯಿಗಳಷ್ಟಿತ್ತು. ಯೋಜನೆಯ ಕಾಲಾವಧಿಯಲ್ಲಿ ಈ ದಿಕ್ಕಿನಿಂದ ಸುಮಾರು ೫೨೦ ಕೋಟಿ ಕೂಡುವುದೆಂದು ಗಣಿಸಲಾಗಿರುವುದು. ಅಂದರೆ ವರುಷಕ್ಕೆ ಸರಾಸರಿ ೪೩ ಕೋಟಿ ಹೆಚ್ಚಳವಾಗುತ್ತಹೋಗುವುದೆಂದು ಆಶಿಸಲಾಗಿದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಸಾಲ ತೆಗೆಯುವ ಕಾರ್ಯಕ್ರಮದಿಂದ ೩೮೫ ಕೋಟಿ ಕೂಡಿಸಬೇಕಾಗುವುದು. ೧೯೫೦-೫೧ ರಲ್ಲಿ ೩೯ ಕೋಟಿ ಮಾತ್ರ ಈ ಕಾರ್ಯದಿಂದ ದೊರಕಿದೆಯೆಂದು ತಿಳಿದರೆ ಕೂಡಿಸಬೇಕಾದ ಹಣದ ಮೊತ್ತವು ಬಹು ದೊಡ್ಡದೆಂದು ಅನ್ನಿಸುವುದು. ೧೯೫೦-೫೧ ರಲ್ಲಿ ಅಷ್ಟು ಕಡಿಮೆ ಪ್ರಮಾಣದಲ್ಲಿರುವುದಕ್ಕೆ ಕೋರಿಯದ ಯುದ್ಧವು ಕಾರಣ. ಕಿರಿಉಳಿತಾಯುವು ಸುಧಾರಿಸುತ್ತ ನಡೆದಿದೆಯೆಂಬುದಕ್ಕೆ ೧೯೫೦-೫೧ ರ ಪ್ರತ್ಯಕ್ಷ ಅಂಕೆಗಳೂ ೫೨-೫೩ ರ ಮುಂಗಾಣಿಯ ಅಂಕೆಗಳೂ ಸಾಕ್ಷಿಯಾಗಿವೆ. ೧೯೫೦-೫೧ ರಲ್ಲಿ ೩೩.೫ ಕೋಟಿಗಳಷ್ಟಿದ್ದರೆ, ೧೯೫೨-೫೩ ರಲ್ಲಿ ೪೪.೫ ಕೋಟಿಗಳಷ್ಟಾಗಿದೆ. ಉಳಿದ ಕ್ಷೇತ್ರಗಳಲ್ಲಿಯ ಲೆಕ್ಕಗಳನ್ನು ಕೂಡಿಸಿದರೆ, ವಾರ್ಷಿಕವಾಗಿ ೫೪ ಕೋಟಿಗಳಷ್ಟು ದೊರೆಯುವುದೆಂದು ಕಂಡುಬಂದಿದೆ. ರಾಜ್ಯಸರಕಾರಗಳು ಕಿರಿಉಳಿತಾಯದಿಂದ ಗುರಿ ಅಂಕೆಯಾದ ೪೪.೫ ಕೋಟಿಗಿಂತ ಹೆಚ್ಚು ಕೂಡಿಸಿದ್ದನ್ನು ಅವು ತಮ್ಮ ಹತ್ತಿರವೇ ಇಟ್ಟುಕೊಳ್ಳಬೇಕೆಂದು ಒಪ್ಪಂದವಾಗಿದೆ. ಇದರಿಂದ ಕಿರಿ ಉಳಿತಾಯದ ಆಂದೋಲನಕ್ಕೆ ತೇಜ ಬರುವುದೆಂದು ಎಣಿಸಲಾಗಿದೆ.

ಪ್ರಾವಿಡೆಂಟ ಫಂಡಿನ ಬೆಳಗೆಯೂ ಸಹಾಯಕವಾಗುವುದು. ಇತ್ತೀಚೆ ಗೊತ್ತುಮಾಡಿದ ಆರು ಮುಖ್ಯ ಉದ್ಯಮಗಳ ಕಾರ್ಮಿಕರಿಗೆ ಪ್ರಾವಿಡೆಂಟ ಫಂಡ ಯೋಜನೆಯನ್ನು ಅನ್ವಯಿಸಿದ್ದರಿಂದ ಉಳಿತಾಯಕ್ಕೆ ದೊಡ್ಡ ದಾರಿ ಮಾಡಿಕೊಟ್ಟಿದೆ.

ಈಗ ಕಂಡುಕೊಳ್ಳಲಾದ ವೆಚ್ಚವನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳಲ್ಲಿ ಯೋಜನೆಯ ಕಾಲಾವಧಿಯಲ್ಲಿ ಈ ಕೆಳಗಿನಂತೆ ವಿತರಣ ಮಾಡಲಾಗಿದೆ :

| | ಮೂಲ ವರುಷ ೧೯೫೦-೫೧ | | | ಯೋಜನೆಯ ಅವಧಿ ೧೯೫೧-೫೬ | | |
|---|---|---|---|---|---|---|
| | ಕೇಂದ್ರ 'ಕ' ರಾಜ್ಯಗಳು ಸೇರಿ | 'ಅ' 'ಬ' ರಾಜ್ಯಗಳು ಮತ್ತು ಕಾಶ್ಮೀರ | ಒಟ್ಟು | ಕೇಂದ್ರ 'ಕ' ರಾಜ್ಯಗಳು ಸೇರಿ | 'ಅ' 'ಬ' ರಾಜ್ಯಗಳು ಮತ್ತು ಕಾಶ್ಮೀರ | ಒಟ್ಟು |
| ಸಾರ್ವಜನಿಕ ಉಳಿತಾಯ | | | | | | |
| (ಅ) ಪ್ರಚಲಿತ ಕಂದಾಯ | ೭೧ | ೫೧ | ೧೨೨ | ೧೬೦ | ೪೦೮ | ೫೬೮ |
| (ಬ) ರೇಲ್ವೆ | ೨೩ | — | ೨೩ | ೧೭೦ | — | ೧೭೦ |
| ಸರಕಾರ ಪಡೆವ ಖಾಸಗಿ ಉಳಿತಾಯ | | | | | | |
| (ಅ) ಸಾರ್ವಜನಿಕರಿಂದ ಸಾಲ | —೧೧ | +೮ | —೩ | ೩೬ | ೭೯ | ೧೧೫ |
| (ಬ) ಕಿರಿ ಉಳಿತಾಯ ಮತ್ತು ಫಂಡಲ್ಲದ ಸಾಲ | ೪೨ | — | ೪೨ | ೨೭೦ | — | ೨೭೦ |
| (ಕ) ಠೇವು ಫಂಡುಗಳು ಮತ್ತು ಇತರ | — | ೩೮ | ೩೮ | ೯೦ | ೪೫ | ೧೩೫ |
| ಒಟ್ಟು | ೧೨೫ | ೯೭ | ೨೨೨ | ೭೨೬ | ೫೩೨ | ೧೨೫೮ |

(ರೂಪಾಯಿ—ಕೋಟಿಯಲ್ಲಿ)

ಯೋಜನೆಯ ಕಾಲಾವಧಿಯಲ್ಲಿ ಕೇಂದ್ರದಿಂದ ರಾಜ್ಯಗಳಿಗೆ ಅನೇಕ ಮುಖವಾಗಿ ಸಹಾಯಧನ ಬರುತ್ತದೆ. ಶಾಸನಿಕವಾಗಿ ಗ್ರ್ಯಾಂಟುಗಳೆಂದು ಬರುವುದಲ್ಲದೆ, ರಾಜ್ಯಗಳು ಸೆಂಟ್ರಲ್ ರೋಡ ಫಂಡಿನಿಂದ, ಸ್ಥಾನಭ್ರಷ್ಟ-ರಾದವರಿಗೆ ಪರಿಹಾರವೆಂದು, ಆಹಾರ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಸಹಾಯಧನವೆಂದು, ನದೀಕೊಳ್ಳದ ಯೋಜನೆಗಳಿಗೆ ನೆರವು ಎಂದು, ಚಿಕ್ಕ ನೀರಾವರಿ, ಸಮಾಜ ವಿಕಾಸಯೋಜನೆ, ಕೈಗಾರಿಕೆ, ಮತ್ತು ಕಿರಿ ಉದ್ಯಮ-ಗಳು ಮತ್ತು ಬೇರೆ ಅಭಿವೃದ್ಧಿ ಯೋಜನೆಗಳಿಗೆ ಸಹಾಯವೆಂದು ಬರುವುದು. 'ಕೇಂದ್ರ' ಮತ್ತು 'ರಾಜ್ಯ' ಯೋಜನೆಗಳೆಂದು ವರ್ಗೀಕರಣಮಾಡಿದ್ದರಿಂದ ಸಾರ್ವಜನಿಕ ಕ್ಷೇತ್ರದಲ್ಲಿಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ರಾಜ್ಯಗಳ ಪಾಲು ಮತ್ತು ಕೇಂದ್ರದ ಸಹಾಯ ವ್ಯಾಪ್ತಿ—ಗಾತ್ರ ಎಷ್ಟು ಎಂಬುದು ಅಷ್ಟು ಪೂರ್ಣವಾಗಿ ಸ್ಪಷ್ಟವಾಗದು. ವಿವಿಧೋದ್ದೇಶ ನದೀಕೊಳ್ಳದ ಯೋಜನೆಗಳು (ದಾಮೋದರಕೊಳ್ಳ, ಭಾಕ್ರಾನಂಗಾಲ, ಹಿರಾಕುಡ, ಹರಿಕೆ ಯೋಜನೆಗಳು) ನಿಜವಾಗಿಯೂ ಆಯಾರಾಜ್ಯದ ಯೋಜನೆಗಳೇ ಆದರೂ ಕೆಲವು ಒಂದೊಂದು ರಾಜ್ಯದಾಚೆ ಹಬ್ಬಿರುವುದರಿಂದಲೂ ಮೂಲಧನವನ್ನು ಸಾಲವಾಗಿ ಕೇಂದ್ರವು ಕೊಡಬೇಕಾಗಿ ಬಂದಿರುವುದರಿಂದಲೂ ಮತ್ತು ಆಯಾ ರಾಜ್ಯಗಳ ಅಂತಿಮ ಆರ್ಥಿಕ ಹೊಣೆಗಾರಿಕೆಯು ನಿಶ್ಚಿತಗೊಳಿಸಲು ಸಾಧ್ಯ-ವಾಗಿಲ್ಲವಾದ್ದರಿಂದಲೂ ಇವು 'ಕೇಂದ್ರ'ದ ಯೋಜನೆಗಳೆಂದು ವರ್ಗೀಕರಿ-ಸಲ್ಪಟ್ಟಿವೆ. ಇಂತಹ ಬೇರೆ ಯೋಜನೆಗಳಲ್ಲಿ ಎಲ್ಲಿ ಆರ್ಥಿಕ ಹೊಣೆಗಾರಿಕೆ ಗಳು ನಿಶ್ಚಿತವಾಗಿ ಗೊತ್ತುಮಾಡಲು ಸಾಧ್ಯವಿಲ್ಲವೊ ಅಂತಹ—ಸಮಾಜ ವಿಕಾಸ ಯೋಜನೆಗಳು, ಕಿರಿ ನೀರಾವರಿ ಕೆಲಸಗಳು, ಔದ್ಯಮಿಕ ವಸತಿ ನಿರ್ಮಾಣ, ಮುಂತಾದವುಗಳು ಪ್ರಾಥಮಿಕವಾಗಿ ರಾಜ್ಯಗಳಿಗೆ ಸಂಬಂಧಿ-ಸಿದ್ದರೂ ಕೇಂದ್ರದ ಅಭಿವೃದ್ಧಿ ಯೋಜನೆಗಳೆಂದು ಕಾಣಿಸಲಾಗಿದೆ. ಈ ವರ್ಗೀಕರಣದ ತಳಹದಿಯ ಮೇಲಿಂದ ಪಂಚವಾರ್ಷಿಕ ಯೋಜನೆಯ ಒಟ್ಟು ವೆಚ್ಚ—೨೦೬೯ ಕೋಟಿ ರೂಪಾಯಿ—ದಲ್ಲಿ ರಾಜ್ಯಗಳ ಪಾಲು ಸುಮಾರು ೮೦೦ ಕೋಟಿಗಳಷ್ಟು ಇದೆ. ಅವರಂತೆ ಕೇಂದ್ರದ ಸಹಾಯಧನವು ೯೩ ಕೋಟಿಯೆಂದು ಗುಣಿಸಲಾಗಿದೆ. ಈ ಕೆಳಗಿನ ಪಟ್ಟಿಯಿಂದ ಕೇಂದ್ರ ಮತ್ತು ರಾಜ್ಯಗಳ ವೆಚ್ಚದ ಭಾರವನ್ನು ತಿಳಿಯಬಹುದಾಗಿದೆ.

| | ೧೯೫೦-೫೧ | ೧೯೫೧-೫೬ |
|---|---|---|
| | ಕೋಟಿ ರೂಪಾಯಿಗಳು | |
| (೧) 'ಅ' 'ಬ' ರಾಜ್ಯಗಳು ಮತ್ತು ಕಾಶ್ಮೀರಗಳ ಸಂಪತ್ಸಾಮಗ್ರಿ: | ೯೭ | ೫೩೨ |
| (೨) ಕೇಂದ್ರದ ಸಹಾಯಧನ | ೩೧ | ೧೯೩+೪ |
| (೩) ಅಭಿವೃದ್ಧಿಗಾಗಿ ಉಪಲಬ್ಧವಿದ್ದ ಒಟ್ಟು ಸಂಪತ್ಸಾಮಗ್ರಿ | ೧೨೮ | ೨೭೯ |
| (೪) ರಾಜ್ಯಗಳ ಯೋಜನೆಗಳಲ್ಲಿಯಂತೆ ಅಭಿವೃದ್ಧಿ ವೆಚ್ಚ | ೧೧೮ | ೭೯೬ |
| (೫) ಹೆಚ್ಚಳ (+) ಕೊರತೆ (—) | + ೧೦ | —೬೭ |

* ಇದರಲ್ಲಿ ಕಾಶ್ಮೀರ ರಾಜ್ಯದ ಯೋಜನೆಯ ೧೦ ಕೋಟಿ ರೂಪಾಯಿ ಸಮಾವೇಶವಾಗಿದೆಯಲ್ಲದೆ ಅಸಾಮ ರಾಜ್ಯದ ಕೋಷ್ಟಕಿತ ಪಂಗಡಗಳಿಗಾಗಿ ೪ ಕೋಟಿ ರೂಪಾಯಿಗಳೂ ಸೇರಿವೆ.

ಕಳೆದ ಎರಡು ವರುಷಗಳಿಂದ ರಾಜ್ಯಸರಕಾರಗಳ ಆದಾಯವು ಹೆಚ್ಚುತ್ತಲಿದೆ; ಆದರೆ ರಾಜ್ಯಗಳ ಯೋಜನೆಯಾಚೆಯ ವೆಚ್ಚವೂ ಹೆಚ್ಚುತ್ತ ಲಿದೆ. ಇದು ತುಸುಮಟ್ಟಿಗೆ ಆಡಳಿತದ ವೆಚ್ಚದ ಹೆಚ್ಚಳದ ಮೂಲಕ-ವಾಗಿದೆ. ಅಲ್ಲದೆ, ಕೃಷಿ, ಶಿಕ್ಷಣ, ಆರೋಗ್ಯ ಮೊದಲಾದ ವಿಭಾಗಗಳಲ್ಲಿಯೂ ವೆಚ್ಚದ ಹೆಚ್ಚಳವಾಗಿದೆ. ಯೋಜನೆಯಲ್ಲಿ ಗೊತ್ತುಮಾಡಿದ ಅಭಿವೃದ್ಧಿ ಕಾರ್ಯಕ್ರಮಗಳಲ್ಲದೆ ಇನ್ನು ಬೇರೆ ಕಾರ್ಯಗಳ ಯೋಜನೆಯನ್ನು ಕೈಕೊಳ್ಳುವುದರ ಕಡೆಗೆ ಒಲವೂ ತೋರಲಿದೆ. ಈ ವಿಭಾಗದಲ್ಲಿ ಕಾರ್ಯ ನಡೆದಷ್ಟು ಮಟ್ಟಿಗೆ, ಮತ್ತು ಅಭಿವೃದ್ಧಿ ವೆಚ್ಚವೆಂದಲ್ಲದ ವೆಚ್ಚದ ನಿಯಂತ್ರಣ ನಡೆಯದ ಮಟ್ಟಿಗೆ ಒಟ್ಟಿನಲ್ಲಿ ವೆಚ್ಚದ ಹೆಚ್ಚಳ ಕಂಡುಬರುತ್ತಿದೆ. ಆ ಕಾರಣದ ಮೂಲಕ ಪಂಚವಾರ್ಷಿಕ ಯೋಜನೆಯಲ್ಲಿಯ ರಾಜ್ಯಸರಕಾರಗಳ ಯೋಜನೆಗೆ ತುಸ ಪೆಟ್ಟು ತಗಲುವುದು. ಈ ಸಂದರ್ಭದಲ್ಲಿ ಕೇಂದ್ರವು ನೆರವಾಗಬೇಕೆಂದರೆ ಕೇಂದ್ರದ ಸಹಾಯ ಮಾಡುವ ಶಕ್ತಿಯಾದರೂ ಮಿತವಾಗಿದೆಯೆಂಬುದನ್ನು ಮರೆಯಲಾಗದು. ಇದ್ದಕ್ಕಿದ್ದ ಹಾಗೆಯೆ ಯೋಜನೆಯ

ಒಟ್ಟು ವೆಚ್ಚವಾದ ೨೧೮೯ ಕೋಟಿ ರೂಪಾಯಿಗಳಲ್ಲಿ ೩೬೫ ಕೋಟಿಗಳಷ್ಟು ಕೊರತೆಯಿದೆ. ಆದುದರಿಂದ ರಾಜ್ಯಸರಕಾರಗಳು ತಮ್ಮ ಆದಾಯ ಹೆಚ್ಚಿಸುವುದಕ್ಕೆ ಒಪ್ಪಿಕೊಂಡ ಉಪಾಯಗಳನ್ನು ಕಾರ್ಯಕಾರಿ ಮಾಡುವುದು ಯೋಜನೆಯ ಆವಶ್ಯಕ ವಿಭಾಗವಾಗಿದೆ.

ಮೇಲ್ಕಾಣಿಸಿದ ಕೇಂದ್ರ ಮತ್ತು ರಾಜ್ಯಸರಕಾರಗಳ ವೆಚ್ಚದ ವಿವರಗಳಿಂದ ಅಭಿವೃದ್ಧಿಗಾಗಿ ಕೊರತೆ ಹಣಕಾಸಿನ ವ್ಯವಸ್ಥೆಯ ವ್ಯಾಪ್ತಿಯೆಷ್ಟಾಗುವುದು ? ಎಂಬ ಪ್ರಶ್ನೆಯ ಕಡೆಗೆ ಲಕ್ಷ್ಯವು ಹೊರಳುವುದು. 'ಕೊರತೆಯ ಹಣಕಾಸಿನ ವ್ಯವಸ್ಥೆ' ಎಂಬುದು ರಾಷ್ಟ್ರೀಯ ವೆಚ್ಚದಲ್ಲಿ ಒಟ್ಟು ಆದ ಪ್ರತ್ಯಕ್ಷ ಹೆಚ್ಚಳವನ್ನು ತೋರುತ್ತದೆ.— ಈ ಕೊರತೆ ಆದಾಯದಲ್ಲಿರಲಿ, ಇಲ್ಲವೆ ಬಂಡವಲು ಲೆಕ್ಕದಲ್ಲಿ ಬರಲಿ. ಇದರರ್ಥವೇನೆಂದರೆ ಸರಕಾರವು ತನ್ನ ಆದಾಯದಕಿಂತಲೂ ಹೆಚ್ಚಾಗಿ ವೆಚ್ಚಮಾಡುವುದೆಂದು ಹೇಳಿದ ಹಾಗಾಗುವುದು. ಈ ಕೊರತೆಯನ್ನು ಸರಕಾರವು ತನ್ನ ಕೂಡಿಟ್ಟ ನಿಧಿಯಿಂದ ಪಡೆಯಬಹುದು; ಇಲ್ಲವೆ ಹಣವನ್ನು 'ನಿರ್ಮಿಸಿ' ತನ್ನ ಕೇಂದ್ರ ಬ್ಯಾಂಕಿನಿಂದ ಸಾಲವಾಗಿ ಪಡೆಯಲೂ ಬಹುದು.

ಹಣವನ್ನು 'ನಿರ್ಮಿಸು'ವುದರಿಂದ ಉಂಟಾಗುವ ಗಂಡಾಂತರದ ವಿಷಯವು ಎಲ್ಲರಿಗೂ ಗೊತ್ತೇ ಇದೆ. ಈ ದಾರಿ ಹಿಡಿದರೆ ಇದ್ದ ಹಣದ ಬೆಲೆಯಲ್ಲಿ ಕಡಿತ ಉಂಟಾಗುವುದು; ಹಣದ ಉಬ್ಬರ ಉಂಟಾಗುವುದು; ಪದಾರ್ಥಗಳ ಬೆಲೆಗಳು ಏರುವುವು; ಮತ್ತು ಮಿತಿಮೀರಿ ನಿರ್ಮಿಸಿದರೆ, ನಾಣ್ಯದ ಬೆಲೆಯ ಬಗ್ಗೆ ಸಾರ್ವಜನಿಕರ ವಿಶ್ವಾಸವು ಹಾರಿಹೋಗುವುದು. ಆವಶ್ಯಕ ಬಳಕೆಯ ಸರಕುಗಳು ಸಾಕಷ್ಟು ಪೂರೈಕೆಯಾಗುವ ಆಶ್ವಾಸನವಿದ್ದರೇನೆ ಕೊರತೆಯ ಹಣಕಾಸಿನ ವ್ಯವಸ್ಥೆಯು ಒಗ್ಗುವುದು. ಈ ಆವಶ್ಯಕ ಸರಕುಗಳ ಪೂರೈಕೆ ಸಾಕಷ್ಟಾಗದಿದ್ದರೆ ಬೆಲೆಗಳು ಏರತೊಡಗುವುವು; ಅದರಿಂದ ಜೀವನವೆಚ್ಚವೂ ಅಧಿಕವಾಗುವುದು. ಆದುದರಿಂದ ಕೊರತೆಯ ಹಣಕಾಸಿನ ವ್ಯವಸ್ಥೆಗೆ ಆವಶ್ಯಕ ಸರಕುಗಳ ಬೆಲೆಯ ನಿಯಂತ್ರಣವು ಆವಶ್ಯಕವೆಂಬುದು ಸ್ಪಷ್ಟವಾಗುವುದು. ಆವಶ್ಯಕ ಸರಕುಗಳಾದ ಆಹಾರ, ಅರಿವೆ ಮುಂತಾದವುಗಳು ಇಡಿ ಜನಸಂಖ್ಯೆಗೆ ಬೇಕಾಗುವಷ್ಟು ಕೆಳಮಿತಿಯ

ಪೂರೈಕೆಯಾಗುವ ಆಶ್ವಾಸನ ದೊರೆತರೆ ಕೊರತೆಯ ಹಣಕಾಸಿನ ವ್ಯವಸ್ಥೆಯ ಗಂಡಾಂತರ ಕಡಿಮೆಯಾಗುವುದು. ಇದರಿಂದ ಐಷಾರಾಮದ ಸರಕುಗಳ ಮೇಲೆ ಭಾರ ಬೀಳುವುದು. ಆದರೆ ಅದರಿಂದ ನಿತ್ಯಜೀವನಕ್ಕೆ ಧಕ್ಕೆ ಬರದು. ಆದುದರಿಂದ ಕೊರತೆಯ ಹಣಕಾಸಿನ ವ್ಯವಸ್ಥೆಗೆ ನಿಯಂತ್ರಣದ ನಿರ್ಧಾರಿತ ಧೋರಣೆಯು ಅವಶ್ಯಕವಾಗುವುದು.

ಸದ್ಯದ ಸ್ಥಿತಿಯಲ್ಲಿ, ಸುಮಾರು ೨೯೦ ಕೋಟಿಗಳಷ್ಟು ಕೊರತೆಯ ಹಣಕಾಸಿನ ವ್ಯವಸ್ಥೆಯನ್ನುಂಟುಮಾಡಬೇಕಾದೀತೆಂದು ಕಾಣಲಾಗಿದೆ. ಇದು ಐದು ವರುಷಗಳ ಕಾಲಾವಧಿಯಲ್ಲಿ ಸ್ಟರ್ಲಿಂಗ ಉಳಿತಾಯದಿಂದ ಮರಳಿ ಪಡೆಯುವ ಮೊತ್ತದಷ್ಟು ಮಾತ್ರ ಇದೆ. ಇದು ಗತಕಾಲದ ಉಳಿತಾಯ. ದೇಶವು ಯುದ್ಧಕಾಲದಲ್ಲಿ ಪೂರೈಸಿದ ಸರಕುಗಳಿಗಾಗಿ ಬಂದ ಬೆಲೆಯಿದು. ಇದರಿಂದ ಸುಮಾರು ೨೦೦ ಕೋಟಿ ರೂಪಾಯಿಗಳ ಬೆಲೆಯಷ್ಟು ಪರದೇಶದಿಂದ ಸರಕು ಮತ್ತು ಸೇವೆ ದೊರೆಯುವುದೆಂದು ಅರ್ಥ ಮಾಡಿಕೊಳ್ಳಬಹುದು. ಇದು ಇಷ್ಟು ಪ್ರಮಾಣದಲ್ಲಿ ಹಣ ನಿರ್ಮಿಸಿದ್ದರೆ ಆಗುವ ಅನರ್ಥವನ್ನು ತಡೆಯುವುದು. ಆದುದರಿಂದ ಇಷ್ಟುಮಟ್ಟಿಗೆ ಕೊರತೆಯ ಹಣಕಾಸಿನ ವ್ಯವಸ್ಥೆಯ ವ್ಯಾಪ್ತಿಯನ್ನು ಈ ಬಗೆಯಾಗಿ ಮಾಡಿಕೊಂಡರೆ ಯಾವ ಹಾನಿಯೂ ಇಲ್ಲೆಂದು ಹೇಳಬಹುದು.

ವಿದೇಶಗಳಿಂದ ಇದುವರೆಗೆ ಸಾಲ ಮತ್ತು ಸಹಾಯಧನವೆಂದು ಸ್ವೀಕರಿಸಿದ್ದು ಅಭಿವೃದ್ಧಿ ಯೋಜನೆಗೆ ಬಳಸಿದ್ದು ೧೫೬ ಕೋಟಿಗಳಷ್ಟಿದೆ; ಅದರ ವಿವರ ಹೀಗಿದೆ:

| | ಕೋಟಿ ರೂಪಾಯಿ |
|---|---|
| ಯುನ್ಯಾಟೆಡ್ ಸ್ಟೇಟ್ಸದಿಂದ ಸಾಲ | ೯೦ |
| ಕೋಲಂಬೋ ಯೋಜನೆಯನ್ವಯವಾಗಿ ಕಾಮನ್-ವೆಲ್ಥದಿಂದ ಸಹಾಯ | ೧೨ |
| ೧.೯೫೨ ರ ತಾಂತ್ರಿಕ ಸಹಕಾರದ ಒಪ್ಪಂದದ ಪ್ರಕಾರ ನೆರವು | ೨೫ |
| ೧೯೫೨ ರ ತಾಂತ್ರಿಕ ಸಹಕಾರದ ಒಪ್ಪಂದದ ಪ್ರಥಮ ಪೂರಕದಿಂದ ಸಹಾಯ | ೧.೮ |

| | |
|---|---|
| ಅಂತರರಾಷ್ಟ್ರೀಯ ಬ್ಯಾಂಕಿನಿಂದ ಸಾಲದ ಸಹಾಯ (೧೯೫೦) | ೯ |
| ಇತರ ಸಹಾಯ | ೨ |
| ಒಟ್ಟು | ೧೫೬ |

ಈ ಪ್ರಾಥಮಿಕ ಅವಸ್ಥೆಗಳಲ್ಲಿ ವಿದೇಶೀಯ ಸಹಾಯವು ನಿಜವಾಗಿಯೂ ಉಪಯೋಗಕಾರಿಯಾಗಿದ್ದು ವೆಚ್ಚದಲ್ಲಿ ಕೊರತೆಯಾಗುವ ೩೬೫ ಕೋಟಿಗಳಲ್ಲಿಯ ಮಹತ್ವದ ಅಂಶವನ್ನು ಅದು ತುಂಬುವುದು. ಆದರೆ ಈ ಸಹಾಯವು ಯಾವ ರಾಜಕೀಯ ಬಂಧನಕಾರಕ ಕರಾರುಗಳಿಲ್ಲದೆ ಬರಬೇಕು. ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಆ ಸಹಾಯವು ಇಂದಾಗಲಿ ಮುಂದಾಗಲಿ ರಾಷ್ಟ್ರದ ಸ್ವತಂತ್ರ ವಿದೇಶಧೋರಣೆಗೆ ಅಡ್ಡಿಯಾಗಬಾರದು. ವಿದೇಶದ ಸಹಾಯವು ಸಹಾಯಮಾಡುವ ದೇಶದ ಆಂತರಿಕ ರಾಜಕೀಯ ಸ್ಥಿತಿಯನ್ನು, ಅಂತರರಾಷ್ಟ್ರೀಯ ಪರಿಸ್ಥಿತಿಯನ್ನು ಅವಲಂಬಿಸಿರುವುದನ್ನು ಗಮನಿಸಿ, ಅದರ ಮೇಲೆ ಅವಲಂಬಿಸಿ ಕೂಡುವುದು ಅಷ್ಟು ಒಳ್ಳೆಯದಲ್ಲವೆಂದು ತಿಳಿಯಬೇಕು. ಆದುದರಿಂದ ಅಂತರರಾಷ್ಟ್ರೀಯ ತಳಹದಿಯ ಮೇಲೆ ಬರುವ ಸಹಾಯಕ್ಕೇನೆ ಪ್ರಾಶಸ್ತ್ಯ ಕೊಡಬೇಕು.

ವಿದೇಶೀಯ ಸಹಾಯವು ಏಕಕಾಲಕ್ಕೆ ಎರಡು ಕಾರ್ಯ ಮಾಡುವುದು. ಅದು ಸರಲವಾಗಿ ಪರದೇಶೀಯ ನಾಣ್ಯದ ವಿನಿಮಯವನ್ನು ಒದಗಿಸುವುದು; ಮತ್ತು ದೇಶದ ಹಣ ತೊಡಗಿಸುವ ಶಕ್ತಿಯನ್ನು ಕುದುರಿಸುವುದು. ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು ೪೦೦ ಕೋಟಿಗಳಷ್ಟು ಮಾತ್ರ ಪರದೇಶೀಯ ನಾಣ್ಯವಿನಿಮಯವನ್ನು ಅವಲಂಬಿಸಿದ ವೆಚ್ಚವಿದೆ. ಇದಕ್ಕೆ ಮೂಲಕಾರಣ ಕೃಷಿಯ ಅಭಿವೃದ್ಧಿಗಾಗಿ ಲಕ್ಷ್ಯ ಪೂರೈಸಿದುದು. ಅದು ನಿರುದ್ಯೋಗಿತವಾದ ಮಾನವಶಕ್ತಿಯನ್ನು ಉಪಯೋಗಿಸಿಕೊಳ್ಳುವುದು. ಔದ್ಯಮಿಕ ಕ್ಷೇತ್ರದ ಅಭಿವೃದ್ಧಿಗೆ ಹೆಚ್ಚು ಲಕ್ಷ್ಯ ಹಾಕಿದ್ದರೆ ೪೦೦ ಕೋಟಿಗಳಿಗಿಂತಲೂ ಹೆಚ್ಚಿನ ಪರದೇಶೀಯ ನಾಣ್ಯವಿನಿಮಯದ ಅಗತ್ಯ ಬೀಳುತ್ತಿತ್ತು.

ಆದರೆ ಒಮ್ಮೆ ಕಾರ್ಯ ಪ್ರಾರಂಭವಾಯಿತೆಂದರೆ ಅವುಗಳನ್ನು ತಡೆಯುವುದು ಹೆಚ್ಚು ಹಾನಿಕರವಾದ್ದರಿಂದ ಯೋಜಿತ ವೆಚ್ಚವಾದ ೨೦೬೯

ಕೋಟಿ ರೂಪಾಯಿಗಳ ಕಾರ್ಯಕ್ರಮಕ್ಕೆ ಅಂಟಿಕೊಳ್ಳುವುದೇ ಹಿತಕರವೆನ್ನಿಸುವುದು. ಆದುದರಿಂದ ಈ ಐದು ವರುಷದ ಕಾಲಾವಧಿಯಲ್ಲಿ ಸಮಾಜದ ಮೇಲೆ ತುಸ ಹೆಚ್ಚಿನ ಭಾರ ಬೀಳುವುದು. ಸಾಮಾಜಿಕರು ಕರಭಾರ ಹೊರಲು ಮುಂದಾಗಬೇಕು; ಬಳಕೆಯ ಸರಕುಗಳ ಬೇಡಿಕೆಯನ್ನು ಕಡಿಮೆ ಮಾಡಬೇಕು. ಅಂದರೆ ಪರದೇಶದ ಸಹಾಯವಿಲ್ಲದೆ—ಅದನ್ನು ಅವಲಂಬಿಸದೆ ನಮ್ಮ ಪಂಚವಾರ್ಷಿಕ ಯೋಜನೆಯನ್ನು ಎಲ್ಲ ವಿವರಗಳೊಂದಿಗೆ ಯಶಸ್ವಿಯಾಗಿ ಕಾರ್ಯಕಾರಿ ಮಾಡಲು ಸಾಧ್ಯವಾಗುವುದು.

---

ಪ್ರಕರಣ ನಾಲ್ಕು :

# ಯೋಜನೆಯ ಸ್ಥೂಲ ರೂಪರೇಷೆ

## ಯೋಜನೆಯ ದೃಷ್ಟಿ

ಯೋಜನೆಯ ವಿವರವಾದ ಕಾರ್ಯಕ್ರಮಗಳನ್ನು ನೋಡುವ ಮೊದಲು ಸ್ಥೂಲಮಾನದಿಂದ ಯೋಜನೆಯ ರೂಪರೇಷೆಯನ್ನು ನೋಡಿದರೆ ಒಂದೇ ನೋಟಕ್ಕೆ ಸಮಗ್ರ ಚಿತ್ರವು ಕಾಣುವುದು. ಈ ಪ್ರಥಮ ಪಂಚವಾರ್ಷಿಕ ಯೋಜನೆಯು ಭವಿಷ್ಯತ್ ಕಾಲದ ಸಂಪದಭಿವೃದ್ಧಿಯ ಹಂಚಿಕೆಯ ಮೊದಲ ಹೆಜ್ಜೆಯೆಂಬುದನ್ನು ಅರಿಯಬೇಕು. ಮುಂದಿನ ಇಪ್ಪತ್ತು-ಇಪ್ಪತ್ತೈದು ವರುಷಗಳಲ್ಲಿ ಸಾಧಿಸಬೇಕಾಗಿರುವ ಕಾರ್ಯಗಳ ದೃಷ್ಟಿಯಿಂದ ಸದ್ಯದ ಯೋಜನೆಯು ಕಡಿಮೆ ವೆಚ್ಚದ್ದೆಂದು ಅನ್ನಿಸಿದರೂ ಭವಿಷ್ಯತ್‌ಕಾಲದ ಬುನಾದಿಯನ್ನು ಅದು ಹಾಕುತ್ತಲಿದೆಯೆಂದು ತಿಳಿದಾಗ ಮತ್ತು ಆಯಾ ಕ್ಷೇತ್ರಗಳಲ್ಲಿ ಹಿಂದೆ ಎಂದೂ ಈ ಬಗೆಯಾಗಿ ವೆಚ್ಚ ಮಾಡಿಲ್ಲವೆಂದು ಲಕ್ಷ್ಯಕ್ಕೆ ತಂದುಕೊಂಡಾಗ ಇದರ ಮಹತ್ವವು ಎದ್ದುಕಾಣುವುದು.

ಸಾರ್ವಜನಿಕ ಕ್ಷೇತ್ರದಲ್ಲಿ ೨೦೬೯ ಕೋಟಿ ರೂಪಾಯಿಗಳ ವೆಚ್ಚವನ್ನು ಮಾಡಬೇಕೆಂದು ಎಣಿಸಿದಾಗ ಈ ಕೆಳಗಣ ಮಾತುಗಳನ್ನು ಗಮನಿಸಲಾಗಿದೆ:

(i) ಭವಿಷ್ಯತ್‌ಕಾಲಕ್ಕೆ ಆವಶ್ಯಕವಾಗಿದ್ದ ಹೆಚ್ಚಿನ ಸಾಧನೆಗಾಗಿ ತಳಹದಿಯೆಂದು ಪರಿಣಮಿಸಲು ಆಗಬೇಕಾದ ಅಭಿವೃದ್ಧಿ ಕ್ರಮವನ್ನು ಪ್ರಾರಂಭಿಸುವುದು.

(ii) ಅಭಿವೃದ್ಧಿಗಾಗಿ ದೇಶದಲ್ಲಿ ದೊರೆಯಬಹುದಾದ ಒಟ್ಟು ಸಂಪತ್ತು.

(iii) ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳಲ್ಲಿ ಆಗಬೇಕಾದ ಅಭಿವೃದ್ಧಿ ಮತ್ತು ಸಂಪತ್‌ಸಾಮುಗ್ರಿಯ ಸಂಬಂಧ.

(iv) ಯೋಜನೆಯು ಪ್ರಾರಂಭವಾಗುವ ಮೊದಲು ಕೇಂದ್ರ ಮತ್ತು ರಾಜ್ಯಸರಕಾರಗಳಿಂದ ಸಂಯೋಜಿಸಲಾಗಿದ್ದ ಅಭಿವೃದ್ಧಿಯೋಜನೆಗಳನ್ನು ಪೂರೈಸುವ ಆವಶ್ಯಕತೆ.

(v) ಯುದ್ಧ ಮತ್ತು ದೇಶವಿಭಜನೆಯಿಂದುಂಟಾದ ಆರ್ಥಿಕ ವಿಷಮ ಸ್ಥಿತಿಯನ್ನು ಸರಿಪಡಿಸುವ ಅಗತ್ಯತೆ.

## ಪ್ರಾಥಮಿಕತೆ ಮತ್ತು ಪದ್ಧತಿ

ಸಾರ್ವಜನಿಕ ಕ್ಷೇತ್ರದಲ್ಲಿ ವೆಚ್ಚಮಾಡಬೇಕೆಂದ ಹಣದ ಪ್ರಾಥಮಿಕತೆ ಮತ್ತು ಪದ್ಧತಿ ಇಂತಿದೆ :

| | ಕೋಟಿ ರೂಪಾಯಿ |
|---|---|
| ಕೃಷಿ ಮತ್ತು ಸಮಾಜವಿಕಾಸ | ೩೬೧ |
| ನೀರಾವರಿ | ೧೬೮ |
| ವಿವಿಧೋದ್ದೇಶ ನೀರಾವರಿ ಮತ್ತು ವಿದ್ಯುತ್ ಯೋಜನೆಗಳು | ೨೬೬ |
| ಚಾಲಕಶಕ್ತಿ | ೧೨೭ |
| ಸಾರಿಗೆ–ಸಂಪರ್ಕ | ೪೯೭ |
| ಉದ್ಯಮಗಳು | ೧೭೩ |
| ಸಮಾಜಸೇವೆ | ೩೪೦ |
| ಪುನರ್ನಿವೇಶನ | ೮೫ |
| ಇತರ | ೫೨ |
| ಒಟ್ಟು | ೨೦೬೯ |

ವೆಚ್ಚದ ಈ ವಿತರಣವು ಎರಡನೆಯ ಪ್ರಕರಣದಲ್ಲಿ ಹೇಳಿದ ಪ್ರಾಥಮಿಕತೆಯನ್ನು ಅನುಲಕ್ಷಿಸಿ ಇದೆ. ಕೃಷಿಯ ಅಭಿವೃದ್ಧಿಗೆ ಪ್ರಥಮ ಪ್ರಾಶಸ್ತ್ಯ ದೊರೆತುದರಿಂದ ಅದಕ್ಕೆ ಆವಶ್ಯಕ ಸಹಾಯಕಾರಿಯಾದ ನೀರಾವರಿಗೆ

ಪ್ರೋತ್ಸಾಹ ದೊರೆತಿದೆ. ಒಕ್ಕಲುತನಕ್ಕೆ ಹೊಂದಿಕೊಂಡು ಕಿರಿ ಉದ್ಯಮಗಳು ಬೆಳೆಯಬೇಕೆಂದು ನೀರಾವರಿಯ ಜತೆಗೆ ವಿದ್ಯುತ್‌ಶಕ್ತಿಯ ಬೆಳೆಗೆಯನ್ನು ಲಕ್ಷಿಸಲಾಗಿದೆ. ಇದರಿಂದ ಗ್ರಾಮೀಣ ಕೈಗಾರಿಕೆಯ ವ್ಯವಸಾಯಗಳು ಕುದುರುವುವಲ್ಲದೆ ಸುತ್ತಲು ಅನುಕೂಲ ಪರಿಸ್ಥಿತಿಯಿದ್ದಲ್ಲಿ ದೊಡ್ಡ ಪ್ರಮಾ-ಣದ ಉದ್ಯಮಗಳೂ ಬೆಳೆಯುವುವು. ಒಕ್ಕಲುತನ ಮತ್ತು ಉದ್ಯಮಗಳಲ್ಲಿ ಹೆಚ್ಚಿನ ಉತ್ಪಾದನೆಯಾದ ಹಾಗೆ ಅವುಗಳನ್ನು ಸಾಗಿಸಲು ಅವಶ್ಯಕವಾಗುವ ಸಾರಿಗೆ ಸಂಪರ್ಕಗಳಲ್ಲಿ ಅಭಿವೃದ್ಧಿ ವಿಕಾಸವಾಗಲೇಬೇಕಾಗುವುದು. ಇದ-ರಿಂದ ದೇಶದಲ್ಲಿನ ವ್ಯಾಪಾರ ವಾಣಿಜ್ಯದ ವಿಕಾಸವಾಗಿ ಜೀವನ ಮಟ್ಟವೇರಲು ಅನುಕೂಲ ಆರ್ಥಿಕ ಪರಿಸ್ಥಿತಿಯನ್ನುಂಟುಮಾಡುವುದು. ಈ ಕ್ರಮವನ್ನು ನೋಡಿದರೆ ಒಂದೊಂದು ಕಾರ್ಯವು ತನ್ನ ವಿಕಾಸ ಪೋಷಣೆ ಮಾಡಿ ಕೊಳ್ಳುವುದಲ್ಲದೆ ಇನ್ನೊಂದಕ್ಕೆ ಸಹಾಯಮಾಡಿ ಅದರಿಂದ ತನ್ನ ಬೆಳೆಗೆಗೆ ಅವಶ್ಯಕವಾದ ಪೋಷಣೆಯನ್ನು ಮರಳಿ ಪಡೆಯುವಂತಾಗುವುದು. ಪ್ರಾಥಮಿ-ಕತೆಯ ಪಟ್ಟಿಯನ್ನು ನಿರ್ಣಯಿಸುವಾಗ ಈ ದೃಷ್ಟಿಯನ್ನು ಇಟ್ಟುಕೊಂಡ ದ್ದಲ್ಲದೆ ಒಟ್ಟಿನಲ್ಲಿ ದೇಶದ ಆರ್ಥಿಕ ರಚನೆಯಲ್ಲಿ ಭದ್ರವಾದ ವ್ಯವಸ್ಥೆ ಯುಂಟಾಗಬೇಕೆಂದು ಯೋಜಿಸಲಾಗಿದೆ.

ಈ ಕಾಲಾವಧಿಯಲ್ಲಿಯ ಉದ್ಯಮಗಳ ಬೆಳೆಗೆಯು ಖಾಸಗಿ ಸಾಹಸ ಪ್ರಯತ್ನಗಳಿಂದಲೇ ಆಗಬೇಕು. ಆದರೂ ರಾಷ್ಟ್ರದ ಹಿತದ ದೃಷ್ಟಿಯಿಂದ ಅಲ್ಲಲ್ಲಿ ಆಗಾಗ ಅವಶ್ಯವೆನ್ನಿಸಿದಲ್ಲಿ ಸರಕಾರದ ಸಹಾಯವನ್ನು ಕೊಡಲಾ-ಗುವುದಲ್ಲದೆ ವಿದೇಶಿ ಬಂಡವಲನ್ನು ಸ್ವಾಗತಿಸಲಾಗುವುದು. ಹೀಗೆ ಎರಡೂ ವಿಧದಲ್ಲಿ ಕೈಗೂಡಿಸಿದ ಪ್ರಯತ್ನದಿಂದ ಆಗುವ ಅಭಿವೃದ್ಧಿಯು ಅಲಕ್ಷಿಸು ವಷ್ಟಾಗುವುದಿಲ್ಲ. ಸಮಾಜಸೇವೆಯ ವಿಭಾಗದಲ್ಲಿ ಹೆಚ್ಚಿನ ವೆಚ್ಚವು ಪುನ-ರ್ನಿವೇಶನಕಾರ್ಯಕ್ಕಾಗಿ ಹೋಗುವುದರಿಂದ ವ್ಯಾಪಕವಾದ ಆ ಕ್ಷೇತ್ರದಲ್ಲಿ ಒಡೆದುಕಾಣುವಷ್ಟು ಕಾರ್ಯವಾಗದು. ಸಮಾಜದ ಜನರೂ ಸಹಕಾರ ಬುದ್ಧಿಯಿಂದ ಮುಂಬಂದರೆ ಸರಕಾರದ ಕೊರತೆಯನ್ನು ತುಂಬಿ ಸಮಾಜ-ಸೇವೆಯ ಕ್ಷೇತ್ರದಲ್ಲಿ ತೇಜವುಂಟಾಗುವ ಸಂಭವವಿದೆ.

ಸಾರ್ವಜನಿಕ ಕ್ಷೇತ್ರದಲ್ಲಿ ಮಾಡಲಾಗುವ ೨೦೬೯ ಕೋಟಿ ವೆಚ್ಚದಿಂದ ಸಾರ್ವಜನಿಕ ಮತ್ತು ಖಾಸಗಿ ಉತ್ಪಾದನ ಉಪಕರಣಗಳಲ್ಲಿ ಹೆಚ್ಚಳವೂ

ಇಡಿ ಸಮಾಜದ ಉತ್ಪಾದನ ಶಕ್ತಿಯಲ್ಲಿ ವಿಕಾಸವೂ ಉಂಟಾಗುವುದೆಂದು ಈ ಪಟ್ಟಿಯಲ್ಲಿಯ ವಿವರದಿಂದ ಕಂಡುಬರುವುದು :

| | ಕೋಟಿ ರೂಪಾಯಿ |
|---|---|
| (೧) ಕೇಂದ್ರ ಮತ್ತು ರಾಜ್ಯಗಳ ಉತ್ಪಾದಕ ಬಂಡವಲಿನಲ್ಲಿ ಹೆಚ್ಚಳ | ೧೧೯೯ |
| (೨) ಖಾಸಗಿ ಕ್ಷೇತ್ರಗಳಲ್ಲಿಯ ಉತ್ಪಾದಕ ಬಂಡವಲಿನಲ್ಲಿ ಹೆಚ್ಚಳಕ್ಕೆ ನೆರವು : | |
| (i) ಕೃಷಿ ಮತ್ತು ಗ್ರಾಮಾಭಿವೃದ್ಧಿ (ಸಮಾಜವಿಕಾಸ ಕಾರ್ಯ ಬಿಟ್ಟು) | ೨೪೪ |
| (ii) ಸಾರಿಗೆ ಮತ್ತು ಉದ್ಯಮಗಳಿಗಾಗಿ ಸಾಲ | ೪೭ |
| (iii) ಸ್ಥಾನಿಕ ಅಭಿವೃದ್ಧಿ ಪ್ರವೃತ್ತಿಯನ್ನು ಕುದುರಿಸಲು (ಸಮಾಜ ವಿಕಾಸಯೋಜನೆ ಮತ್ತು ಸ್ಥಾನಿಕ ಕಾರ್ಯ) | ೧೦೫ |
| (೩) ಸಾಮಾಜಿಕ ಬಂಡವಲಿಗಾಗಿ | ೪೨೫ |
| (೪) ವರ್ಗೀಕರಣ ಮಾಡದೆ ಇದ್ದದಕ್ಕಾಗಿ (ಕ್ಷಾಮ ನಿವಾರಣೆ ಮುಂತಾದ್ದಕ್ಕೆ) | ೪೯ |
| ಒಟ್ಟು | ೨೦೬೯ |

## ವೆಚ್ಚದ ವಿತರಣ

ಯೋಜನೆಯ ವೆಚ್ಚವು ಕೇಂದ್ರ ಮತ್ತು ರಾಜ್ಯಗಳ ನಡುವೆ ಹೇಗೆ ವಿತರಣವಾಗಿದೆಯೆಂಬುದನ್ನು ನೋಡುವಾ.

| | ಕೋಟಿ ರೂಪಾಯಿ |
|---|---|
| ಕೇಂದ್ರ ಸರಕಾರ (ರೇಲ್ವೆ ಸಹಿತ) | ೧೨೪೧ |
| 'ಅ' ಭಾಗದ ರಾಜ್ಯಗಳು | ೬೧೦ |
| 'ಬ' ಭಾಗದ ರಾಜ್ಯಗಳು | ೧೭೩ |
| 'ಕ' ಭಾಗದ ರಾಜ್ಯಗಳು | ೩೨ |
| ಜಮ್ಮು ಮತ್ತು ಕಾಶ್ಮೀರ | ೧೩ |
| ಒಟ್ಟು | ೨೦೬೯ |

ಈ ಪಟ್ಟಿಯಿಂದ ರಾಜ್ಯಗಳ ಯೋಜನೆಗಾಗಿ ವೆಚ್ಚ ಕಡಿಮೆಯೆಂಬ ಭ್ರಮೆಯಾಗುವ ಸಂಭವವಿದೆ. ಆದರೆ ಈ ಮೊದಲೆ ಹೇಳಿದಂತೆ ವಿವಿಧೋದ್ದೇಶ ನದೀಕೊಳ್ಳದ ಯೋಜನೆಗಳು ಪ್ರಾದೇಶಿಕವಾಗಿ ಆಯಾ ರಾಜ್ಯಗಳಲ್ಲಿ ಬಂದಿದ್ದರೂ ಅವುಗಳ ವೆಚ್ಚವನ್ನು ಕೇಂದ್ರದ ಯೋಜನೆಯ ವೆಚ್ಚದಲ್ಲಿ ಸಮಾವೇಶ ಮಾಡಲಾಗಿದೆ. ಆದುದರಿಂದ ವಿತರಣದಲ್ಲಿ ಯಾವ ವೈಷಮ್ಯವೂ ಇಲ್ಲವೆಂದು ಹೇಳಬಹುದು. 'ಅ' 'ಬ' 'ಕ' ರಾಜ್ಯಗಳು ಈ ಯೋಜನೆಯ ಅನ್ವಯವಾಗಿ ಇಷ್ಟು ವೆಚ್ಚ ಮಾಡುವುವು.

**'ಅ' ರಾಜ್ಯಗಳು— ಒಟ್ಟು ೬೧೦·೧೨ ಕೋಟಿ ರೂ.**

| | | | |
|---|---|---|---|
| ಆಸಾಮು | ೧೭ ೪೯ | ಓರಿಸಾ | ೧೭·೮೪ |
| ಬಿಹಾರ | ೫೭·೨೯ | ಪಂಜಾಬ | ೨೦·೨೧ |
| ಮುಂಬಯಿ | ೧೪೬·೪೪ | ಉತ್ತರ ಪ್ರದೇಶ | ೯೭·೮೩ |
| ಮಧ್ಯಪ್ರದೇಶ | ೪೩·೦೮ | ಪಶ್ಚಿಮ ಬಂಗಾಲ | ೬೯·೧೦ |
| ಮದ್ರಾಸ | ೧೪೦·೮೪ | | |

**'ಬ' ರಾಜ್ಯಗಳು— ಒಟ್ಟು ೧೭೩·೨೬ ಕೋಟಿ ರೂ.**

| | | | |
|---|---|---|---|
| ಹೈದರಾಬಾದ | ೪೧·೫೫ | ರಾಜಸ್ಥಾನ | ೧೬ ೮೨ |
| ಮಧ್ಯಭಾರತ | ೨೨·೪೨ | ಸೌರಾಷ್ಟ್ರ | ೨೦·೪೧ |
| ಮೈಸೂರು | ೩೬·೬೦ | ತ್ರಾವಣಕೋರ–ಕೋಚೀನ | ೨೭·೩೨ |
| ಪೆಪ್ಸು | ೮·೧೪ | | |

**'ಕ' ರಾಜ್ಯಗಳು— ಒಟ್ಟು ೩೧·೮೬ ಕೋಟಿ ರೂ.**

| | | | |
|---|---|---|---|
| ಆಜಮೀರ | ೧·೫೭ | ಹಿಮಾಚಲ ಪ್ರದೇಶ | ೪·೫೫ |
| ಭೋಪಾಳ | ೩·೯೦ | ಕಚ್ಛ | ೩·೦೫ |
| ವಿಲಾಸಪುರ | ೦·೫೭ | ಮಣಿಪುರ | ೧·೫೫ |
| ಕೊಡಗು | ೦·೭೩ | ತ್ರಿಪುರಾ | ೨·೦೭ |
| ದಿಲ್ಲಿ | ೭·೪೮ | ವಿಂಧ್ಯಪ್ರದೇಶ | ೬·೩೯ |

ರಾಜ್ಯಸರಕಾರಗಳು ತಮ್ಮ ಯೋಜನೆಗಳ ವೆಚ್ಚವನ್ನು ಈ ಬಗೆಯಾಗಿ ಕಾಣಿಸಿದ್ದಕ್ಕೂ ಹೆಚ್ಚಾಗಿ ಮಾಡಬೇಕೆಂದು ಸೂಚಿಸಿದ್ದಕ್ಕೆ ಅವು ತಾವೇ ಹೆಚ್ಚಿನ ಹಣವನ್ನು ತಮ್ಮ ರಾಜ್ಯದಲ್ಲಿ ಎತ್ತುಗಡೆ ಮಾಡಿ ವೆಚ್ಚಮಾಡಿ ಕೊಳ್ಳಬಹುದು ಎಂದು ಕೇಂದ್ರ ಸರಕಾರ ಹೇಳಿದೆ.

## ಕೃಷಿ ಮತ್ತು ಸಮಾಜಾಭಿವೃದ್ಧಿ

ಕೃಷಿ ಮತ್ತು ಸಮಾಜಾಭಿವೃದ್ಧಿಯೆಂಬ ವಿಭಾಗವು ಬಹು ವ್ಯಾಪಕ-ಕಾರ್ಥವುಳ್ಳದ್ದಾಗಿದೆ. ಈ ವಿಭಾಗದಲ್ಲಿ ದನಗಳ ಅಭಿವೃದ್ಧಿ, ಅರಣ್ಯಗಳ ಅಭಿವೃದ್ಧಿ, ಭೂಸಂರಕ್ಷಣ, ಸಹಕಾರೀ ಚಟುವಟಿಕೆಗಳು ಮತ್ತು ಗ್ರಾಮ ಪಂಚಾಯತಗಳು ಇವೆಲ್ಲ ಸಮಾವೇಶವಾಗುವುವು. ಈ ವಿಭಾಗಕ್ಕೆಂದು ಯೋಜನೆಯಲ್ಲಿ ಒಟ್ಟು ೩೬೧ ಕೋಟಿ ರೂಪಾಯಿಗಳನ್ನು ತೆಗೆದಿಡಲಾಗಿದೆ. ಇದರಲ್ಲಿಯ ೧೮೪ ಕೋಟಿ ಕೃಷಿಕಾರ್ಯಕ್ಕೆ, ೧೦೦ ಕೋಟಿಗೆ ತುಸ ಹೆಚ್ಚಾಗಿ ಸಮಾಜವಿಕಾಸ ಯೋಜನೆ ಮತ್ತು ಗ್ರಾಮಾಭಿವೃದ್ಧಿಗೆ, ಸುಮಾರು ೨೨ ಕೋಟಿಗಳಷ್ಟು ಪಶುಸಂಗೋಪನಕ್ಕೆ ಮತ್ತು ಡೇರಿ ಒಕ್ಕಲುತನಕ್ಕೆ ಮತ್ತು ಸುಮಾರು ೧೨ ಕೋಟಿ ರೂಪಾಯಿಗಳಷ್ಟು ಅರಣ್ಯ ಮತ್ತು ಭೂಸಂರಕ್ಷಣೆಗಾಗಿ ಎಂದು ಹಂಚಲಾಗಿದೆ. ಕೃಷಿಯೋಜನೆಗಳೆಲ್ಲವೂ ರಾಜ್ಯಗಳ ಯೋಜನೆಯಲ್ಲಿಯೇ ಬರುವುವು. ಕೇಂದ್ರ ಸರಕಾರವು ರಾಜ್ಯಗಳ ಕಾರ್ಯಕ್ರಮಗಳಲ್ಲಿ ಸಂಬಂಧೀಕರಣವುಂಟುಮಾಡುವುದಲ್ಲದೆ ಕೆಲ. ಮಹತ್ತ್ವದ ಕಾರ್ಯಗಳಲ್ಲಿಯೂ ನೆರವಾಗುವುದು. ಕೇಂದ್ರದ ಕಾರ್ಯಕ್ರಮದಲ್ಲಿ ಈಗಿನ ಕೇಂದ್ರ ಟ್ರಾಕ್ಟರ ಸಂಘದ ಕಾರ್ಯವನ್ನು ಪೂರ್ತಿಗೊಳಿಸುವುದು, ಅವರ ಕಾರ್ಯಕ್ಷೇತ್ರವನ್ನು ದೇಶವ್ಯಾಪಿಯಾಗಿಸುವುದು, ದನಗಳ ತಳಿಯಲ್ಲಿ ಅಭಿವೃದ್ಧಿಮಾಡುವುದು, ಭೂಸಂರಕ್ಷಣೆ ಮಾಡುವುದು, ಸಹಕಾರೀ ಶಿಕ್ಷಣ ಒದವಿಸುವುದು, ಮತ್ತು ಸಹಕಾರಿ ಪದ್ಧತಿಯ ಒಕ್ಕಲುತನದಲ್ಲಿ ಪ್ರಯೋಗ ನಡಸುವುದು, ಇವು ಒಳಗೊಂಡಿರುವುವು.

ಸಮಾಜವಿಕಾಸ ಯೋಜನೆಗಳು ಮೂಲತಃ ವಿಶಿಷ್ಟವಾಗಿ ಆಯ್ದ ಕ್ಷೇತ್ರಗಳ ಉತ್ಕಟ ಅಭಿವೃದ್ಧಿಯ ಕಾರ್ಯಕ್ರಮಗಳೆಂದು ಬಗೆಯಲಾಗಿದ್ದರೂ ಅವು ಒಕ್ಕಲುತನದ ಉತ್ಪಾದನೆಯ ಮಟ್ಟವನ್ನು ಏರಿಸಲು ಸಹಾಯ

ಕಾರಿಯಾಗುವುವು. ಈ ಯೋಜನೆಗಳ ಮುಖ್ಯ ಉದ್ದೇಶವು ಸ್ಥಳೀಯ ಮಾನವಶಕ್ತಿಯನ್ನು ಸಂಘಟಿಸುವುದು ಆಗಿದೆ. ಇದರಿಂದ ಗ್ರಾಮೀಣ ಜೀವನದ ಮಟ್ಟವನ್ನು ಏರಿಸಬೇಕೆಂದು ಮಾಡಲಾಗಿದೆ. ಒಕ್ಕಲುತನದ ಉತ್ಪಾದನೆಯನ್ನು ಸುಧಾರಿಸುವುದೇ ಈ ಯೋಜನೆಗಳ ಮುಖ್ಯ ಉದ್ದೇಶವಾಗಿರುವುದರಿಂದ ಹೆಚ್ಚಿನ ವೆಚ್ಚವು ನೀರಾವರಿ ಕಾರ್ಯಗಳ ಮೇಲೆಯೆ ಮಾಡಲಾಗುವುದು. ಈಗಾಗಲೇ ಪ್ರಾರಂಭವಾದ ಕೇಂದ್ರಗಳಲ್ಲಿ ಪಡೆದ ಅನುಭವದಿಂದ ಈ ಯೋಜನೆಯನ್ನು ದೇಶದಾದ್ಯಂತ ವ್ಯಾಪಿಸುವ ಹಂಚಿಕೆಯಿದೆ. ಪಂಚವಾರ್ಷಿಕ ಯೋಜನೆಯು ಈ ರೀತಿಯ ಗ್ರಾಮಾಭಿವೃದ್ಧಿಗಾಗಿ ೯೦ ಕೋಟಿ ರೂಪಾಯಿಗಳನ್ನು ತೆಗೆದಿಟ್ಟಿದೆ. ಯೋಜನೆಯ ಕಾಲಾವಧಿಯಲ್ಲಿಯೆ ದೇಶದ ಎಲ್ಲ ಭಾಗಗಳಿಗೂ ಈ ಯೋಜನೆಯ ಲಾಭ ಮುಟ್ಟಲಿಕ್ಕಿಲ್ಲ. ಜನಸಾಮಾನ್ಯರಲ್ಲಿ ಯೋಜನೆಯ ಬಗ್ಗೆ ಆಸಕ್ತಿಯುಂಟಾಗಿಸಲು ಸ್ಥಾನಿಕ ಅಭಿವೃದ್ಧಿ ಕಾರ್ಯಗಳಿಗೆಂದು ಪ್ರತ್ಯೇಕವಾಗಿ ೧೫ ಕೋಟಿ ರೂಪಾಯಿಗಳನ್ನು ಬದಿಗಿರಿಸಲಾಗಿದೆ. ಈ ಹಣವು ಮುನಿಸಿಪಾಲಿಟಿ, ಲೋಕಲ್ ಬೋರ್ಡ್ ಮುಂತಾದ ಸ್ಥಾನಿಕ ಸಂಸ್ಥೆಗಳು ತಮ್ಮ ಕಾರ್ಯಕ್ಷೇತ್ರಗಳಲ್ಲಿ ತಮ್ಮವೇ ಆದ ಅಭಿವೃದ್ಧಿ ಯೋಜನೆಗಳನ್ನು ಸಾಧಿಸಲು ನೆರವು ಕೊಡುತ್ತದೆ. ಬರಗಾಲ ಪೀಡಿತ ಪ್ರದೇಶಗಳಲ್ಲಿ ಇಂತಹ ಅಭಿವೃದ್ಧಿ ಕಾರ್ಯಗಳಿಗೆಂದು ಇನ್ನೂ ೧೫ ಕೋಟಿ ಬೇರೆ ಹಣದ ವ್ಯವಸ್ಥೆಯು ಮಾಡಲಾಗಿದೆ.

## ನೀರಾವರಿ— ವಿದ್ಯುತ್ ಶಕ್ತಿ ಯೋಜನೆಗಳು

ನೀರಾವರಿ ಮತ್ತು ವಿದ್ಯುತ್‌ಶಕ್ತಿಗಳ ಯೋಜನೆಗಳು ಈ ಪಂಚವಾರ್ಷಿಕ ಯೋಜನೆಯು ಕಾರ್ಯಗತವಾಗುವ ಮುನ್ನವೇ ಪ್ರಾರಂಭಿಸಲ್ಪಟ್ಟಿದ್ದವು. ಇಂತಹ ನೀರಾವರಿ–ವಿದ್ಯುತ್‌ಶಕ್ತಿ ಯೋಜನೆಗಳ ಒಟ್ಟು ವೆಚ್ಚವು ಸುಮಾರು ೭೬೫ ಕೋಟಿಗಳಷ್ಟು ಪಂಚ ವಾರ್ಷಿಕ ಯೋಜನೆಯ ವೆಚ್ಚದಲ್ಲಿ ಸಮಾವೇಶ ಮಾಡಲಾಗಿದೆ. ಇದರಲ್ಲಿಯು ಸುಮಾರು ೧೫೩ ಕೋಟಿ ರೂಪಾಯಿಗಳನ್ನು ೧೯೫೦–೫೧ಕ್ಕೆ ಮೊದಲೆ ವೆಚ್ಚಮಾಡಲಾಗಿತ್ತು. ಯೋಜನೆಯ ಕಾಲಾವಧಿಯಲ್ಲಿ ೫೭೮ ಕೋಟಿ ಮಾತ್ರ ವೆಚ್ಚ ಮಾಡಲ್ಪಡುವುದು.

ಉಳಿದ ಸುಮಾರು ನೂರು ಕೋಟಿ ರೂಪಾಯಿಗಳು ಅನಂತರದ ಕಾಲಾವಧಿಯಲ್ಲಿ ವೆಚ್ಚಮಾಡಲ್ಪಡುವುವು. ಯೋಜನೆಯ ಕಾಲಾವಧಿಯಲ್ಲಿ ಈ ಕಾರ್ಯಗಳಲ್ಲಿ ಆದ ಪ್ರಗತಿಯ ಮೂಲಕ ೮೫ ಲಕ್ಷ ಎಕರೆ ಹೆಚ್ಚಿನ ಭೂಮಿಯು ನೀರಾವರಿ ಕ್ಷೇತ್ರದಲ್ಲಿ ಬರುವುದು; ೧.೧ ಲಕ್ಷ ಕಿಲೊವಾಟ ವಿದ್ಯುತ್‌ಶಕ್ತಿ ಹೆಚ್ಚಿಗೆ ಉತ್ಪಾದನವಾಗುವುದು. ಈ ಯೋಜನೆಗಳು ಪೂರ್ತಿಯಾದಾಗ ಒಟ್ಟು ೧೬೯ ಲಕ್ಷ ಎಕರೆ ಹೆಚ್ಚಿನ ಭೂಮಿ ನೀರಾವರಿ ಕ್ಷೇತ್ರದಲ್ಲಿ ಬರುವುದು ಮತ್ತು ೧೪ ಲಕ್ಷ ಕಿಲೋವಾಟ ವಿದ್ಯುತ್‌ಶಕ್ತಿಯು ಹೆಚ್ಚಿನ ಉತ್ಪಾದನವಾಗುವುದು.

ಈಗಾಗಲೆ ಕಾರ್ಯಗತವಾಗಿರುವ ಯೋಜನೆಗಳು ಮೊದಲ ಮೂರು ವರುಷಗಳಲ್ಲಿ ಆರ್ಥಿಕ ಮತ್ತು ತಾಂತ್ರಿಕ ಶಕ್ತಿಗಳನ್ನು ತಮ್ಮೆಡೆಗೆ ಸಂಪೂರ್ಣವಾಗಿ ಆಕರ್ಷಿಸಿಕೊಳ್ಳುವುದರಿಂದ ೧೯೫೪–೫೫ ರ ತನಕ ಹೊಸ ಯಾವ ಯೋಜನೆಗೂ ಕೈಹಾಕಲು ಸಾಧ್ಯವಾಗುವುದಿಲ್ಲ. ಅನಂತರದ ಕಾಲಾವಧಿಯಲ್ಲಿ ಕೋನೆ, ಕೋಯುನಾ, ಕೃಷ್ಣಾ, ಚಂಬಳ, ಮತ್ತು ರಿಹಾಂಡ ನದಿಗಳ ಯೋಜನೆಗಳ ಕಡೆಗೆ ಲಕ್ಷ್ಯಹಾಕಲಾಗುವುದು. ಈ ಯೋಜನೆಗಳ ಒಟ್ಟು ವೆಚ್ಚವು ಸುಮಾರು ೩೦೦ ಕೋಟಿ ರೂಪಾಯಿಗಳಷ್ಟಾಗುವುದೆಂದು ಅಂದಾಜು ಮಾಡಲಾಗಿದೆ. ಇದರಲ್ಲಿಯ ಸುಮಾರು ೪೦ ಕೋಟಿಯಷ್ಟು ಮಾತ್ರ ಯೋಜನೆಯ ಕಾಲಾವಧಿಯಲ್ಲಿ ವೆಚ್ಚಮಾಡಲು ಸಾಧ್ಯವಾಗುವುದು.

ಈ ದೊಡ್ಡ ನೀರಾವರಿ ಮತ್ತು ವಿದ್ಯುತ್‌ಶಕ್ತಿ ಯೋಜನೆಗಳ ಲಾಭದ ಜತೆಗೆ ಯೋಜನೆಯ ಕಾಲಾವಧಿಯಲ್ಲಿ ಕಿರಿನೀರಾವರಿ ಮತ್ತು ಖಾಸಗಿ ವಿದ್ಯುತ್‌ಶಕ್ತಿ ಉತ್ಪಾದನ ಸಂಸ್ಥೆಗಳಪೂರಕಸಹಾಯವು ದೊರೆವುದು. ಸುಮಾರು ೬೭ ಕೋಟಿ ರೂಪಾಯಿಗಳ ವೆಚ್ಚದ ಕಿರಿನೀರಾವರಿ ಕಾರ್ಯವು ೧೧೨ ಲಕ್ಷ ಎಕರೆ ಭೂಮಿಗೆ ನೀರುಣ್ಣಿಸುವುದು. ಖಾಸಗಿ ವಿದ್ಯುತ್‌ಶಕ್ತಿ ಸಂಸ್ಥೆಗಳಿಂದ ೧೬೬೦೦೦ ಕಿಲೋವಾಟದಷ್ಟು ವಿದ್ಯುತ್‌ಶಕ್ತಿ ದೊರೆವುದು.

ದೇಶದಲ್ಲಿನ ಜಲಸಂಚಯ ಸಾಧನಶಕ್ತಿಗಳ ಪರಿಶೀಲನ ಮಾಡಿದರೆ ಕೆಲವೆಡೆ ದೊಡ್ಡ ನೀರಾವರಿ ಯೋಜನೆಗಳು ಸಾಧ್ಯವಾಗುವಂತಿದ್ದರೆ ಇನ್ನು ಕೆಲವೆಡೆ ಕೇವಲ ಕಿರಿನೀರಾವರಿ ಯೋಜನೆಗಳೇ ಸಾಧ್ಯವಾಗುವುವು. ಸಾಧ್ಯವಾಗುವಂತಹ ಕಾರ್ಯವನ್ನು ಕೈಕೊಂಡರೇನೇ ಹೆಚ್ಚಿನ ಲಾಭವಾಗುವುದು;

ಹಿರಿ ಕಿರಿ ಯೋಜನೆಗಳು ಪೂರಕವಾಗುವುವು; ಪೋಷಕವಾಗುವುವು. ಪಂಚ ವಾರ್ಷಿಕ ಯೋಜನೆಯಲ್ಲಿ ಎಂಟು ನೀರಾವರಿ (ವಿವಿಧೋದ್ದೇಶ ಯೋಜನೆಗಳು ಸೇರಿ) ಯೋಜನೆಗಳಿಗೆ, ಒಂದೊಂದಕ್ಕೆ ಸುಮಾರು ೫ ಕೋಟಿ ವೆಚ್ಚವಾಗು-ವುದು. ಒಂದು ಕೋಟಿಯಿಂದ ೫ ಕೋಟಿ ರೂಪಾಯಿ ವೆಚ್ಚವಾಗುವ ೧೫ ನೀರಾವರಿ ಯೋಜನೆಗಳು; ೫೦ ಲಕ್ಷದಿಂದ ೧ ಕೋಟಿ ರೂಪಾಯಿ ವೆಚ್ಚ-ವಾಗುವ ೨೧ ನೀರಾವರಿ ಯೋಜನೆಗಳು; ೧೦ ಲಕ್ಷದಿಂದ ೫೦ ಲಕ್ಷ ರೂಪಾಯಿ ವೆಚ್ಚವಾಗುವ ೧೭ ಯೋಜನೆಗಳು ಸಮಾವೇಶವಾಗಿವೆ.

ನಮ್ಮ ದೇಶದಲ್ಲಿ ಇನ್ನೂ ಎಷ್ಟೋ ದೊಡ್ಡ ಪಟ್ಟಣಗಳಿಗೇ ವಿದ್ಯುತ್ ಸೌಕರ್ಯವಿಲ್ಲದಿರುವಾಗ ಹಳ್ಳಿಗಳಿಗೆ ಆ ಸೌಕರ್ಯವಿಲ್ಲವೆಂಬುದು ಆಶ್ಚ-ರ್ಯದ ಮಾತಲ್ಲ. ಈಗ ಸರಾಸರಿ ಮಾನದಿಂದ ೨೦೦ ಹಳ್ಳಿಗಳಲ್ಲಿ ಒಂದಕ್ಕೆ ಮಾತ್ರ ವಿದ್ಯುತ್‌ಸೌಕರ್ಯವಿದೆ. ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮ ವಿದ್ಯುತ್ ಸೌಕರ್ಯಕ್ಕಾಗಿ ೨೭ ಕೋಟಿ ರೂಪಾಯಿಗಳನ್ನು ತೆಗೆದಿಡಲಾಗಿದೆ. ಗ್ರಾಮ ವಿದ್ಯುತೀಕರಣದ ಈ ಕಾರ್ಯವು ಮುಖ್ಯವಾಗಿ ದಕ್ಷಿಣ ಭಾರತದ ರಾಜ್ಯಗಳಾದ ಮದ್ರಾಸ, ಮೈಸೂರು, ತ್ರಾವಣಕೋರ-ಕೋಚೀನಗಳಿಗೆ ಮರ್ಯಾದಿತವಾಗಿದೆ. ಹೆಚ್ಚು ಹೆಚ್ಚು ವಿದ್ಯುತ್‌ಶಕ್ತಿಯ ಉತ್ಪಾದನೆಯಾದ ಹಾಗೆಲ್ಲ ದೇಶದ ಉಳಿದ ಭಾಗಗಳಲ್ಲಿಯು ಹಳ್ಳಿಗಳಿಗೆ ಪೂರೈಸಲಾಗುವುದು. ಹಳ್ಳಿಗಳಿಗೆ ವಿದ್ಯುತ್‌ಸೌಕರ್ಯ ಒದಗಿಸಿದರೆ, ಕೃಷಿಕಾರ್ಯಕ್ಕೆ—ನೀರು ಪಂಪುಗಳನ್ನು ನಡಸಲು— ನೆರವಾಗುವುದಲ್ಲದೆ, ಕೃಷಿ ಉತ್ಪಾದನವನ್ನು ಸಂರಕ್ಷಿಸುವ ಕ್ರಮಗಳಿಗೆ, ಗಾಡಿ ಕೈಗಾರಿಕೆಗೆ, ಕಿರಿ ಉದ್ಯಮಗಳಿಗೆ ಚಾಲಕ ಶಕ್ತಿಯನ್ನು ಒದವಿಸುವುದು.

## ಔದ್ಯೋಗಿಕ ಬೆಳಿಗೆ:

ಸಾರ್ವಜನಿಕ ಕ್ಷೇತ್ರದ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಔದ್ಯೋಗಿಕ ಬೆಳಗೆಗಾಗಿ ೧೭೩ ಕೋಟಿ ರೂಪಾಯಿಗಳನ್ನು ಮೀಸಲಾಗಿಡಲಾಗಿದೆ; ಇದರಲ್ಲಿ ೧೪೦ ಕೋಟಿ ರೂಪಾಯಿಗಳನ್ನು ಹಿರಿ ಉದ್ಯಮಗಳಿಗಾಗಿ; ೨೭ ಕೋಟಿ ರೂಪಾಯಿಗಳು ಕಿರಿ ಉದ್ಯಮ ಮತ್ತು ಕೈಗಾರಿಕೆಗಳಿಗಾಗಿ, ಮತ್ತು

೭ ಕೋಟಿ ರೂಪಾಯಿಗಳು ಖನಿಜಾಭಿವೃದ್ಧಿ ಮತ್ತು ವೈಜ್ಞಾನಿಕ ಸಂಶೋಧನೆಗಳಿಗೆ ಎಂದು ವಿಭಾಗಿಸಲಾಗಿದೆ. ಕೆಲ ಉದ್ಯಮಗಳನ್ನು ಅಂದರೆ, ಚಿತ್ತರಂಜನ ಎಂಜಿನ ಕಾರಖಾನೆ, ಉಕ್ಕಿನ ರೇಲ್ವೆ ಡಬ್ಬಿಗಳ ಕಾರಖಾನೆ—ಇವುಗಳನ್ನು ರೇಲ್ವೆ ವಿಭಾಗಕ್ಕೆ ಸೇರಿಸಿ ಅಲ್ಲಿಯ ವೆಚ್ಚದಲ್ಲಿ ಹೊಂದಿಸಲಾಗಿದೆ.

ಖಾಸಗಿ ಪ್ರಯತ್ನಗಳ ಮುಖಾಂತರ ಉದ್ಯಮಗಳ ವಿಕಾಸಕ್ಕಾಗಿ, ಉಪಕರಣಗಳ ಆಧುನಿಕೀಕರಣಕ್ಕಾಗಿ, ಬದಲಾವಣೆಗಾಗಿ, ಮಾರ್ಪಾಟಿಗಾಗಿ ಒಟ್ಟು ಸುಮಾರು ೩೮೩ ಕೋಟಿ ರೂಪಾಯಿಗಳ ವೆಚ್ಚವಾಗಬಹುದೆಂದು ಅಂದಾಜು ಮಾಡಲಾಗಿದೆ. ಹೀಗಾಗಿ ಒಟ್ಟು ಔದ್ಯೋಗಿಕ ಅಭಿವೃದ್ಧಿಗಾಗಿ ಯೋಜನೆಯ ಕಾಲಾವಧಿಯಲ್ಲಿ ೪೭೭ ಕೋಟಿ ರೂಪಾಯಿಗಳ ವೆಚ್ಚವನ್ನು ನಿರೀಕ್ಷಿಸಲಾಗಿದೆ.

ಸಾರ್ವಜನಿಕ ಕ್ಷೇತ್ರದಲ್ಲಿಯ ಔದ್ಯೋಗಿಕ ಅಭಿವೃದ್ಧಿಯಲ್ಲಿ ಹೊಸದು, ಕಬ್ಬಿಣ ಉಕ್ಕಿನ ಕಾರಖಾನೆಯನ್ನು ಸ್ಥಾಪಿಸುವ ಯೋಜನೆಯಿದೆ. ಅದು ಪ್ರಾರಂಭವಾದ ಆರು ವರುಷಗಳಲ್ಲಿ ೮೦ ಕೋಟಿ ರೂಪಾಯಿ ವೆಚ್ಚವಾಗುವುದು. ಈಗಾಗಲೆ ಕೈಯಲ್ಲಿದ್ದ ಔದ್ಯೋಗಿಕ ಕಾರ್ಯ ಯೋಜನೆಗಳು ೧೯೫೩–೫೪ ಕ್ಕೆ ಪೂರ್ತಿಯಾಗುವುವು. ಸಿಂದ್ರೀ ಗೊಬ್ಬರ ಕಾರಖಾನೆಯು ಉತ್ಪಾದನವನ್ನು ಪ್ರಾರಂಭಿಸಿದೆ. ೧೯೫೫ ರ ಸುಮಾರಿಗೆ ಚಿತ್ತರಂಜನ ಎಂಜಿನ ಕಾರಖಾನೆಯು ವರುಷಕ್ಕೆ ೧೦೦ ಎಂಜಿನುಗಳನ್ನು ತಯಾರಿಸತೊಡಗುವುದು. ಇದಕ್ಕೆ ಪೂರಕವಾಗಿ ಟಾಟಾ ಎಂಜಿನಿಯರಿಂಗ ಮತ್ತು ಲೋಕೋ–ಮೋಟಿವ್ ಕಂಪನಿಯು ವರುಷಕ್ಕೆ ೫೦ ಎಂಜಿನುಗಳನ್ನು ತಯಾರಿಸುವುದು. ಇದರಿಂದ ನಮ್ಮ ರೈಲ್ವೆಗಳ ವಾರ್ಷಿಕ ಬೇಡಿಕೆಯು ಪೂರೈಸಲ್ಪಡುವುದು; ರೈಲ್ವೆಗಳು ಈ ದೃಷ್ಟಿಯಿಂದ ಸಂಪೂರ್ಣ ಸ್ವದೇಶಾವಲಂಬಿಯಾಗುವುವು. ಯೋಜನೆಯ ಕಾಲಾವಧಿಯಲ್ಲಿ ಯಂತ್ರದ ಉಪಕರಣಗಳು, ಟೆಲಿಫೋನ್ ಸಾಧನಗಳು, ಕೇಬಲ್‌ಗಳು, ವೃತ್ತಪತ್ರ ಕಾಗದ ಮುಂತಾದವುಗಳೂ ದೇಶದಲ್ಲಿಯ ಬೇಡಿಕೆಗಳನ್ನು ಪೂರೈಸುವಷ್ಟು ಉತ್ಪಾದನವಾಗುವುದರಿಂದ ನಮ್ಮ ಆರ್ಥಿಕ ವ್ಯವಸ್ಥೆಯೂ ಭದ್ರವಾಗುವಂತಾಗುವುದು. ಅಭಿವೃದ್ಧಿಯ ಕಾರ್ಯಕ್ರಮವು ಪ್ರಗತಿ ಹೊಂದಿದಂತೆಲ್ಲ ಔದ್ಯೋಗೀಕರಣದತ್ತ ಹೆಚ್ಚು ಒಲವು ತೋರುವುದು. ಆಗ ಮೂಲ ಉದ್ಯಮಗಳು

ವಿಕಾಸವಾಗುವುದು ಆವಶ್ಯಕವೆನ್ನಿಸುವುದು. ಮುಂಧೋರಣದಿಂದ ಪಂಚ ವಾರ್ಷಿಕ ಯೋಜನೆಯು ಇಂತಹ ಮೂಲ ಉದ್ಯಮಗಳಿಗಾಗಿ ಮತ್ತು ಆನುಷಂಗಿಕ ಸಾರಿಗೆಗಾಗಿ ಎಂದು ೫೦ ಕೋಟಿ ರೂಪಾಯಿ ತೆಗೆದಿಟ್ಟಿದೆ. ಇದರಲ್ಲಿಯು ಕೆಲವು ಭಾಗವು ವಿದ್ಯುತ್ ಉಪಕರಣಗಳ ಕಾರಖಾನೆಯುನ್ನು ಪ್ರಾರಂಭಿಸಲು ಬಳಸಲ್ಪಡಲಾಗುವುದು.

ಒಂದು ವಿಶಾಲವಾದ ಗ್ರಾಮೋದ್ಯೋಗಗಳ ಕಾರ್ಯಕ್ರಮವನ್ನು ಸಿದ್ಧಪಡಿಸಲಾಗಿದ್ದು ಗ್ರಾಮಗಳಲ್ಲಿ ಉದ್ಯೋಗಿತೆಯುನ್ನು ಹೆಚ್ಚಿಸಲು ಯೋಜಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಈ ಕೆಳಗಿನ ಉದ್ಯೋಗಗಳು ಮುಖ್ಯವಾಗಿವೆ. ಖಾದಿ, ಹಗ್ಗಮಾಡುವದು, ಎಣ್ಣೆ ತೆಗೆಯುವದು, ಕಡ್ಡಿಪೆಟ್ಟಿಗೆ ಮಾಡುವುದು, ತೊಗಲಿನ ಉದ್ಯೋಗ, ಕೈಕಾಗದದ ಉದ್ಯೋಗ, ಬೆಲ್ಲ ಮಾಡುವುದು, ತಾಳೆಬೆಲ್ಲತಯಾರಿಸುವುದು, ಕಂಬಳಿ ಮಾಡುವುದು, ಜೇನು ಸಾಕುವುದು ಮುಂತಾಗಿ. ಗಿರಣಿ ಅರಿವೆಗಳ ಮೇಲೆ ಚಿಕ್ಕ ಕರವೊಂದನ್ನು ಹಾಕಿ ಖಾದಿ ಉದ್ಯಮಕ್ಕೆ ಹಣ ಒದಗಿಸಲಾಗುವುದು. ಗಿರಣಿಯಿಂದ ತಯಾರಿಸಲಾದ ಎಣ್ಣೆಯಮೇಲೆ ಕರ ಹಾಕಿ ಹಳ್ಳಿಯ ಎಣ್ಣೆಯ ಉದ್ಯಮವನ್ನು ಉತ್ತೇಜಿಸುವುದು. ಕೇಂದ್ರ ಸರಕಾರಕ್ಕೆ ಶಿಫಾರಸು ಮಾಡಲಾಗಿದೆ. ಖಾದಿ ಮತ್ತು ಗ್ರಾಮೋದ್ಯೋಗ ಅಭಿವೃದ್ಧಿ ಸಮಿತಿಯುನ್ನು ಸ್ಥಾಪಿಸುವುದಕ್ಕೆ ಈ ಸಮಿತಿಯು ರಾಜ್ಯ ಸರಕಾರ ಮತ್ತು ಇತರ ಗ್ರಾಮೋದ್ಯೋಗ ಸಂಸ್ಥೆಗಳೊಡನೆ ಸಹಕರಿಸಿ ಕಾರ್ಯ ಮಾಡಬೇಕೆಂದು ಬಗೆಯಲಾಗಿದೆ. ಸಹಕಾರಿ ತತ್ವದ ಮೇಲೆ ಕಿರಿ ಉದ್ಯಮಗಳನ್ನು ಸಂಘಟಿಸಿ ಅವುಗಳನ್ನು ಹಿರಿ ಉದ್ಯಮಗಳೊಂದಿಗೆ ಜೋಡಿಸುವ ಯೋಜನೆಯಿದೆ.

## ಸಾರಿಗೆ ಮತ್ತು ಸಂಪರ್ಕ:

ಸಾರಿಗೆ ಸಂಪರ್ಕ ಕಾರ್ಯಕ್ರಮದಲ್ಲಿ ಒಟ್ಟು ವೆಚ್ಚದಲ್ಲಿ ಅರ್ಧದಕಿಂತ ಹೆಚ್ಚು ರೈಲ್ವೆಯ ಮೇಲೆ ವೆಚ್ಚ ಮಾಡಲಾಗುವುದು. ವಾರ್ಷಿಕ ಸವಕಳಿಯುನ್ನು ಪೂರೈಸಲಿಕ್ಕೆ ವೆಚ್ಚ ಮಾಡಬೇಕಾದ ೩೦ ಕೋಟಿ ರೂಪಾಯಿಗಳಲ್ಲದೆ ಹೊಸ ಕಾರ್ಯಕ್ಕೆ ವರ್ಷಕ್ಕೆ ೫೦ ಕೋಟಿ ರೂಪಾಯಿ ವೆಚ್ಚ ಮಾಡುವ

ಯೋಜನೆಯಿದೆ. ಇದರಿಂದ ರೈಲ್ವೆಗಳು ತಮ್ಮ ಯುದ್ಧಕಾಲೀನ ಸವಕಳಿ-ಕೊರತೆಯನ್ನು ತುಂಬಿಕೊಳ್ಳುವುದಲ್ಲದೆ ಹೊಸದಾಗಿ ಕೆಲಭಾಗಗಳಲ್ಲಿ ಬೆಳಗೆ-ಯನ್ನು ಸಾಧಿಸಲು ಅನುಕೂಲತೆ ಪಡೆವುವು. ಈ ಐದು ವರುಷದ ಕಾಲಾ-ವಧಿಯಲ್ಲಿ ಹೊಸ ರೈಲುಮಾರ್ಗರಚನೆಗೆ ೩೦ ಕೋಟಿ ರೂಪಾಯಿ ತೆಗೆದಿ-ಟ್ಟಿದೆ. ಈ ಕಾರ್ಯವನ್ನು ಮುಖ್ಯತಃ ಪುನರ್ನಿವೇಶನವೆಂದೇ ಭಾವಿಸಬೇಕು.

ರಾಜಮಾರ್ಗಗಳ ಅಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರಕಾರ-ಗಳು ಕೂಡಿ ಸುಮಾರು ೧೦೦ ಕೋಟಿ ರೂಪಾಯಿ ವೆಚ್ಚ ಮಾಡಲಾಗುವುದು. ಇದರಲ್ಲಿಯ ಒಂದು ನಾಲ್ಕಾಂಶದಷ್ಟು ಹಣವು ರಾಷ್ಟ್ರೀಯ ರಾಜಮಾರ್ಗಗಳ ಅಭಿವೃದ್ಧಿಗಾಗಿ ತೆಗೆದಿಟ್ಟಿದೆ. ಉಳಿದುದು ರಾಜ್ಯಗಳಲ್ಲಿಯ ಮಾರ್ಗಗಳಿಗಾಗಿ ಕಾದಿಡಲಾಗಿದೆ. ರಾಜಮಾರ್ಗಗಳ ಬೆಳಗೆಯಲ್ಲಿ ಸ್ಥಾನಿಕ ಮಾನವಬಲದ ಸಂಘಟನೆಗೆ ಸಾಕಷ್ಟು ಅವಕಾಶವಿದೆ. ಕೆಲ ರಾಜ್ಯಗಳಲ್ಲಿ ಹಳ್ಳಿಗರು ಸ್ವಯಂ ಸ್ಫೂರ್ತಿಯಿಂದ ಸಹಕಾರಬುದ್ಧಿಯಿಂದ ಮಾರ್ಗರಚನೆಯ ವೆಚ್ಚವನ್ನು ತಮ್ಮ ಪರಿಶ್ರಮದ ರೀತಿಯಲ್ಲಿ ದಾನಮಾಡಿದ್ದಾರೆ. ಅನೇಕರು ಭೂಮಿ ದಾನ ಮಾಡಿದ್ದಾರೆ; ಅನೇಕರು ಹಣವನ್ನು ದಾನಮಾಡಿದ್ದಾರೆ; ಇಷ್ಟಾಗಿ ಉಳಿದುದು ಲೋಕಲ್ ಬೋರ್ಡು ಇಲ್ಲವೆ ರಾಜ್ಯಸರಕಾರದವರು ಕೊಟ್ಟಿ-ದ್ದಾರೆ. ಸಾರ್ವಜನಿಕರಿಂದ ಹೀಗೆ ಸಹಕಾರ ದೊರೆತರೆ ಸರಕಾರದ ಹಣದ ಉಪಯೋಗವು ಇಮ್ಮಡಿ ಪ್ರತಿಫಲವನ್ನು ದೊರಕಿಸುವುದು. ಈ ರೀತಿಯ ಹಳ್ಳಿಗರ ಸಹಕಾರದಿಂದ ಸುಮಾರು ೧೬೦೦೦ ಗ್ರಾಮಮಾರ್ಗಗಳ ರಚನೆ-ಯಾಗುವುದೆಂದು ಎಣಿಸಲಾಗಿದೆ. ಈ ಸಹಕಾರದ ಪದ್ಧತಿಯು ದೇಶ ವ್ಯಾಪಿಯಾಗಿ ಬೆಳೆಯಬೇಕು.

ರೈಲು ಮತ್ತು ರಾಜಮಾರ್ಗಗಳ ಅಭಿವೃದ್ಧಿಯಂತೆ ಬಂದರಗಳ ಬೆಳ-ಗೆಯೂ ಅವಶ್ಯಕವಾಗಿದೆ. ಈಗಿರುವ ಐದು ದೊಡ್ಡ ಬಂದರಗಳು ಸಮುದ್ರ ವ್ಯಾಪಾರದ ಎಲ್ಲ ಸರಕುಗಳನ್ನು ಸರಾಗವಾಗಿ ಸಾಗಿಸಲಾರವು. ಈ ಮೊದಲು ವಿಭಜನೆಯ ಪೂರ್ವದಲ್ಲಿ ಕರಾಚಿಯಿಂದ ನಡೆಯುತ್ತಿದ್ದ ಬಂದರ ವ್ಯವಹಾರವು ಈಗ ಅದನ್ನು ಬಿಟ್ಟು ಉಳಿದ ಬಂದರಗಳಲ್ಲಿಯೇ ನಡೆಯ-ಬೇಕಾಗಿ ಬಂದಿದೆ; ಈಗಿದ್ದ ಬಂದರಗಳಲ್ಲಿಯ ಉಪಕರಣ-ಸಲಕರಣೆಗಳು ಹಳೆಯವಾಗಿವೆ; ಅವುಗಳನ್ನು ಆಧುನಿಕಮಾನಕ್ಕೆ ತರಲೇಬೇಕು; ಮತ್ತು

ಕಲ್ಲೆಣ್ಣೆಯ ಶುದ್ಧೀಕರಣಕ್ಕೆ ಸೌಕರ್ಯ ಒದಗಿಸಿಕೊಡಬೇಕು. ಈ ಕಾರಣ ಗಳಿಗಾಗಿ ಬಂದರಗಳ ವಿಕಾಸಾಭಿವೃದ್ಧಿಯು ಅತ್ಯಗತ್ಯವಾಗಿದೆ. ಕಾಂಡ್ಲಾ-ದಲ್ಲಿಯ ಹೊಸ ಬಂದರ ಕಟ್ಟುವ ಯೋಜನೆಯಲ್ಲಿ ೧೨ ಕೋಟಿ ರೂಪಾಯಿ ಕಾಯ್ದಿಡಲಾಗಿದೆ. ಎಣ್ಣೆಯ ಶುದ್ಧೀಕರಣಸೌಕರ್ಯಕ್ಕಾಗಿ ೮ ಕೋಟಿ ರೂಪಾಯಿ ಮತ್ತು ೧೨ ಕೋಟಿ ರೂಪಾಯಿಗಳನ್ನು ಈಗಿದ್ದ ಬಂದರಗಳ ಅಧಿಕಾರಿಗಳಿಗೆ ಸಾಲವೆಂದೂ ಅದರಿಂದ ಅವರು ಆ ಬಂದರಗಳನ್ನು ಆಧುನಿಕ ಮಟ್ಟಕ್ಕೆ ತರಲು ಪ್ರಯತ್ನಿಸಬೇಕೆಂದೂ ಕೊಡಲಾಗಿದೆ.

ಸಾರಿಗೆಯ ಕಾರ್ಯಕ್ರಮದಲ್ಲಿ ಹೊಸ ಹೆಜ್ಜೆಯೊಂದನ್ನು ಇಡಲಾಗಿದೆ. ಜಲಯಾನ ಸೌಕರ್ಯವನ್ನು ಒದಗಿಸಬೇಕೆಂದು ಯೋಜನೆಯು ನಿರೀಕ್ಷಿಸಿದೆ. ಕರಾವಳಿಯ ವ್ಯಾಪಾರ ವ್ಯವಹಾರವೆಲ್ಲ ಭಾರತೀಯ ಹಡಗುಗಳಿಂದಲೇ ನಡೆಯಬೇಕೆಂದು ಆಶಿಸಿ, ಅನಂತರ ಸಾಗರದಾಚೆಯ ಸಾರಿಗೆಯಲ್ಲಿಯೂ ಅನುಕೂಲ ಮಾಡಿಕೊಳ್ಳಬೇಕೆಂದೂ ಮಾಡಿದೆ. ಈ ಉದ್ದೇಶಗಳನ್ನು ಕಣ್ಣು-ಮುಂದಿಟ್ಟುಕೊಂಡು ವಿಶಾಖಾಪಟ್ಟಣದಲ್ಲಿ ಹಡಗುಗಳನ್ನು ಹೆಚ್ಚಾಗಿ ಕಟ್ಟಲು, ಹೆಚ್ಚಿನ ರಚನಾಸ್ಥಾನಗಳನ್ನು ನಿರ್ಮಿಸಲು ಯೋಜನೆಯು ವ್ಯವಸ್ಥೆ ಮಾಡಿದೆ. ಅದರಿಂದ ಕರಾವಳಿ ವ್ಯವಹಾರಕ್ಕಾಗಿ ೧೦೦೦೦೦ ಟನ್ನು ಭಾರ-ದಷ್ಟು ಹೊತ್ತವುಳ್ಳ ಹಡಗುಗಳನ್ನು ರಚಿಸಲು ಸಾಧ್ಯವಾಗುವುದಲ್ಲದೆ ರಚ-ನೆಯ ಬೆಲೆಯನ್ನು ತಗ್ಗಿಸಲೂ ಸಾಧ್ಯವಾಗುವುದು. ಅಲ್ಲದೆ, ಈಗ ಕಾರ್ಯ ನಿರತವಾಗಿರುವ ಹಡಗು ಕಂಪನಿಗಳಿಗೆ ಹೆಚ್ಚಿನ ಸೌಕರ್ಯ ಒದಗಿಸಿ-ಕೊಳ್ಳಲು ನೆರವಾಗಲು ಸಾಲ ಕೊಡುವ ಹಂಚಿಕೆಯನ್ನು ಯೋಜನೆಯು ಇಟ್ಟುಕೊಂಡಿದೆ.

ನಾಗರಿಕ ವಿಮಾನ ಸಾರಿಗೆಯೂ ಇನ್ನೊಂದು ಹೊಸ ಹೆಜ್ಜೆ. ಸದ್ಯದ ಸಾರಿಗೆಯ ಭಾರವನ್ನು ಮತ್ತು ಉತ್ಕಟತೆಯನ್ನು ಅನುಲಕ್ಷಿಸಿದರೆ ಈಗಿದ್ದ ವಿಮಾನ ಕಂಪನಿಗಳು ವಿಮಾನ ಸಾರಿಗೆಯ ಭಾರವನ್ನು ಮಿತವ್ಯಯದಿಂದ ಹೊತ್ತುಕೊಂಡಾವು ಎಂದೆನ್ನಿಸುವುದಿಲ್ಲ. ಮಿತವ್ಯಯವೇ ಗುರಿಯಾದಾಗ ಅವೆಲ್ಲವೂ ವಿಲೀನಹೊಂದಿ ಒಂದೇ ಘಟಕವಾಗುವುದೇ ಯೋಗ್ಯ ಉಪಾಯ ವಾಗುವುದು. ವಿಮಾನಸಾರಿಗೆಯ ರಾಷ್ಟ್ರೀಕರಣಕ್ಕಾಗಿ ಆ ಕಂಪನಿಗಳಿಗೆ

ಪರಿಹಾರದ್ರವ್ಯ ಕೊಡಲಿಕ್ಕೆ ಮತ್ತು ಹೊಸ ವಿಮಾನಗಳನ್ನು ಕೊಳ್ಳಲಿಕ್ಕೆ ಒಂಭತ್ತುವರೆ ಕೋಟಿ ರೂಪಾಯಿಗಳನ್ನು ಕಾದಿಡಲಾಗಿದೆ.

## ಸಮಾಜಸೇವೆ ಮತ್ತು ಪುನರ್ನಿವೇಶನ :

ಸಮಾಜಸೇವೆಗೆಂದು ಯೋಜನೆಯು ೩೪೦ ಕೋಟಿ ರೂಪಾಯಿಗಳನ್ನು ತೆಗೆದಿಟ್ಟಿದೆ. ಇದರಲ್ಲಿಯು ೧೫೬ ಕೋಟಿ ಶಿಕ್ಷಣಕ್ಕೆ, ೧೦೦ ಕೋಟಿ ವೈದ್ಯಕೀಯ ಮತ್ತು ಆರೋಗ್ಯ ಸೇವೆಗೆ, ೪೯ ಕೋಟಿ ವಸತಿಸೌಕರ್ಯಕ್ಕೆ, ೨೯ ಕೋಟಿ ಹಿಂದುಳಿದ ವರ್ಗದವರಿಗಾಗಿ, ಮತ್ತು ೭ ಕೋಟಿ ರೂಪಾಯಿಗಳು ಕಾರ್ಮಿಕರಿಗೆ ಮತ್ತು ಕಾರ್ಮಿಕರ ಕಲ್ಯಾಣಕ್ಕಾಗಿ ಎಂದು ಹಂಚಲಾಗಿದೆ. ಶಿಕ್ಷಣದ ವೆಚ್ಚದಲ್ಲಿ, ಸ್ವಯಂಪ್ರೇರಣೆಯಿಂದ ಸಮಾಜ ಕಲ್ಯಾಣ ಕಾರ್ಯ ಮಾಡುವ ಸಂಸ್ಥೆಗಳಿಗೆ ಸಹಾಯಧನವೆಂದು ೪ ಕೋಟಿ ರೂಪಾಯಿಗಳನ್ನು ಕಾದಿಡಲಾಗಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣಕ್ಕಾಗಿ ಕೇಂದ್ರ ಸರಕಾರದಿಂದ ೨೦ ಕೋಟಿ ಮೀಸಲಾಗಿಡಲಾಗಿದೆ. ಹೀಗೆ ವೆಚ್ಚ ಮಾಡುವುದರಿಂದ ೧೯೪೯–೫೦ ರ ವೆಚ್ಚದಕಿಂತ ೪೦ ಶತಾಂಶ ಹೆಚ್ಚು ವೆಚ್ಚವನ್ನು ವಾರ್ಷಿಕವಾಗಿ ಮಾಡಿದಂತಾಗುವುದು. ಇದರಲ್ಲಿ ರಾಜ್ಯಗಳಲ್ಲಿ ಶಿಕ್ಷಣಾ ಸೌಕರ್ಯದಲ್ಲಿ ವಿಕಾಸವಾಗುವುದು.

ಆರೋಗ್ಯ ವಿಭಾಗವಲ್ಲಿ ಕೇಂದ್ರದ ಯೋಜನೆಯಲ್ಲಿ ಮಲೇರಿಯಾ ನಿಯಂತ್ರಣವು ರಾಜ್ಯಸರಕಾರದ ಸಹಕಾರದೊಂದಿಗೆ ನಡೆಯುವ ಕಾರ್ಯವಾಗಿದೆ ಈ ಯೋಜನೆಯು ಕಾರ್ಯಗತವಾದಾಗ ಹಳ್ಳಿಗಳಲ್ಲಿಯು ೨೦ ಕೋಟಿ ಜನರಿಗೆ ಮಲೇರಿಯಾದಿಂದ ಸಂರಕ್ಷಣಾ ಒದವಿಸಿದಂತಾಗುವುದು. ಡಿ. ಡಿ. ಟಿ. ಯನ್ನು ಸುಲಭ ಬೆಲೆಗೆ ಒದವಿಸಲು ಎರಡು ಡಿ. ಡಿ. ಟಿ. ಕಾರಖಾನೆಗಳನ್ನು ಸ್ಥಾಪಿಸುವುದಕ್ಕೂ ಯೋಜನೆಯಲ್ಲಿ ಅವಕಾಶ ಉಂಟು ಮಾಡಲಾಗಿದೆ. ರಾಜ್ಯ ಸರಕಾರಗಳ ಆರೋಗ್ಯ ವಿಭಾಗದಲ್ಲಿ ೩೯ ಕೋಟಿ ರೂ ಗಳ ವೆಚ್ಚ ಮಾಡಬೇಕೆಂದಿದೆ ಇದು ಕುಡಿಯುವ ನೀರಿನ ಪೂರೈಕೆ, ಕೊಳಚೆ ನೀರಿನ ನಿರ್ಮೂಲನ, ಮುಂತಾದವುಗಳಿಗಾಗಿ ಬಳಸಲಾಗುವುದು.

ಆರು ಹಿರಿ ಉದ್ಯಮಗಳಲ್ಲಿ ಪ್ರಾವಿಡೆಂಟ ಫಂಡಿನ ವ್ಯವಸ್ಥೆ ಮಾಡಲಾಗಿರುವುದರಿಂದ ಕಾರ್ಮಿಕರಿಗಾಗಿ ೧೫೦೦೦೦ ಮನೆಗಳನ್ನು ಕಟ್ಟಲು

ಸಾಧ್ಯವಾಗುವುದು. ಇದರ ವೆಚ್ಚವು ಸುಮಾರು ೩೯ ಕೋಟಿಯಾಗುವುದು. ಇದಲ್ಲದೆ ಕೆಲ ರಾಜ್ಯಗಳಲ್ಲಿ ಕೆಳತರಗತಿಯ ನೌಕರರಿಗಾಗಿ ವಸತಿ ನಿರ್ಮಿಸುವ ಯೋಜನೆಗಳೂ ಇವೆ. ವಸತಿನಿರ್ಮಾಣದ ಒಟ್ಟು ವೆಚ್ಚವು ೪೯ ಕೋಟಿ-ಯಷ್ಟಾಗುವುದು.

ಹಿಂದುಳಿದ ವರ್ಗದವರ ಉದ್ಧಾರಕ್ಕಾಗಿ ಯೋಜನೆಯಲ್ಲಿ ಕಾದಿಟ್ಟ ೨೯ ಕೋಟಿ ರೂಪಾಯಿಗಳಲ್ಲದೆ, ಕೇಂದ್ರ ಸರಕಾರವು ಕೋಷ್ಟಕಿತ ಪಂಗಡ-ಗಳ ಕ್ಷೇತ್ರಾಭಿವೃದ್ಧಿಗಾಗಿ ೯ ಕೋಟಿ ರೂಪಾಯಿ ಮೀಸಲಾಗಿಟ್ಟಿದೆ.

ನಿರ್ವಾಸಿತರ ಪುನರ್ನಿವೇಶನಕ್ಕಾಗಿ ಯೋಜನೆಯಲ್ಲಿ ೮೫ ಕೋಟಿ ರೂಪಾಯಿ ಕಾದಿಡಲಾಗಿದೆ. ಈ ಹಣವು ೧೯೫೩-೫೪ ವರೆಗಿನ ಕಾಲಾವಧಿಯವರೆಗಿನ ವೆಚ್ಚವೆಂದು ಗಣಿಸಲಾಗಿದೆ. ಪೂರ್ವವಲಯದಲ್ಲಿ ವಲಸೆ ಬರುವವರ ಸಮಸ್ಯೆಯು ತಲೆತಿನ್ನುತ್ತಿದೆ. ಇದರಿಂದ ಈ ದಿಕ್ಕಿನಲ್ಲಿ ಸರಕಾರದ ವೆಚ್ಚವು ಕೆಲವು ಕಾಲಾವಧಿಯವರೆಗಾದರೂ ಹೆಚ್ಚಾಗಿಯೆ ಆಗುವುದು.

## ಆದಾಯ ಮತ್ತು ಉದ್ಯೋಗಿತೆಯ ದೃಷ್ಟಿಯಿಂದ ಯೋಜನೆಯ ಯೋಗ್ಯತೆ

೧೯೫೦-೫೧ರಲ್ಲಿ ರಾಷ್ಟ್ರೀಯ ಆದಾಯವು ೯೦೦೦ ಕೋಟಿ ರೂಪಾಯಿಗಳಷ್ಟಿದ್ದು ಯೋಜನೆಯ ಅವಧಿ ಮುಗಿಯುವಷ್ಟರಲ್ಲಿ ೧೦,೦೦೦ ಕೋಟಿ-ಯಷ್ಟಾಗುವುದೆಂದು ಲೆಕ್ಕಿಸಲಾಗಿದೆ. ಇದರಲ್ಲಿಯ ೨೦ ಶತಾಂಶ ಹಣವು ಪುನಃ ಬಂಡವಲಾಗಿ ಬಳಸಲ್ಪಟ್ಟರೂ ರಾಷ್ಟ್ರೀಯ ಆದಾಯವು ಹೆಚ್ಚುತ್ತಲೇ ಹೋಗುವುದು. ಹೀಗೆ ಗಳಿಸಿದ ಹಣವನ್ನು ಅಂಶತಃ ಪುನಃ ತೊಡಗಿಸು-ವುದರಿಂದ ಹೆಚ್ಚು ಜನರಿಗೆ ಉದ್ಯೋಗ ಕಲ್ಪಿಸಿಕೊಡಲು ಆಗುವುದು. ಈ ವರ್ತುಲದ ಕಾರ್ಯಗತಿಯು ಪ್ರಾರಂಭದಲ್ಲಿ ವಿಲಂಬಿತವಾಗಿದ್ದರೂ ಔದ್ಯೋಗೀಕರಣವು ವ್ಯಾಪಕವಾಗಿ ಬೆಳೆದಂತೆಲ್ಲ ಪ್ರಗತಿ ಸಾಧಿಸುತ್ತ ಹೋಗುವುದು.

---

ಪ್ರಕರಣ ಐದು:

# ಆಡಳಿತ ಮತ್ತು ಸಾರ್ವಜನಿಕ ಸಹಕಾರ

## ಯೋಜನೆಯ ಯಶಸ್ಸು ಹೇಗೆ ಸಾಧ್ಯ?

ಯೋಜನೆಯ ಕಾರ್ಯಕ್ರಮವು ನಿಯಮಿತ ವೇಳೆಯಲ್ಲಿ ಕಾರ್ಯಕಾರಿಯಾಗಬೇಕಾದರೆ ಸರಕಾರದ ಸತ್ತೆಯು ಜತೆಗೆ ಸಾರ್ವಜನಿಕರ ಸಹಕಾರವು ಅಗತ್ಯ. ಎರಡೂ ವಿಭಾಗಗಳು ರಥದ ಎರಡು ಗಾಲಿಗಳಂತೆ ಹೊಂದಿಕೊಂಡು ಸಾಗಿದರೆ ಯೋಜನೆಯ ಪ್ರಗತಿಯು ನಿಶ್ಚಿತ ದಾರಿಗುಂಟ ಸಾಗುವುದು. ಇದುವರೆಗೆ ಸರಕಾರದ ಸತ್ತೆಯು ದೇಶದಲ್ಲಿ ಶಾಂತತೆ ಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳಲು, ಕಂದಾಯ ವಸೂಲಿ ಮಾಡಲು, ಲಕ್ಷ್ಯ ಪೂರೈಸುತ್ತಿತ್ತು. ಆದರೆ ಈಗ ಯೋಜನೆಯು ಕಾರ್ಯಕಾರಿಯಾಗುವ ಹಂಚಿಕೆಯಲ್ಲಿ ಅದು ಮಾನವನ ಅಭಿವೃದ್ಧಿ, ಸಾಂಪತ್ತಿಕ ಬೆಳವಣಿಗೆ, ಬಡತನದ ನಿರ್ಮೂಲನ ಮುಂತಾದ ಉದ್ಧಾರಕಾರ್ಯದ ಕಡೆಗೆ ಲಕ್ಷ್ಯ ಪೂರೈಸಬೇಕಾಗಿ ಬಂದಿದೆ. ಇವನ್ನೆಲ್ಲ ಪ್ರಜಾಪ್ರಭುತ್ವದ ರಚನೆಯ ಹಿನ್ನೆಲೆಯಲ್ಲಿ ಸಾಧಿಸಬೇಕಾಗಿದೆ. ಸರಕಾರದಲ್ಲಿ ಅಧಿಕಾರ ಪಡೆದ ರಾಜಕೀಯ ಪಕ್ಷದ ಮುಂದಾಳುತ್ವಕ್ಕೂ ಆಡಳಿತ ನಡೆಸುವ ಸೇವಕವರ್ಗಕ್ಕೂ ಒಳ್ಳೆಯ ಸಂಬಂಧವಿರುವುದು ಅಗತ್ಯವಾಗಿದೆ. ಮೊದಲ ವರ್ಗದವರು ಧೋರಣೆಗಳನ್ನು ರೂಪಿಸುವವರಾದರೆ ಎರಡನೆಯ ವರ್ಗದವರು ಅವುಗಳನ್ನು ಕಾರ್ಯಕಾರಿ ಮಾಡುವ ಹೊಣೆಯುಳ್ಳವರಾಗುವರು. ಒಬ್ಬರು ಮತ್ತೊಬ್ಬರ ವಿಶ್ವಾಸ-ಸಹಕಾರಗಳಿಲ್ಲದೆ ಮುಂದೆ ಸಾಗಲಾರರು ಎಂಬುದನ್ನು ಅರಿಯುವುದೇ ಮಹತ್ವದ ಮಾತಾಗಿದೆ.

ಮೊದಲನೆಯ ವರ್ಗದ—ಅಧಿಕಾರ ಪಡೆದ ರಾಜಕೀಯ ಪಕ್ಷದ ಹೊಣೆ ಹೆಚ್ಚಿನದು. ಅದರ ಅಧಿಕಾರವು ಜನತೆಯ ಒಲವು ನಿಲುವುಗಳನ್ನು ಅವ-ಲಂಬಿಸಿರುವುದು. ಜನತೆಯ ಆಸೆ ಆಕಾಂಕ್ಷೆಗಳೇನು? ಅದರ ಆವಶ್ಯಕತೆಗಳು ಯಾವವು? ಮತ್ತು ಅವುಗಳನ್ನು ಸಾಧಿಸುವ ರೀತಿ ಪದ್ಧತಿಗಳು ಯಾವವು, ಎಂಬುದನ್ನು ಅಧಿಕಾರಾರೂಢವಾಗಿದ್ದ ರಾಜಕೀಯ ಪಕ್ಷವು ತಿಳಿದುಕೊಂಡು ತನ್ನ ಕಾರ್ಯಕ್ರಮುವನ್ನು ರೂಪಿಸಿಕೊಳ್ಳಬೇಕಾಗುವುದು. ಯಾವ ತತ್ವ ಧೋರಣೆಗಳನ್ನು ರೂಪಿಸಿದರೂ ಒಟ್ಟಿನಲ್ಲಿ ಅವು ಜನಹಿತವನ್ನು ಸಾಧಿಸು ವಂತಹವಾಗಿರಬೇಕು. ಆ ಧ್ಯೇಯಧೋರಣೆಗಳಲ್ಲಿ ಜನತೆಯ ವಿಶ್ವಾಸ ಮೂಡಿ ನಿಂತಿರಬೇಕು. ಅಂದರೆ ಅವು ಕಾರ್ಯಕಾರಿಯಾಗಲು ಒಳ್ಳೆಯ ವಾತಾವರಣ ನಿರ್ಮಿಸಿದಂತಾಗಿ ಅರ್ಧ ಕೆಲಸ ಸಾಧಿಸಿದಂತಾಗುವುದು.

ಧೋರಣೆಯನುಸಾರವಾಗಿ ಗೊತ್ತುಮಾಡಿದ ಕಾರ್ಯಕ್ರಮುಗಳನ್ನು ಕಾರ್ಯಕಾರಿ ಮಾಡುವಾಗ ಅಧಿಕಾರಿಪಕ್ಷವು ಆಡಳಿತ ನಡಸುತ್ತಿರುವ ಸೇವಕವರ್ಗಕ್ಕೆ ಅನೇಕ ಬಗೆಯಾಗಿ ಅಧಿಕಾರ ಹಸ್ತಾಂತರ ಮಾಡಬೇಕಾ-ಗುವುದು. ಧೋರಣೆಯನ್ನು ರೂಪಿಸುವಾಗ ಉಚ್ಚಮಟ್ಟದ ಅನುಭವಿಕ ಸೇವಕರ ಸಲಹೆ ಪಡೆದರೆ ಕಾರ್ಯಕ್ರಮುಗಳ ಪ್ರಗತಿ ನಿಶ್ಚಿತವಾಗುವುದು. ಸರಕಾರವು ಸಾರಿಹೇಳಿದ ಧೋರಣೆಯನ್ನು ಕಾರ್ಯಕಾರಿಯಾಗುವಂತೆ ಮಾಡುವುದು ಸೇವಕವರ್ಗದ ಕರ್ತವ್ಯವೆಂದಾಗಿದ್ದರೂ ಅನುಭವಿಕ ಆಡಳಿತ ಗಾರರ ಸಲಹೆಯನ್ನು ಕಾಲಕಾಲಕ್ಕೆ ಪಡೆಯುವುದು ಸರಕಾರದ ದೃಷ್ಟಿ-ಯಲ್ಲಿರಬೇಕು. ಏಕೆಂದರೆ ಸರಕಾರ ಮತ್ತು ಸೇವಕವರ್ಗದಲ್ಲಿ ಪರಸ್ಪರ ವಿಶ್ವಾಸವಿದ್ದರೇನೆ ಕಾರ್ಯವು ಕುಂಠಿತವಾಗದೆ, ಉತ್ಸಾಹ ಹ್ರಾಸವಾಗದೆ, ವೇಳೆ ಹಾಳಾಗದೆ ಸಿದ್ಧಿ ಸಾಧಿಸುವ ಸಂಭವ ಹೆಚ್ಚು. ಪರಸ್ಪರ ವಿಶ್ವಾಸ ಸಹಕಾರದಿಂದ ಕಾರ್ಯ ನಡಸಿದಾಗ ಪರಸ್ಪರರ ಹೊಣೆಗಾರಿಕೆಯ ಅರಿವು ಪರಸ್ಪರರಲ್ಲಿ ಉಂಟಾಗಿ ನಿರಾತಂಕವಾಗಿ ಕಾರ್ಯ ನಡೆವುದು.

ಇನ್ನೂ ಇದು ಸಮಸ್ಯೆಯ ರೂಪದಲ್ಲಿರುವುದು. ಅಧಿಕಾರ ವಹಿಸಿದ ಪಕ್ಷದವರು ಆಂದೋಲನ ಮಾಡಿದ ಉತ್ಸಾಹಿಗಳು; ಆದುದರಿಂದ ಆಡಳಿತದ ಅನುಭವ ಕಡಿಮೆಯೆಂದರೆ ತಪ್ಪಾಗದು. ಸ್ವಾತಂತ್ರ್ಯದ ಅನಂತರ ದೇಶದಲ್ಲಿನ

ಉಚ್ಚ ಮಟ್ಟದ ಅನೇಕ ಅಧಿಕಾರಿಗಳು ಕಾರಣಾಂತರದಿಂದ ಕಡಿಮೆಯಾದುದು ಒಂದು ದೌರ್ಬಲ್ಯವೆನ್ನಿಸಿದರೆ, ಕಾರ್ಯವ್ಯಾಪ್ತಿಯ ವೈಶಾಲ್ಯದ ಮೂಲಕ ಹೆಚ್ಚು ಆಡಳಿತಗಾರರು ಬೇಕಾಗಿ, ಸ್ಥಾನಕ್ಕೆ ಬಂದವರಲ್ಲಿ ಅನೇಕರು ಹೊಸಬರೂ ಅನುಭವವಿಲ್ಲದವರೂ ಸಂಪ್ರದಾಯದ ಮಹತ್ವವನ್ನು ಅರಿಯದವರೂ ಆಗಿದ್ದಾರೆ. ಆದುದರಿಂದ ಈಗ ಉಳಿದ ಹಿರಿಯ ಆಡಳಿತಾಧಿಕಾರಿಗಳ ಹೊಣೆ ಹೆಚ್ಚಿನದಾಗಿದೆ. ಅವರು ರಾಷ್ಟ್ರೀಯ ಮನೋವೃತ್ತಿಯಿಂದ ಆಡಳಿತ ಯಂತ್ರವನ್ನು ಸುಭದ್ರವಾಗುವಂತೆ ಒಂದು ಸಂಪ್ರದಾಯಕ್ಕೆ ಅಂಟಿಕೊಳ್ಳುವಂತೆ ಮಾಡುವುದರ ಕಡೆಗೆ ಗಮನವೀಯಬೇಕಾಗಿದೆ. ಅದರಂತೆಯೆ ಅಧಿಕಾರ ಪಡೆದ ಮಂತ್ರಿವರ್ಗದವರೂ ತಾಳ್ಮೆ ತೂಕವಹಿಸಿ, ಆಡಳಿತ ವರ್ಗದವರಲ್ಲಿ ವಿಶ್ವಾಸ ಹುಟ್ಟಿಸಿ, ಒಟ್ಟಿನಲ್ಲಿ ಸಮರಸದ ಸಂಬಂಧ ಉಂಟಾಗಿಸಿ ಸ್ವಾತಂತ್ರ್ಯ ಪಡೆದ ದೇಶಕ್ಕೆ ಮೇಲ್ತರಗತಿಯ ಸೇವಕವರ್ಗವನ್ನು ನಿರ್ಮಿಸುವುದರಲ್ಲಿ ನೆರವಾಗಬೇಕಾಗಿದೆ. ರಾಷ್ಟ್ರದ ಹಿತದ ದೃಷ್ಟಿಯಿಂದ, ಯೋಜನೆಯ ಯಶಸ್ಸಿನ ದೃಷ್ಟಿಯಿಂದ ಸಾರ್ವಜನಿಕ ಆಡಳಿತ ರಚನೆಯಲ್ಲಿ ಸುಧಾರಣೆಗಳಾಗುವುದು ಅತ್ಯಗತ್ಯವಾಗಿದೆ. ಈ ಸುಧಾರಣೆ ನಡೆಯುವುದು ಕಾಲಾಂತರದಲ್ಲಿ ಪರಿಣಾಮಕಾರಿಯಾಗುವುದು. ಅದು ಸರಕಾರದ ಕಾರ್ಯ. ಅದರ ಜತೆಗೆ ಸಾರ್ವಜನಿಕರ ಸಹಕಾರವು ಒದಗಿದರೆ, ಯೋಜನೆಯು ಗೊತ್ತುಮಾಡಿದ ಕಾಲಾವಧಿಯಲ್ಲಿ ಸಂಪೂರ್ಣ ಕಾರ್ಯಕಾರಿಯಾಗುವುದು.

## ಸಾರ್ವಜನಿಕ ಆಡಳಿತದಲ್ಲಿ ಸುಧಾರಣೆ

ಸಾರ್ವಜನಿಕ ಆಡಳಿತದಲ್ಲಿ ಸುಧಾರಣೆಯುಂಟಾಗಬೇಕಾದರೆ ಸೇವಕ ವರ್ಗದಲ್ಲಿ ಏಕನಿಷ್ಠತೆ, ಕಾರ್ಯಕ್ಷಮತೆ, ಹೆಚ್ಚಬೇಕಲ್ಲದೆ ಆಡಳಿತದಲ್ಲಿ ಮಿತವ್ಯಯ ಮತ್ತು ಸಾರ್ವಜನಿಕರ ಸಹಕಾರ ಇವು ಕಂಡುಬರಬೇಕು. ಇವು ಪರಸ್ಪರಾವಲಂಬಿಯಾಗಿವೆ ಮತ್ತು ಪರಸ್ಪರ ಸಂಬಂಧವುಳ್ಳವಾಗಿವೆ. ಉಚ್ಚಮಟ್ಟದ ಏಕನಿಷ್ಠತೆ ಇರದಿದ್ದರೆ, ಯಾವ ಸಂಘಟನೆಯೂ ಕಾರ್ಯಕ್ಷಮವಾಗಲಾರದು, ಸಮಾಜಕ್ಕೆ ಸಮಾಧಾನಕಾರಕವಾದ ಸೇವೆ ಸಲ್ಲಿಸಲಾರದು. ಯಾವ ಸಂಘಟನೆಯಲ್ಲಿ ಸಾರ್ವಜನಿಕ ಹಿತಬುದ್ಧಿ, ಪ್ರಾಮಾಣಿಕತೆ

ಕರ್ತವ್ಯನಿಷ್ಠೆ ಇದೆಯೊ ಅಲ್ಲಿ ತಾನಾಗಿಯೆ ಸಾರ್ವಜನಿಕರ ಸಹಕಾರ ಉಂಟಾಗುವುದು. ಸಾರ್ವಜನಿಕರ ಸಹಕಾರವಿದ್ದಲ್ಲಿ ಆಡಳಿತವು ಸುಸೂತ್ರವಾಗಿ ಸಾಗುವುದು.

## ಏಕನಿಷ್ಠತೆ; ಪ್ರಾಮಾಣಿಕತೆ

ಸಾರ್ವಜನಿಕ ವ್ಯವಹಾರ ಮತ್ತು ಆಡಳಿತದಲ್ಲಿ ಏಕನಿಷ್ಠತೆ ಅವಶ್ಯವಾಗಿರುವುದರಿಂದ ಪ್ರತಿಯೊಂದು ಸಾರ್ವಜನಿಕ ಚಟುವಟಿಕೆಯಲ್ಲಿ ಅವರ ಅಗತ್ಯತೆಯನ್ನು ಬಿಂಬಿಸಬೇಕು. ನಿಷ್ಠೆ-ಪ್ರಾಮಾಣಿಕತೆಗಳು ಕಡಿಮೆಯಾಗಿ ಲಂಚಗುಳಿತನವು ಸೇರಿಕೊಂಡರೆ, ಆಡಳಿತದಲ್ಲಿ ಸಾರ್ವಜನಿಕರ ವಿಶ್ವಾಸವು ಹಾರಿಹೋಗುವುದು. ಆದುದರಿಂದ ಯಾವುದೇ ಬಗೆಯ ಅಪ್ರಾಮಾಣಿಕ ಸಂಭಾವನೆಗಳಿಗೆ ಆಸ್ಪದ ಉಂಟಾಗದಂತೆ ಎಚ್ಚರಿಕೆ ವಹಿಸುವುದು ಅತ್ಯಗತ್ಯವೆನ್ನಿಸುವುದು. ಇತ್ತೀಚಿನ ದಿನಗಳಲ್ಲಿ ಆವಶ್ಯಕ ವಸ್ತುಗಳ ಕೊರತೆ ಹೆಚ್ಚಾಗಿದ್ದುದರಿಂದ ಕೆಲ ಕ್ಷೇತ್ರಗಳಲ್ಲಿ ಲಂಚಗುಳಿತನ ಹೆಚ್ಚಿದೆ. ಲಂಚಗುಳಿತನ ನಿರ್ಮೂಲನ ಮಾಡಲು ಸಾರ್ವಜನಿಕರ ಸಹಕಾರವು ಹೆಚ್ಚಿನ ಪ್ರಮಾಣದಲ್ಲಿ ಅವಶ್ಯವಿದೆ.

ಸಾರ್ವಜನಿಕ ಜೀವನದಲ್ಲಿಯ ನೈತಿಕ-ಬೆಲೆಗಳ ಕುಗ್ಗುವಿಕೆಯೂ ಲಂಚಗುಳಿತನಕ್ಕೆ ಕಾರಣವಾಗಿದೆಯೆಂಬುದರಲ್ಲಿ ತಥ್ಯವಿದೆ. ಪ್ರಜಾಪ್ರಭುತ್ವದ ಯಶಸ್ಸು ಹೇಗೆ ಜನತೆಯ ಶಿಕ್ಷಣವನ್ನು ಅವಲಂಬಿಸಿದೆಯೊ ಹಾಗೆ ಸಾರ್ವಜನಿಕ ವ್ಯವಹಾರಗಳು ಪ್ರಾಮಾಣಿಕ ರೀತಿಯಲ್ಲಿ ಆಗಲು ಜನತೆಯಲ್ಲಿ ನೈತಿಕ ಪುನರುಜ್ಜೀವನವಾಗುವುದಾದರೂ ಅವಶ್ಯವಿದೆ. ಈ ಕಾರ್ಯಕ್ಕೆ ಶಾಸನಗಳು ಆವಶ್ಯಕ ಹಿನ್ನೆಲೆಯನ್ನು ಒದವಿಸಿದರೂ ಅದಷ್ಟರಿಂದಲೆ ಕಾರ್ಯ ಸಾಧಿಸದು. ಜನತೆಯ ಜೀವನಮಟ್ಟವು ಏರಬೇಕು; ಬೇಡಿಕೆಯ ವಸ್ತುಗಳ ಪೂರೈಕೆ ಹೆಚ್ಚಿ ಸಲ್ಲದ ಆಸೆ ಕಡಿಮೆಯಾಗಬೇಕು; ಸಾಮಾನ್ಯ ಶಿಕ್ಷಣವು ಹೆಚ್ಚಾಗಿ ಅವ್ಯಾಪಾರಗಳಿಗೆ ಅಸಡ್ಡೆಯುಂಟಾಗಬೇಕು.

ಸಾರ್ವಜನಿಕಸೇವಕರಲ್ಲಿಯ ಲಂಚಗುಳಿತನ ಕಡಿಮೆ ಮಾಡಲು ಕೆಲವೊಂದು ಸೂಚನೆಗಳನ್ನು ಮಾಡಲಾಗಿದೆ: ಸಾರ್ವಜನಿಕಸೇವಕನು

ತನ್ನ ಮತ್ತು ತನ್ನ ಸಂಬಂಧಿಕರ ಹೆಸರಿನಲ್ಲಿರುವ ಆಸ್ತಿ-ಸೊತ್ತುಗಳ ವಿವರಗಳನ್ನು ವಾರ್ಷಿಕವಾಗಿ ಸಾದರಪಡಿಸಬೇಕು. ಸಾರ್ವಜನಿಕ ಸೇವಕರ ಬಗ್ಗೆ ಜನಸಾಮಾನ್ಯರಲ್ಲಿ ಒಳ್ಳೆಯ ಅಭಿಪ್ರಾಯ ಉಂಟಾಗುವಂತೆ ಅವನ ವರ್ತನವಿರಬೇಕು. ಜನಾಭಿಪ್ರಾಯವೆ ಚುಕ್ಕಾಣಿಯಾಗಿರುವ ಈಗಿನ ದಿನಗಳಲ್ಲಿ ಒಳ್ಳೆಯ ಹೆಸರು ಗಳಿಸಿಕೊಳ್ಳುವುದು ಸಾರ್ವಜನಿಕ ಸೇವಕನ ನಿಜವಾದ ಯೋಗ್ಯತೆಯನ್ನು ತೋರುವುದು. ಅದರಂತೆ, ಅವನ ವಿರುದ್ಧವಾಗಿ ಸಲ್ಲದ ಆರೋಪಗಳು ಅಪ್ರತ್ಯಕ್ಷವಾಗಿ ಹಾರುಸುದ್ದಿಯೆಂದು ಹರಡಿದರೂ ಅವನ ಪ್ರಾಮಾಣಿಕತೆಗೆ ಕುಂದುಬರುವುದು. ಸಾರ್ವಜನಿಕಸೇವಕರ ವರ್ತನವು ಸಂಶಯಾತೀತವಾಗಿರಬೇಕು. ಉಚ್ಚಮಟ್ಟದ ಅಧಿಕಾರಿಗಳು ಆದರ್ಶ ಅಧಿಕಾರಿಗಳಾದರೆ ಕೆಳಗಿನ ಅಧಿಕಾರಿಗಳು, ಸೇವಕರು ಅವ್ಯಾಪಾರ ಮಾಡಲು ಹೆದರುತ್ತಾರೆ. ಮೇಲಧಿಕಾರಿಗಳು ಪ್ರಾಮಾಣಿಕರಾಗಿಬಿಟ್ಟರೆ, ಕಾರ್ಯಕ್ಷಮರಾಗಿಬಿಟ್ಟರೆ, ರಾಷ್ಟ್ರನಿಷ್ಠೆಯುಳ್ಳವರಾಗಿಬಿಟ್ಟರೆ, ಲಂಚಗುಳಿತನ ನಿರ್ಮೂಲನ ಮಾಡುವುದಕ್ಕೆ ಬೇರೆ ಯಾವ ಸೂಚನೆಗಳೂ ಕಾರಣವಿಲ್ಲೆಂದು ಹೇಳಬಹುದು.

## ಕಾರ್ಯಕ್ಷಮತೆ

ಸದ್ಯದ ಆಡಳಿತದ ಕಾರ್ಯಕ್ಷಮತೆಯನ್ನು ಒಬ್ಬ ಅನುಭವಿಕ ನಿರೀಕ್ಷಕರು ಹೀಗೆ ಬಣ್ಣಿಸುತ್ತಾರೆ: "ಆಡಳಿತ-ಯಂತ್ರವು ತತ್ವತಃ ಬಂಧುರವಾಗಿದ್ದರೂ ಸುಧಾರಣೆಯ ಅಂತರ ಎಂತಹ ಕಠಿನ ಕಾರ್ಯಗಳನ್ನು ನಿರ್ವಹಿಸಲು ಸಮರ್ಥವಾಗಿದ್ದರೂ ಸದ್ಯಕ್ಕೆ ಅದು ಸವೆದಿದೆ. ಅವಕ್ಕೆ ಕೊಟ್ಟ ಕೆಲಸದ ಪ್ರಮಾಣವು ಹೆಚ್ಚಾಗಿದೆ; ನಿರ್ವಹಿಸಿದ ಕಾರ್ಯದಲ್ಲಿ ಗುಣ ಕಡಿಮೆಯಾಗಿದೆ. ಅದರ ಭಾಗಗಳು ಕೆಲವೆಡೆಯಲ್ಲಿ ತೆಗೆಯಲಾಗಿದ್ದು ಅಲ್ಲಿ ಕೆಳತರಗತಿಯ ಕೌಶಲವುಳ್ಳವನ್ನು ಜೋಡಿಸಲಾಗಿದೆ. ಕಾರ್ಯಭಾರದ ಮೂಲಕ ಮೊನೆ ಮೊಂಡಾಗಿದೆ. ಕೆಲವೆಡೆಯಲ್ಲಿ ಸರಿಯಾದ ಆರೈಕೆಯಿಲ್ಲದೆ ಹೋಗಿದೆ. ಆಡಳಿತಯಂತ್ರದ ನಿಯಂತ್ರಣದಾಚೆಯ ಕೆಲ ಒಳಹೊರಗಿನ ಕಾರಣಗಳ ಮೂಲಕ ಕಾರ್ಯಕ್ಷಮತೆಯು ಕಮರಿದೆ. ಒಟ್ಟಿನಲ್ಲಿ ಸುಧಾರಣೆಗೆ ಸಾಕಷ್ಟು ಅವಕಾಶವಿದೆ."

ಕೇಂದ್ರದಲ್ಲಿ ಮತ್ತು ರಾಜ್ಯಗಳಲ್ಲಿ ಅಲ್ಪ ಪ್ರಮಾಣದಲ್ಲಿಯ ಸಾರ್ವ-ಜನಿಕ ಸೇವಕರು ಸರಿಯಾದ ಸಹಾಯವಿಲ್ಲದೆ ಹೊಣೆಗಾರಿಕೆಯ ಭಾರವನ್ನು ಹೊರಬೇಕಾಗಿ ಬಂದಿದೆ. ಈಮೊದಲು. ಕೆಳಗಿನ ಅವಸ್ಥೆ–ಮಟ್ಟದಲ್ಲಿ ಮಾಡಲಾಗುತ್ತಿದ್ದ ಕಾರ್ಯವನ್ನು ಮಾಡುವುದರಲ್ಲಿ ಈ ಮೇಲಧಿಕಾರಿಗಳ ಸಮಯ ಹಾನಿಯಾಗುತ್ತಲಿದೆ. ಇತ್ತೀಚೆ ರೂಪಿಸಲಾದ ಹೊಸ ಧೋರಣೆಗಳ ಮೂಲಕ ಮತ್ತು ಕೈಕೊಂಡ ಹೊಸ ಕಾರ್ಯಗಳ ಮೂಲಕ ಸೆಕ್ರೆಟೆರಿಯವರ ಕಾರ್ಯವಿಭಾಗಗಳು ಅನೇಕ ಮೌಲಿಕ ಕಾರ್ಯಗಳನ್ನು ಕೈಕೊಳ್ಳಬೇಕಾಗಿ ಬಂದಿದೆ. ಕೇಂದ್ರ ಸರಕಾರವು ಈ ಪರಿಸ್ಥಿತಿಯ ಪರಿಶೀಲನೆ ಮತ್ತು ವಿಮರ್ಶೆ ನಡಸಿ, ಆ ಕಾರ್ಯಗಳಲ್ಲಿ ಕೆಲವನ್ನಾದರೂ ಕೆಳಗಿನ ಅಧಿಕಾರಿಗಳಿಗೆ ಹಸ್ತಾಂತರ ಮಾಡಬಹುದೇ ಎಂಬುದನ್ನು ಯೋಚಿಸಬೇಕು. ಇದೇ ಮಾದರಿಯ ವಿಮರ್ಶಾತ್ಮಕ ಪರ್ಯಾಲೋಚನೆ ರಾಜ್ಯಸರಕಾರಗಳಲ್ಲಿಯೂ ಮಾಡುವುದು ಅವಶ್ಯವಿದೆ. ಅಧಿಕಾರ–ಕಾರ್ಯ–ವಿಕೇಂದ್ರೀಕರಣದಿಂದ ಹೊಣೆಗಾರಿಕೆಯು ಹೆಚ್ಚು ವ್ಯಾಪಕವಾದ ಕ್ಷೇತ್ರದಲ್ಲಿ ಹಂಚಿಹೋಗಿ ಮೇಲಧಿಕಾರಿಗಳಿಗೆ ಮೇಲ್ನೋಟದ ಕಾರ್ಯ ಮತ್ತು ಧೋರಣೆಗಳನ್ನು ಕಾರ್ಯಕಾರಿಮಾಡುವ ಯೋಜನೆಗಳನ್ನು ನಿರ್ಮಿಸುವ ಕಾರ್ಯ ಮಾತ್ರ ಉಳಿದು ಒಟ್ಟಿನಲ್ಲಿ ಕಾರ್ಯಕ್ಷಮತೆ ಹೆಚ್ಚಬಹುದಾಗಿದೆ; ಅನಾವಶ್ಯಕ ವಿಲಂಬವೂ ಕಡಿಮೆಯಾಗಬಹುದಾಗಿದೆ.

## ಹೊಣೆಗಾರ ಸೇವಕವರ್ಗ

ಆಯ್. ಸಿ. ಎಸ್. ಅಧಿಕಾರಿಗಳು ಕಡಿಮೆಯಾಗಿರುವ ಸಂದರ್ಭವನ್ನು ನೆನೆದು ಆಯ್. ಎ. ಎಸ್. ವರ್ಗವೊಂದನ್ನು ನಿರ್ಮಾಣಮಾಡುವ ಕಾರ್ಯವು ನಡೆದಿದೆ. ಈ ವರ್ಗದವರಿಗೆ ತಕ್ಕ ತರಬೇತಿ ಮತ್ತು ಅನುಭವ ದೊರಿತಹಾಗೆ ಅವರು ಹೊಣೆಗಾರಿಕೆಯ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುವರು. ಸರಕಾರದ ಕಾರ್ಯವಿಭಾಗಗಳು ವಿಕಾಸವಾದಂತೆಲ್ಲ ಈ ಮೂರು ದಿಕ್ಕಿನಲ್ಲಿ ಪೂರಕ ವ್ಯವಸ್ಥೆಯನ್ನು ಮಾಡಬೇಕಾಗಿ ಬರುವುದು.

(೧) ಆರ್ಥಿಕಧೋರಣೆ ಮತ್ತು ಆಡಳಿತಕ್ಕೆ ಸ್ಥೂಲವಾಗಿ ಸಂಬಂಧಿಸಿದ ಕಾರ್ಯವನ್ನು ಮಾಡುವುದಕ್ಕೆ,

(೨) ಕೇಂದ್ರ ಮತ್ತು ರಾಜ್ಯ ಸರಕಾರಗಳ ಅಧಿಕಾರಕ್ಕೆ ಒಳಪಟ್ಟ ಔದ್ಯಮಿಕ ವ್ಯವಹಾರವನ್ನು ಸಂಚಾಲಿಸುವುದಕ್ಕೆ, ಮತ್ತು,

(೩) ಅಭಿವೃದ್ಧಿ, ಭೂಸುಧಾರಣೆ ಮತ್ತು ಆಹಾರದ ಆಡಳಿತ ಇವುಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ಮಾಡುವುದಕ್ಕೆ.

ಸದ್ಯದ ವ್ಯವಸ್ಥೆಯನ್ನು ಪೋಷಿಸಲು ಪೂರಕ ವ್ಯವಸ್ಥೆಯು ಅಗತ್ಯವಾಗುವುದು. ಮೊದಲನೆಯ ಕಾರ್ಯಕ್ಕೆ ಸೇವಕವರ್ಗವನ್ನು ದೊರಕಿಸಲು ಮೂರು ಸೂಚನೆಗಳು ಲಕ್ಷ್ಯಯೋಗ್ಯವಾಗಿವೆ: ಒಂದು, ಸಾಮಾನ್ಯವಾಗಿ ಸ್ಪರ್ಧಾತ್ಮಕ ಪರೀಕ್ಷೆಗಳ ಮುಖಾಂತರ ನೇಮಕ ಮಾಡಲ್ಪಡುವ ವಯೋಮಾನವನ್ನು ಹಿಗ್ಗಿಸಿ, ಉಚ್ಚಪದವೀಧರರೂ ಆರ್ಥಿಕಕ್ಷೇತ್ರದಲ್ಲಿ ವಿಶೇಷ ಅನುಭವ ಪಡೆದವರೂ ಆದ ವ್ಯಕ್ತಿಗಳನ್ನು ಆಡಳಿತವರ್ಗದಲ್ಲಿ ಸೇರಿಸಿಕೊಳ್ಳಬೇಕು. ಈ ರೀತಿಯಾಗಿ ಆರಿಸಲ್ಪಟ್ಟ ಅಧಿಕಾರಿಗಳಿಗೂ ಆಡಳಿತದ ತರಬೇತಿ ಕೊಡಬೇಕು. ಎರಡನೆಯದಾಗಿ ಆಡಳಿತ ಸೇವೆಯಲ್ಲಿ ಕಿರಿ ಅಧಿಕಾರಿಗಳಲ್ಲಿ ಕೆಲ ಪ್ರಮಾಣದಲ್ಲಿ ಕೆಲವರನ್ನು ಪೂರ್ವಾವಸ್ಥೆಯಲ್ಲಿಯೇ ಆರಿಸಿ, ಆರ್ಥಿಕ ಕ್ಷೇತ್ರದಲ್ಲಿ ಉತ್ಕಟವಾಗಿ ತರಬೇತುಗೊಳಿಸಲು ಯೋಗ್ಯ ವ್ಯವಹಾರ ಸಂಸ್ಥೆಗಳಲ್ಲಿಯೂ ಮತ್ತು ಆವಶ್ಯಕವೆನ್ನಿಸಿದರೆ ಪರದೇಶಗಳಲ್ಲಿಯೂ ಶಿಕ್ಷಣ ಕೊಡಬೇಕು. ಮೂರನೆಯದಾಗಿ ಈಗಿದ್ದ ಪದ್ಧತಿಯನ್ನು—ಅಂದರೆ, ವಿಶ್ವವಿದ್ಯಾಲಯ, ಬ್ಯಾಂಕಿಂಗ ಮತ್ತು ಉದ್ಯಮಗಳಲ್ಲಿರುವ ವಿಶೇಷ ಅನುಭವ ಮತ್ತು ಪರಿಜ್ಞಾನವುಳ್ಳವರನ್ನು ಆರಿಸುವುದು,— ಅಭಿವೃದ್ಧಿಗೊಳಿಸಬೇಕು.

ಎರಡನೆಯ ಕಾರ್ಯಕ್ಕಾಗಿ, ಔದ್ಯಮಿಕ ವ್ಯವಹಾರ ಸಂಚಾಲನ ಪ್ರವೀಣರ ಸೇವಕವರ್ಗವನ್ನು ನಿರ್ಮಿಸುವ ವಿಚಾರವು ನಡೆದಿದೆ. ಅದರಂತೆ ಆರ್ಥಿಕ ಮತ್ತು ಸಂಖ್ಯಾಶಾಸ್ತ್ರ ಪ್ರವೀಣರ ಸೇವಕವರ್ಗವನ್ನು ನಿರ್ಮಿಸುವ ವಿಚಾರವಿದೆ.

ಮೂರನೆಯ ಕಾರ್ಯದ ಆವಶ್ಯಕತೆಯು ಆಯಾ ರಾಜ್ಯಗಳಲ್ಲಿಯ ಸ್ಥಿತಿಗತಿಯನ್ನು ಅವಲಂಬಿಸಿದೆ ಈ ವಿಭಾಗಕ್ಕೆ ಹೆಚ್ಚಾಗಿ, ಜಿಲ್ಲೆಯಲ್ಲಿ ಕಂದಾಯ ಮತ್ತು ಅಭಿವೃದ್ಧಿಕಾರ್ಯಗಳಲ್ಲಿ ಅನುಭವ ಪಡೆದವರು ಉಪಯೋಗಬೀಳುವರು.

ಸೇವಕವರ್ಗವನ್ನು ಆರಿಸುವ ಪದ್ಧತಿಯು ಕೂಡ ಆಡಳಿತದ ಕಾರ್ಯಕ್ಷಮತೆಯ ಮೇಲೆ ಬೆಳಕು ಚೆಲ್ಲಬಹುದು. ಪಬ್ಲಿಕ್ ಸರ್ವೀಸ ಕಮಿಶನದ ಕಾರ್ಯವು ಸರಕಾರದ ಆಯಾ ಕಾರ್ಯವಿಭಾಗಗಳೊಡನೆ ಸಹಕರಿಸಿ ನಡೆಯಬೇಕಾದುದು ಅವಶ್ಯವಾಗಿದೆ. ಪಬ್ಲಿಕ್ ಸರ್ವೀಸ ಕಮಿಶನದವರು ತಾವು ಸಂದರ್ಶನ ತೆಗೆದುಕೊಂಡ ಉಮೇದುವಾರರಲ್ಲಿ ಕಂಡುಬಂದ ಶೈಕ್ಷಣಿಕ ವೈಗುಣ್ಯಗಳನ್ನು ವಿಶ್ವವಿದ್ಯಾಲಯದವರಿಗೆ ತಿಳಿಸುವುದೂ ವಿಶ್ವವಿದ್ಯಾಲಯದವರು ತಮ್ಮ ಅಭ್ಯಾಸಪತ್ರಿಕೆಗಳನ್ನು ಗೊತ್ತುಮಾಡುವಾಗ ಈ ದೃಷ್ಟಿಯನ್ನು ಇಟ್ಟುಕೊಳ್ಳುವುದೂ ಸದ್ಯದ ಪರಿಸ್ಥಿತಿಯಲ್ಲಿ ಅಗತ್ಯವೆನ್ನಿಸುವುದು.

ಆರಿಸಲ್ಪಟ್ಟ ಸೇವಕವರ್ಗದವರಿಗೆ ಸೇವೆಯ ಪ್ರಾರಂಭದಲ್ಲಿಯೂ ಮುಂದೆ ಕಾಲಕಾಲಕ್ಕೂ ತರಬೇತಿ ಕೊಡುವುದು ಯೋಗ್ಯವೆನ್ನಿಸುವುದು. ಆಯ್. ಎ ಎಸ್. ಗೆ ಆರಿಸಲ್ಪಟ್ಟ ಪ್ರೊಬೇಶನರರಿಗೆ ಈಗ ದಿಲ್ಲಿಯಲ್ಲಿ ಪ್ರಾರಂಭಿಕ ಶಿಕ್ಷಣ ಕೊಡಲಾಗುತ್ತಿದೆ. ಇದೇಬಗೆಯಾಗಿ ರಾಜ್ಯದ ಆಡಳಿತ ಸೇವಕರಿಗೂ ತರಬೇತಿಯ ವ್ಯವಸ್ಥೆಯಾಗುವುದು ಅವಶ್ಯವಿದೆ. ಸೆಕ್ರೆಟೇರಿ-ಯಟದ ನೌಕರರಿಗೂ ಶಿಕ್ಷಣ ಕೊಡುವ ಏರ್ಪಾಡನ್ನು ಕೇಂದ್ರ ಸರಕಾರವು ಮಾಡಿದೆ ಸದ್ಯಕ್ಕೆ ಪಂಚವಾರ್ಷಿಕ ಯೋಜನೆಯನ್ವಯವಾಗಿ ಸಿಕ್ಕುವ ತಾಂತ್ರಿಕ ಶಿಕ್ಷಣದ ಲಾಭವನ್ನು ಆಡಳಿತ ವರ್ಗದ ಸೇವಕರಿಗೆ ಕೊಡಿಸಬೇಕು.

## ಕಾರ್ಯಪದ್ಧತಿ

ಕೇಂದ್ರ ಸರಕಾರವು ಒಂದು ಸಂಸ್ಥೆಯನ್ನು ನಿರ್ಮಿಸಿ ಅಲ್ಲಿ ವಿವಿಧ ಕಾರ್ಯಪದ್ಧತಿಯ ಪ್ರಯೋಗ ಪರಿಶೀಲನೆ ಮಾಡಿದರೆ ಎಲ್ಲರಿಗೂ ಮಾರ್ಗದರ್ಶನ ಮಾಡಿದಂತಾಗುವುದು. ರಾಜ್ಯಗಳಲ್ಲಿಯೂ ಈ ಬಗೆಯ ಪರಿಶೀಲನೆಯ ವ್ಯವಸ್ಥೆ ಮಾಡಿದರೆ ಪರಿಸ್ಥಿತಿಭಿನ್ನತೆಯ ಮೂಲಕವಾಗಿರುವ ಅನೇಕ ಸಮಸ್ಯೆಗಳ ಪರಿಹಾರವೂ ಕಂಡುಬರುವುದು. ಮುಖ್ಯವಾಗಿ ಕಚೇರಿಯ ಕಾರ್ಯದಲ್ಲಿಯ ಇಂದಿನ ಜಟಿಲತೆ, 'ದ್ರಾವಿಡಪ್ರಾಣಾಯಾಮದಂತಹ ರೀತಿ,' ಅನಾವಶ್ಯಕ ವಿಲಂಬಗಳು ಕಡಿಮೆಯಾಗಿ ಸರಲ–ಸುಲಭ–ಆದರೂ ಸಮರ್ಥ ಕ್ರಮಗಳು ಬರಬೇಕು, ರೆಕಾರ್ಡು ಇಡುವ ಪದ್ಧತಿಯಲ್ಲಿ ಸುಧಾರಣೆಯಾಗ

ಬೇಕು. ಫಾಯಿಲುಗಳ ಹಸ್ತಾಂತರದಲ್ಲಿ, ಕಾರ್ಯಕ್ಷಮತೆಯ ವಿಚಾರಣೆಯಲ್ಲಿ ಹೊಸ ವಿಧಾನಕ್ರಮಗಳನ್ನು ಅನುಸರಿಸಬೇಕು. ಹಿರಿಯ ಮೇಲಧಿಕಾರಿಗಳು ಕಾಲಕಾಲಕ್ಕೆ ಕಚೇರಿಯ ಕಾರ್ಯದ ಪರಿಶೀಲನೆ ಮಾಡಬೇಕು. ಕೆಳವರ್ಗದ ನೌಕರರೊಡನೆ ಮಾನವೀಯ ಸಂಬಂಧವನ್ನು ಹಿರಿಯ ಮೇಲಧಿಕಾರಿಗಳು ಬೆಳಸಿದರೆ ಕಾರ್ಯನಿರ್ವಹಣೆಯಲ್ಲಿ ತೇಜವುಂಟಾಗುವುದು.

ಕಳೆದ ಕೆಲ ವರುಷಗಳಲ್ಲಿ ನೌಕರವರ್ಗದಲ್ಲಿ ಅನಾಸ್ಥೆ ಬೆಳೆಯುತ್ತಿರುವುದು ಕಂಡುಬಂದಿದೆ. ಹೆಚ್ಚಿನ ಕೆಲಸ ಮಾಡಬೇಕೆಂಬ ಹುಮ್ಮಸ್ಸು ಎಲ್ಲಿಯೂ ಕಾಣದು. ಪ್ರತ್ಯಕ್ಷ ಕೆಲಸ ಮಾಡುವುದಕ್ಕಿಂತ ಮಾಡಿದ್ದೇವೆಂದು ತೋರುವುದರ ಕಡೆಗೆ ಒಲವು ಕಂಡುಬರುತ್ತಿದೆ. ಇದಕ್ಕೆ ನೌಕರಿಯ ತಾತ್ಕಾಲಿಕ ಸ್ವರೂಪವು ಕೆಲಮಟ್ಟಿಗೆ ಕಾರಣವಾಗಿರಬಹುದು. ಆದರೆ ಒಳ್ಳೆಯ ಕೆಲಸ ಮಾಡಿದವನ ಕೆಲಸದ ಗುಣ ಕಂಡುಹಿಡಿದು ಉತ್ತೇಜನಕೊಡುವ ವ್ಯವಸ್ಥೆಯೂ ಸಮಾಧಾನಕಾರಕವಾಗಿಲ್ಲವೆಂಬುದೂ ಒಂದು ಸಂಗತಿಯಾಗಿದೆ. ಕೆಲಸದಲ್ಲಿ ತಪ್ಪಿದವನಿಗೂ ತಕ್ಕ ಶಿಕ್ಷೆ ಇಲ್ಲದೆಹೋದ ಸಂದರ್ಭಗಳೂ ಅನೇಕವಾಗಿವೆ. ಹೀಗಾಗಿ ತಪ್ಪಿದವನು ಸುಧಾರಿಸಲಿಕ್ಕೆ, ಒಳ್ಳೆಯ ಕೆಲಸ ಮಾಡಿದವನು ಉತ್ತೇಜಿತನಾಗುವುದಕ್ಕೆ ಆಸ್ಪದವೇ ಇಲ್ಲದಾಗಿದೆ. ಅತ್ಯುತ್ತಮ ಕೆಲಸ ಮಾಡಿದವನಿಗೆ ನಿಶ್ಚಿತ ಬಢತಿಯಾಗುವುದೆಂಬ ಆಶ್ವಾಸನವಿದ್ದರೆ ಕಾರ್ಯಾಸಕ್ತಿಯಿದ್ದವರು ಮುಂದೆ ಬರಬೇಕೆಂದು ಹೆಣಗುವರು. ಇದೇ ದೃಷ್ಟಿಯಿಂದ ಪ್ರತಿಯೊಂದು ವಿಭಾಗದಲ್ಲಿಯ ಕಾರ್ಯದ ಮೌಲ್ಯಮಾಪನವು ಕಾಲಕಾಲಕ್ಕೆ ನಡೆಯಬೇಕು. ಈ ಉದ್ದೇಶದಿಂದಲೆ ಮೌಲ್ಯಮಾಪನ ತಂತ್ರವನ್ನು ರೂಪಿಸಲು ಸಮಾಜವಿಕಾಸ ಯೋಜನೆಗಳಲ್ಲಿ ಸ್ವತಂತ್ರವಾದ ಮೌಲ್ಯಮಾಪನ ಕಾರ್ಯವು ನಡೆಯುವಂತೆ ಏರ್ಪಡಿಸಲಾಗಿದೆ. ಇದರ ಅನುಭವದ ಲಾಭವು ಉಳಿದ ಕಾರ್ಯವಿಭಾಗಗಳಿಗೂ ದೊರೆಯುವಂತೆ ಮಾಡಬೇಕು.

## ಜಿಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳ ಆಡಳಿತ

ಕಳೆದ ನೂರು ವರುಷಗಳಿಂದ ವಿಕಾಸಹೊಂದುತ್ತ ಬಂದ ಆಡಳಿತ ರಚನೆಯು ಜಿಲ್ಲೆಯನ್ನು ಮುಖ್ಯ ಆಡಳಿತಘಟಕವನ್ನಾಗಿ ಮಾಡಿಕೊಂಡಿತ್ತು.

ಜಿಲ್ಲಾಧಿಕಾರಿಯು ಸರಕಾರದ ಪ್ರತಿನಿಧಿಯಾಗಿದ್ದು ಜನತೆಯು ಸಂಪರ್ಕವಿಟ್ಟು ಕೊಂಡಿರುತ್ತಿದ್ದನು. ಜಿಲ್ಲೆಯಲ್ಲಿಯ ಉಳಿದ ಕಾರ್ಯವಿಭಾಗಗಳ ಸಂಬಂಧೀಕರಣದ ಕಾರ್ಯದತ್ತ ಅವನು ಲಕ್ಷ್ಯ ಹಾಕಿದರೂ ಅವನ ಮುಖ್ಯ ಕಾರ್ಯವು ಶಾಂತತೆ ಸುವ್ಯವಸ್ಥೆ ಇಡುವುದು ಮತ್ತು ಕಂದಾಯ ವಸೂಲು ಮಾಡುವುದು ಆಗಿರುತ್ತಿತ್ತು. ಇತ್ತೀಚಿನ ಅಭಿವೃದ್ಧಿ ಕಾರ್ಯಗಳಿಂದ ಜಿಲ್ಲಾ ಆಡಳಿತಕ್ಕೆ ಹೊಸ ಜೋರು ಬಂದಿದೆ. ಶಾಂತತೆ ಸುವ್ಯವಸ್ಥೆಗಳು ಜಿಲ್ಲಾಧಿಕಾರಿಯ ಪ್ರಾಥಮಿಕ ಹೊಣೆಯಾಗಿದ್ದರೂ ಜಿಲ್ಲೆಯಲ್ಲಿಯ ಸಂಪತ್ ಸಾಮಗ್ರಿಗಳನ್ನು ಬೆಳೆಯಿಸಿ ಜನತೆಯ ಜೀವನಮಟ್ಟ ಹೆಚ್ಚುವಂತೆ ಮಾಡುವ ಅಭಿವೃದ್ಧಿ ಕಾರ್ಯಕ್ರಮಗಳ ಕಡೆಗೂ ಅವನು ಲಕ್ಷ್ಯ ಪೂರೈಸಬೇಕಾಗಿದೆ. ಈ ಹೊಸ ಕಾರ್ಯಕ್ಕೆ ಅನುವಾಗುವಂತೆ ಜಿಲ್ಲಾ ಆಡಳಿತದ ರಚನೆಯು ಸಜ್ಜಾಗಬೇಕಾಗಿದೆ. ಅಭಿವದ್ಧಿಕಾರ್ಯಕ್ರಮಗಳಲ್ಲಿ ಸಾರ್ವಜನಿಕರ ಸಹಕಾರವನ್ನು ಪಡೆಯುವುದು ಮೊದಲನೆಯ ಕೆಲಸವೆಂದು ಗಣಿಸಬೇಕಾಗಿದೆ. ಆದುದರಿಂದ ಜಿಲ್ಲೆಯ ಆಡಳಿತವು ಈ ಬಗೆಯಾಗಿ ಪುನರ್ಘಟಿತವಾಗಬೇಕು :

(೧) ಸಾಮಾನ್ಯ ಆಡಳಿತ ಯಂತ್ರವು ಸುಧಾರಿಸಲ್ಪಡಬೇಕು ಮತ್ತು ಭದ್ರಪಡಿಸಲ್ಪಡಬೇಕು.

(೨) ಹಳ್ಳಿಗಳ ಮಟ್ಟದಲ್ಲಿ ಅಭಿವೃದ್ಧಿಯಾಗುವಂತೆ ತಕ್ಕ ಏರ್ಪಾಡು ಮಾಡಲ್ಪಡಬೇಕು.

(೩) ಜಿಲ್ಲೆಯಲ್ಲಿಯ ಎಲ್ಲ ಅಭಿವೃದ್ಧಿ ವಿಭಾಗಗಳಲ್ಲಿ ಹೊಂದಿಕೆ ಯುಂಟಾಗುವಂತೆ ಮಾಡಬೇಕಲ್ಲದೆ, ಸಾಮಾನ್ಯ ವಿಸ್ತರಣ, ಸಂಘಟನೆಗೂ ಆಸ್ಪದ ಉಂಟಾಗುವಂತಿರಬೇಕು.

(೪) ರಾಜ್ಯಸರಕಾರದ ಕಾರ್ಯದೊಡನೆ ಸ್ಥಾನಿಕ ಸ್ವಾಯತ್ತ ಸಂಸ್ಥೆಗಳ ಕಾರ್ಯಗಳನ್ನು ಜೋಡಿಸುವ ಏರ್ಪಾಡು ಮಾಡಬೇಕು.

(೫) ಜಿಲ್ಲೆಯ ಅಭಿವೃದ್ಧಿಯೋಜನೆಗಳನ್ನು ಪ್ರಾದೇಶಿಕವಾಗಿ ಸಂಬಂಧೀಕರಿಸಬೇಕು. ಮೊದಲನೆಯ ಸುಧಾರಣೆಯನ್ನು ಕಾರ್ಯಕಾರಿ ಮಾಡಲು ಈಗಿದ್ದ ಜಿಲ್ಲಾಧಿಕಾರಿಗೆ ಸಹಾಯಕ ಅಧಿಕಾರಿಗಳನ್ನು ಕೊಡುವುದು ; ಜಿಲ್ಲೆಗಳ ಪ್ರಾದೇಶಿಕ ವ್ಯಾಪ್ತಿಯನ್ನು ನೋಡಿ ಅವುಗಳನ್ನು

ಕಾರ್ಯದ ವ್ಯಾಪ್ತಿಯ ದೃಷ್ಟಿಯಿಂದ ಅವಶ್ಯಕವೆನ್ನಿಸಿದರೆ ಪುನರ್ರಚಿಸುವುದು; ಜಿಲ್ಲಾಧಿಕಾರಿಗಳಿಗೆ ಗ್ರಾಮಸುಧಾರಣೆಯ ಕಾರ್ಯದಲ್ಲಿ ತರಬೇತಿ ಕೊಡುವುದು; ಮುಂತಾದ ಸೂಚನೆಗಳು ಮಾಡಲ್ಪಟ್ಟಿವೆ.

ಕಂದಾಯ ಮತ್ತು ಪೋಲೀಸು ಆಡಳಿತದ ದೃಷ್ಟಿಯಿಂದ ಹಳ್ಳಿಯು ಅನೇಕ ದಶಕಗಳಿಂದ ಪ್ರಾಥಮಿಕ ಘಟಕವಾಗಿದ್ದರೂ ಬ್ರಿಟಿಶರ ಆಡಳಿತದಲ್ಲಿ ಹಳ್ಳಿಯು ತನ್ನ ಸಾಮಾಜಿಕ ಆರ್ಥಿಕ ಘಟಕವೆಂದಾಗಿದ್ದ ಸ್ಥಿತಿಯನ್ನು ಕಳೆದುಕೊಂಡಿತು. ಸ್ವಯಂಪೂರ್ಣ-ಸ್ವಾವಲಂಬಿ-ಘಟಕವಾಗಿದ್ದ ಹಳ್ಳಿಯು ಹೆಚ್ಚುಹೆಚ್ಚು ಪರಾವಲಂಬಿಯಾಗತೊಡಗಿತು. ಹಿಂದಿನ ಆಡಳಿತದಲ್ಲಿ ಕಳೆದ ಮುವ್ವತ್ತು ವರುಷಗಳಿಂದ ಹಳ್ಳಿಗಳ ಸುಧಾರಣೆಯ ಕಾರ್ಯ ನಡೆದಿದ್ದರೂ ಅದೆಲ್ಲ ಹಳ್ಳಿಯಲ್ಲಿಯ ವ್ಯಕ್ತಿಗಳಿಗೆ ಸಹಾಯವೆಂದಾಗಿ ಬಂದುದರಿಂದ ಇಡಿ ಹಳ್ಳಿಯು ಸುಧಾರಿಸಲೇ ಇಲ್ಲ ಆದುದರಿಂದ ಇಂದು ನಡೆಯಬೇಕಾದ ಅಭಿವೃದ್ಧಿ ಕಾರ್ಯದಲ್ಲಿ ಇಡಿ ಹಳ್ಳಿಯನ್ನು ಘಟಕವಾಗಿ ತೆಗೆದುಕೊಂಡು ಸಾಗಬೇಕಾಗಿದೆ. ಈ ಕಾರ್ಯವನ್ನು ಗ್ರಾಮಪಂಚಾಯತಗಳು ಒಳ್ಳೆಯ ರೀತಿಯಿಂದ ಮಾಡಬಹುದಾಗಿದೆ. ಗ್ರಾಮಪಂಚಾಯತಗಳಿಗೆ ಸಾಕಷ್ಟು ಅಧಿಕಾರ ಕೊಡಮಾಡುವಂತೆ ಕಾನೂನುಗಳ ಏರ್ಪಾಡು ಕೆಲ ರಾಜ್ಯಗಳಲ್ಲಾಗಿದೆ; ಉಳಿದ ರಾಜ್ಯಗಳಲ್ಲಿ ಆಗುವುದರಲ್ಲಿದೆ. ಅದರಿಂದ ಅವು ಸ್ವಾಯತ್ತ ಘಟಕಗಳೆಂದು ಕಾರ್ಯ ಮಾಡುವಂತಾಗುವುದು. ಆಗ ಅವುಗಳ ಕಾರ್ಯವು ಇಷ್ಟು ವ್ಯಾಪಿಸುವುದು:

(೧) ಹಳ್ಳಿಯ ಉತ್ಪಾದನೆಯ ಕಾರ್ಯಕ್ರಮಗಳನ್ನು ರೂಪಿಸುವುದು;

(೨) ಹಳ್ಳಿಯಲ್ಲಿ ಆವಶ್ಯಕ ವಸ್ತುಗಳ ಪೂರೈಕೆಗಳಿಗಾಗಿ ಮುಂಗಾಣಿ ಸಿದ್ಧಪಡಿಸುವುದು ಮತ್ತು ಅದಕ್ಕೆ ಬೇಕಾದ ಹಣದ ವ್ಯವಸ್ಥೆ ಮಾಡುವುದು;

(೩) ಸಹಕಾರಿ ಸಂಘಗಳ ಮುಖಾಂತರವಲ್ಲದೆ ಬೇರೆ ರೀತಿಯಿಂದ ಕೊಡಮಾಡಿದ ಸರಕಾರದ ಸಹಾಯವನ್ನು ಪಡೆಯಲು ದಾರಿ ಮಾಡಿಕೊಳ್ಳುವುದು;

(೪) ಹೆಚ್ಚು ಉತ್ಪಾದಿಸುವ ದೃಷ್ಟಿಯಿಂದ ಕೆಳಮಿತಿಯ ಸಾಗುವಳಿ ಮಟ್ಟವನ್ನು ಪಡೆಯುವುದು;

(೫) ಪಡಭೂಮಿಯು ಸಾಗುವಳಿಯಾಗುವಂತೆ ಮಾಡುವುದು;

(೬) ಒಡೆಯರಿಂದ ಸಾಗುವಳಿಯಾಗದೆ ಇದ್ದ ಭೂಮಿಗಳು ಸಾಗುವಳಿಯಾಗುವಂತೆ ಮಾಡುವುದು;

(೭) ಸಾಮಾಜಿಕ ಕಾರ್ಯಗಳಿಗಾಗಿ ಸ್ವಯಂಸೇವಕಬುದ್ಧಿಯ ಕಾರ್ಯಸಂಘಟನೆ ಮಾಡುವುದು;

(೮) ಸಹಕಾರಿ ಪದ್ಧತಿಯ ಮೇಲೆ ಒಕ್ಕಲುತನದ ವ್ಯವಸ್ಥೆ ಮಾಡುವುದು.

(೯) ಭೂಸುಧಾರಣೆಯ ಕೆಲಸವು ಕಾರ್ಯಕಾರಿಯಾಗಲು ನೆರವಾಗುವುದು.

ಆಯ್ಕೆಯ ಪದ್ಧತಿಯಿಂದ ಸಾಕಷ್ಟು ಸಮರ್ಥ ಮತ್ತು ತಜ್ಞ ಜನರು ಪಾಂಚಾಯತದಲ್ಲಿ ಬರದಿದ್ದರೆ ಸರಕಾರದ ನೇಮಕದಿಂದ ಅಂತಹರನ್ನು ಸಮಾವೇಶ ಮಾಡಿಕೊಂಡು ಅದರ ಕಾರ್ಯಕ್ಷಮತೆಯನ್ನು ಹೆಚ್ಚಿಸಬೇಕು.

ಸದ್ಯಕ್ಕೆ ಸರಕಾರದ ವಿವಿಧ ಶಾಖೆಯವರು ತಮ್ಮ ಸಹಾಯ ಸಲಹೆಯನ್ನು ಹಳ್ಳಿಗಳತನಕ ಮುಟ್ಟಿಸಲು ಹವಣಿಸುತ್ತಿದ್ದಾರೆ; ಬೇರೆ ಬೇರೆ ಶಾಖೆಯವರು ಬೇರೆ ಬೇರೆ ಕಾಲಕ್ಕೆ ತಮಗೆ ತಿಳಿದಂತೆ ಸಲಹೆಕೊಡುವುದರಿಂದ ಒಮ್ಮೊಮ್ಮೆ ವಿರೋಧಾಭಿಪ್ರಾಯಕ್ಕೆ ಆಸ್ಪದವೂ ತಾತ್ಕಾಲಿಕ ಸಮಸ್ಯೆಗಳ ಪರಿಹಾರಕ್ಕೆ ಬೆಲೆಯಿಲ್ಲದವೂ ಆಗುವ ಸಂಭವವಿದೆ. ಆದುದರಿಂದ ಎಲ್ಲ ವಿಭಾಗಗಳ ಕಾರ್ಯಕರ್ತರಲ್ಲಿ ಸಂಬಂಧವುಂಟಾಗುವಂತೆ ಹಳ್ಳಿಗಳ ಅಭಿವೃದ್ಧಿಯ ಕಾರ್ಯದಲ್ಲಿ ಸುಸಂಗತತೆಯುಂಟಾಗುವಂತೆ ಗ್ರಾಮಸೇವಾ ವಿಸ್ತರಣ ಸಂಘಟನೆಯಾಗುವುದು ಅಗತ್ಯ :

(೧) ಹಳ್ಳಿಯಲ್ಲಿ ಕೆಲಸ ಮಾಡುವ ಕಾರ್ಯಕರ್ತರು ಎಲ್ಲ ಅಭಿವೃದ್ಧಿ ಕಾರ್ಯವಿಭಾಗಗಳ ಪ್ರತಿನಿಧಿಯಂತೆ ಇರಬೇಕು.

(೨) ನೂರು ಹಳ್ಳಿಗಳಿಗೊಬ್ಬ ಅಧಿಕಾರಿಯಿದ್ದು ಅವನು ಹಳ್ಳಿಯ ಕಾರ್ಯಕರ್ತರ ಕಾರ್ಯವನ್ನು ಪರಿಶೀಲಿಸಬೇಕು.

(೩) ಕಲೆಕ್ಟರನಿಂದ ಮೊದಲುಗೊಂಡು ಗ್ರಾಮಕಾರ್ಯಕರ್ತರ ತನಕ ಸಂಘಟಿತ ರೀತಿಯಲ್ಲಿ ಕಾರ್ಯ ಮಾಡಬೇಕು.

ಕಳೆದ ದಶಕದಲ್ಲಿ ಸ್ಥಾನಿಕ ಸ್ವಾಯತ್ತ ಸಂಸ್ಥೆಗಳ ಬೆಳಗೆಯು ಕುಂಠಿತ ವಾದುದು ಕಂಡುಬಂದಿದೆ. ಯುದ್ಧೋತ್ತರ ಪುನರ್ರಚನೆಯ ಕಾರ್ಯ ಕ್ರಮದಲ್ಲಿ ಸ್ವಾಯತ್ತ ಸ್ಥಾನಿಕ ಸಂಸ್ಥೆಗಳಿಗೆ ಸ್ಥಾನವೇ ಇದ್ದಿಲ್ಲ. ಪಂಚ ವಾರ್ಷಿಕ ಯೋಜನೆಯಲ್ಲಿ ಕೆಲಮಟ್ಟಿಗೆ ವಿಶೇಷ ಸಹಾಯವು ದೊರೆತಿರು ವಂತೆಯಾಗಿದ್ದರೂ ಅವೆಲ್ಲ ರಾಜ್ಯಗಳ ಜಿಲ್ಲೆಗಳ ಕಾರ್ಯಕ್ರಮಗಳಲ್ಲಿ ಬಂದಿವೆ. ಸ್ಥಾನಿಕ ಸ್ವಾಯತ್ತ ಸಂಸ್ಥೆಗಳ ಬೆಳೆಗೆಯನ್ನು, ಸದ್ಯದ ಅವಸ್ಥೆ ಗಳನ್ನು ಮನದಂದರೆ ರಾಜ್ಯಸರಕಾರಗಳ ಅಭಿವೃದ್ಧಿ ಯೋಜನೆಗಳು ಜನತಾ ಪ್ರತಿನಿಧಿಗಳಿರುವ ಈ ಸಂಸ್ಥೆಗಳ ಸಹಕಾರದಿಂದ ಜತೆಗೂಡಿ ಸಾಗಿದರೆ ಒಳ್ಳೆಯ ಪರಿಣಾಮ ಉಂಟಾಗಬಹುದಾಗಿದೆ. ಆಯಾ ಸ್ವಾಯತ್ತ ಸಂಸ್ಥೆಗಳ ಕ್ಷೇತ್ರಗಳಲ್ಲಿ ಕಾರ್ಯಗಳನ್ನು ಅವುಗಳ ಆಡಳಿತಕ್ಕೆ ಒಪ್ಪಿಸುವುದರ ಕಡೆಗೆ ಧೋರಣೆಯು ಒಲವು ಇರಬೇಕೆಂದು ಅನ್ನಿಸುತ್ತಿದೆ. ಈ ದೃಷ್ಟಿಯಿಂದ ಸಾಗಿದಾಗ ಗ್ರಾಮಪಂಚಾಯತಿ ಲೋಕಲ್‌ಬೋರ್ಡು ಇವುಗಳ ಕಾರ್ಯದಲ್ಲಿ ಸಂಬಂಧವುಂಟಾಗುವಂತೆ ವ್ಯವಸ್ಥೆ ಮಾಡಬಹುದು. ಹೀಗೆ ಆಡಳಿತರಚನೆ ಯನ್ನು ವ್ಯಾಪಕ ಮಾಡಿ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಹೊಣೆಗಾರಿಕೆ ಯನ್ನು ಹಂಚಿಕೊಟ್ಟರೆ, ಪ್ರಜಾಪ್ರಭುತ್ವದ ತತ್ವಕ್ಕನುಸಾರವಾಗಿ ಅಧಿಕಾರದ ವಿಕೇಂದ್ರೀಕರಣವೂ ಸಾಧ್ಯವಾಗುವುದು. ಇದರಿಂದ ಸಾರ್ವಜನಿಕರ ಸಹ ಕಾರವೂ ಹೆಚ್ಚಿನ ಪ್ರಮಾಣದಲ್ಲಿ ಬರಬಹುದಾಗಿದೆ.

## ರಾಷ್ಟ್ರೀಯ ಅಭಿವೃದ್ಧಿ ಕಾರ್ಯದಲ್ಲಿ ಸಾರ್ವಜನಿಕರ ಸಹಕಾರ

ಸಾಮಾಜಿಕ ಕಲ್ಯಾಣವನ್ನು ಸಾಧಿಸುವ ಪ್ರಜಾಸತ್ತೆಯು ಸಾರ್ವ ಜನಿಕರ ಸಾನುಕೂಲ ಸಮ್ಮತಿಯನ್ನು ಅವಲಂಬಿಸಿರಬೇಕೆ ಹೊರತು ಸರಕಾರದ ಸತ್ತೆಯನ್ನಲ್ಲ. ಇದು ಎಲ್ಲ ಸಾಮಾಜಿಕ ಚಟುವಟಿಕೆಗಳಲ್ಲಿ, ಎಲ್ಲ ಅವಸ್ಥೆ ಗಳಲ್ಲಿ ಸಹಕಾರದ ರೀತಿಯನ್ನು ಅನ್ವಯಿಸಬೇಕೆಂದು ಸಾರಿಹೇಳುವುದು. ಸಾರ್ವಜನಿಕ ಸಹಕಾರವು ಮತ್ತು ರಾಷ್ಟ್ರೀಯ ಅಭಿವೃದ್ಧಿಯು ಒಂದೇ

ಗುರಿಯನ್ನು ಕಣ್ಣು ಮುಂದಿಟ್ಟುಕೊಂಡಿರಬೇಕಾಗುವುದು. ಯೋಜನೆಗಳ ಇತಿಹಾಸವನ್ನು ನೋಡಿದರೆ ಕೇಂದ್ರೀಕೃತ ಅಧಿಕಾರದ ಸರ್ವಾಧಿಕಾರಿ ಮನೋವೃತ್ತಿಯು ಗುಂಪಿನವರ ಕೈಯಲ್ಲಿ ಸಾಮಾಜಿಕ ಜೀವನವನ್ನು ತಮಗೆ ಬೇಕಾದ ದಾರಿಯಲ್ಲಿ ಸಾಗಿಸುವ ನಿಯಂತ್ರಣಾಧಿಕಾರವಿದ್ದುದು ಕಂಡುಬಂದಿದೆ. ಪ್ರಜಾಸತ್ತೆಯ ತತ್ತ್ವವನ್ನು ಒಪ್ಪಿಕೊಂಡ ಭಾರತಕ್ಕೆ ಆ ದಾರಿ ಹೇಗೆ ಒಗ್ಗಬೇಕು? ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಸುವ್ಯವಸ್ಥೆಗಳನ್ನು ತಳಹದಿಯನ್ನಾಗಿ ಮಾಡಿಕೊಂಡ ಪ್ರಜಾಸತ್ತೆಯಲ್ಲಿ ಆರ್ಥಿಕ ವಿಷಮತೆಯ ನಿರ್ಮೂಲನವಾಗಿ ಸಮಾನ ಕಾರ್ಯಾವಕಾಶವನ್ನೂ ಒದಗಿಸಿ ಸಕಲರಿಗೂ ವಿತ್ತಜೀವಿತಗಳ ಅಭಯ ಕೊಡುವಾಗ ಕೇಂದ್ರೀಕೃತ ಅಧಿಕಾರಕ್ಕೆ ಆಸ್ಪದವೆಲ್ಲಿದೆ? ಪಕ್ಷಪದ್ಧತಿಯು ಪ್ರಜಾಸತ್ತೆಯ ಬೆನ್ನೆಲುಬಾಗಿರುವುದರಿಂದ ಒಂದು ಪಕ್ಷವು ಅಧಿಕಾರದಲ್ಲಿದ್ದಾಗ ಅದರ ಧೋರಣೆಗಳನ್ನು ಟೀಕಿಸಿದರೂ ಒಟ್ಟಿನಲ್ಲಿ ರಾಷ್ಟ್ರದ ಹಿತವೇ ಎಲ್ಲ ಪಕ್ಷಗಳ ಗುರಿಯಾಗಿರುವುದರಿಂದ ಸರಕಾರದ ಕಾರ್ಯದಲ್ಲಿ ಸಾರ್ವಜನಿಕರ ಸಹಕಾರವು ಅವಶ್ಯವಾಗಿ ದೊರೆಯಬೇಕು.

ಸಹಕಾರಕ್ಕೆ ಪೂರ್ವಭಾವಿಯಾಗಿ ಸಾರ್ವಜನಿಕರಲ್ಲಿ ಯೋಜನೆಯ ಬಗ್ಗೆ ಸಾಕಷ್ಟು ತಿಳಿವಳಿಕೆಯುಂಟಾಗುವುದು ಅವಶ್ಯ. ರಾಷ್ಟ್ರದ ಅಭಿವೃದ್ಧಿಯಲ್ಲಿ ತಾನು ಮಾಡಬೇಕಾಗಿರುವ ಕರ್ತವ್ಯವೇನು ಎಂಬುದು ಸಾಮಾನ್ಯ ನಾಗರಿಕರಿಗೆ ತಿಳಿಯಬೇಕು. ಒಂದು ಕ್ಷೇತ್ರದಲ್ಲಿ ಮಾಡುವ ಕಾರ್ಯ ಹೇಗೆ ಇನ್ನೊಂದು ಕ್ಷೇತ್ರದ ಕಾರ್ಯದ ಪ್ರಗತಿಗೆ ನೆರವಾಗುವುದೆಂಬುದರ ಮರ್ಮವನ್ನು ತಿಳಿದಿರಬೇಕು. ಆದುದರಿಂದ ಜನಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ಅವರ ಮನೆಮನೆಗೂ ಯೋಜನೆಯ ವಿಚಾರಗಳು ಮುಟ್ಟಬೇಕು. ಜ್ಞಾನಸಾಧನೆಯ ಮತ್ತು ಪ್ರಚಾರ ವಿಧಾನಗಳ ಎಲ್ಲ ರೀತಿ ಪದ್ಧತಿಗಳನ್ನು ಅನುಸರಿಸಿ, ಬರೆಹದ ಮೂಲಕ, ಮಾತಿನಿಂದ, ರೇಡಿಯೊ, ಚಲಚ್ಚಿತ್ರ, ಹಾಡು, ಲಾವಣಿ, ನಾಟಕ ಮುಂತಾದ ಸಾಧನಗಳನ್ನು ಬಳಸಿಕೊಳ್ಳಬೇಕು. ಇದಕ್ಕಾಗಿ, ಬರೆಹಗಾರರು, ಪತ್ರಿಕೆಗಳು, ಚಿತ್ರಕಾರರು, ಕಲಾವಿದರು, ವಿಶ್ವವಿದ್ಯಾಲಯಗಳು, ಬೇರೆ ಶಿಕ್ಷಣಸಂಸ್ಥೆಗಳು ಇವರೆಲ್ಲರ ಸಹಕಾರ ಸಹಾಯವನ್ನು ಸಂಘಟಿಸುವ ಕಾರ್ಯಕ್ರಮವು ಅವಶ್ಯ. ರಾಷ್ಟ್ರದ ಸಾಮಾನ್ಯ ಧ್ಯೇಯ

ಧೋರಣೆಗಳನ್ನು ಸಾಮಾನ್ಯವಾಗಿ ಸಕಲರೂ ಒಪ್ಪಿಕೊಂಡರೂ ಸಾಮಾನ್ಯ ನಾಗರಿಕನು ಯೋಜನೆಯಿಂದ ಪ್ರತ್ಯಕ್ಷ ತನ್ನ ಜೀವನದಲ್ಲಿ ಯಾವ ಮಾರ್ಪಾಟು ಉಂಟಾಗುವುದೆಂಬುದರ ಕಡೆಗೆಯೆ ಹೆಚ್ಚು ಮನಸ್ಸು ಹಾಕು-ವುದು ಸ್ವಾಭಾವಿಕವಾಗಿದೆ. ಆದುದರಿಂದ ರಾಷ್ಟ್ರೀಯ ಯೋಜನೆಯನ್ನು ಜಿಲ್ಲಾ, ತಾಲೂಕು, ಗ್ರಾಮಗಳ ಘಟಕಗಳನುಸಾರವಾಗಿ ಸ್ಥಾನಿಕ ಘಟಕ-ಗಳಾಗಿ ವಿಭಜಿಸುವುದು ಹೆಚ್ಚು ಮಹತ್ವದ ಮಾತಾಗುವುದು. ಅನಂತರ ಯೋಜನೆಯು ಎಷ್ಟೇ ವಿಶಾಲ ಮತ್ತು ವ್ಯಾಪಕವಾಗಿದ್ದರೂ ಪ್ರತಿಯೊಬ್ಬ ನಾಗರಿಕನು ತನ್ನ ವಿಶಿಷ್ಟ ಕ್ಷೇತ್ರದಲ್ಲಿ ಮನಸ್ಸು ಹಾಕುವಂತಾಗುವುದು. ಇದರ ಪರಿಣಾಮಿಕ ಪ್ರತಿಕ್ರಿಯೆ ಮಾತ್ರ ಆಯಾ ಕ್ಷೇತ್ರಘಟಕಗಳಿಗೆ ಮರ್ಯಾದಿತವಾಗದೆ ಇಡಿ ರಾಜ್ಯಕ್ಕೆ—ರಾಷ್ಟ್ರಕ್ಕೆ ಆಗುವುದು. ಆಗ ಪ್ರತಿಯೊಬ್ಬನೂ ಯೋಜನೆಯ ಯಶಸ್ಸಿನಲ್ಲಿ ತಾನೂ ಭಾಗಿಯಾಗಿದ್ದೇನೆಂಬ ಹೆಮ್ಮೆಪಡಲೂ ಆಸ್ಪದವಾಗುವುದು.

ಹೀಗೆ ಸಾರ್ವಜನಿಕರ ಸಹಕಾರ ಪಡೆಯುವುದು ಸರಕಾರದ—ಅದರಲ್ಲಿಯೂ ಸರಕಾರದ ಸೇವಕವರ್ಗದ ಕರ್ತವ್ಯವಾಗುವುದು. ಯಾವ ಅವಸ್ಥೆಯಲ್ಲಿ ಸಾಮಾನ್ಯ ನಾಗರಿಕನು ಸರಕಾರದ ಸೇವಕರ ಸಂಬಂಧದಲ್ಲಿ ಬರುವನೊ ಅಲ್ಲಿ ಅವನಿಗೆ ಲಂಚಗುಳಿತನ, ಕಾರ್ಯವಿಲಂಬ, ಅನಾಸ್ಥೆಗಳು ಕಂಡುಬಂದರೆ, ಮತ್ತು ಬೇರೆ ಸಮಾಜವಿಘಾತಕ ಕಾರ್ಯಗಳನ್ನು ಯಶಸ್ವಿ-ಯಾಗಿ ಪ್ರತಿರೋಧಿಸುವ ಕಾರ್ಯಕ್ಷಮತೆಯು ಕಂಡುಬರದಿದ್ದರೆ, ಅವನಿಗೆ ಯೋಜನೆಯ ಕಾರ್ಯಕ್ರಮದಲ್ಲಿ ಉತ್ಸಾಹದಿಂದ ಭಾಗವಹಿಸಲು ಕಠಿಣ-ವಾಗುವುದು. ಆಳರಸರ ಅಧಿರಾಯತನದಲ್ಲಿ ಅನೇಕ ದಶಕಗಳು ಕಳೆದುದರ ಕಲುಷಿತ ದೃಷ್ಟಿಕೋನದ ಮೂಲಕ ಜನತೆ ಮತ್ತು ಆಡಳಿತ ವರ್ಗದಲ್ಲಿ ತಾದಾತ್ಮ್ಯಭಾವದ ಬಂಧುತ್ವವು ಕಾಣದೆ ಒಂದು ಬಗೆಯ ವೈಷಮ್ಯಪೂರಿತ ಪರಕೀಯತೆಯು ಕಂಡುಬರುವುದು. ರಾಷ್ಟ್ರವು ಸ್ವತಂತ್ರವಾಗಿದೆ; ಈಗಿನ ಆಡಳಿತವು ಜನತೆಯ ಪ್ರತಿನಿಧಿಯಾಗಿದೆ; ಆಡಳಿತದ ದೃಷ್ಟಿಯು ಜನಹಿತವನ್ನು ನೋಡುತ್ತಿದೆ; ಎಂಬ ಭಾವನೆಯು ಜನಸಾಮಾನ್ಯರಲ್ಲಿ ಮೂಡಿ ನೆಲೆನಿಲ್ಲುವಂತೆ ಆಡಳಿತದಲ್ಲಿಯ ಸೇವಕವರ್ಗದವರು ಪ್ರಯತ್ನಪೂರ್ವಕ-ವಾಗಿ ಕಾರ್ಯಮಾಡಬೇಕಾಗಿದೆ. ಸೇವಕವರ್ಗದವರು ಹೆಸರಿಗೆ ತಕ್ಕಂತೆ

ಜನತೆಯ ಸೇವಕರಾಗಿ ಕಾರ್ಯ ಮಾಡಬೇಕೆ ಹೊರತು ಸರಕಾರದ ಸತ್ತಾಧಿಕಾರದ ತುಣುಕುಗಳೆಂದು ಕಾರ್ಯ ಮಾಡಬಾರದು. ಸಾರ್ವಜನಿಕರೂ ತಮ್ಮಂತೆಯೆ ರಾಷ್ಟ್ರದ ನಾಗರಿಕರು, ತಾವೂ ಅವರೂ ದೇಶಬಾಂಧವರು ಎಂಬ ಭಾವನೆಯು ಸರಕಾರದ ಸೇವಕವರ್ಗದಲ್ಲಿ ಮೂಡಿ ಬೆಳೆಯು-ತೊಡಗಿದರೆ, ಪರಸ್ಪರರಲ್ಲಿ ವಿಶ್ವಾಸದ ಸಂಬಂಧ ಬೆಳೆಯುತೊಡಗಿದರೆ ಯೋಜನೆಯಂತಹ ಮಹತ್ಕಾರ್ಯದಲ್ಲಿಯು ಅರ್ಧ ಯಶಸ್ಸು ಸಾಧಿಸಿದಂತೆಯೆ. ಸಾರ್ವಜನಿಕರೂ ಕೂಡ ಸದಾ ಸರಕಾರವನ್ನು ತೆಗಳದೆ, ತಮ್ಮ ಕರ್ತವ್ಯ-ವೆಂದು ತಮ್ಮ ಸಹಕಾರ ಅದಕ್ಕೆ ನೀಡಬೇಕು. ಸರಕಾರದ ಸೇವಾಭಾವನೆಯ ಕೈಗೆ ಸಾರ್ವಜನಿಕರ ಸಹಕಾರದ ಕೈಕೂಡಿದರೆ ಯಾವ ಕಾರ್ಯಕ್ರಮವು ಯಶಸ್ಸು ಪಡೆಯದೆ ಹೋದೀತು ?

ಸರಕಾರವು ಜನತೆಯ ಪ್ರತಿನಿಧಿಗಳ ರಚಿಸಿದ್ದು ಎಂಬುದರ ವ್ಯಾಪಕ ಅರ್ಥಗಳೆಲ್ಲ ತಿಳಿದ ಮೇಲೆ ಎಲ್ಲ ಜನಹಿತ ಕಾರ್ಯಗಳನ್ನೂ ಸರಕಾರವೇ ಮಾಡಲಿ ಎಂಬುದು ಸರಿಯಾಗದ ಮಾತು. ಸಾರ್ವಜನಿಕರು ಸ್ವಯಂ ಸ್ಫೂರ್ತಿಯಿಂದ ಸ್ವಯಂಸೇವಕಬುದ್ಧಿಯಿಂದ ಕಾರ್ಯಮಾಡಲು ಮುಂದೆ ಬಂದರೆ ಅಷ್ಟುಮಟ್ಟಿಗೆ ಸರಕಾರದ ಮೇಲಿನ ಭಾರ— ಅಪ್ರತ್ಯಕ್ಷವಾಗಿ ಸಾರ್ವಜನಿಕರ, ಮೇಲಿನ ಭಾರವೆ — ಕಡಿಮೆಯಾಗುವುದು. ಪರಿಮಿತ ಕ್ಷೇತ್ರವಾದ ಹಳ್ಳಿಯಲ್ಲಿಯ ನೀರಿನ ಪೂರೈಕೆ, ದಾರಿಗಳು, ಶಾಲಾ ಕಟ್ಟಡಗಳು, ಆರೋಗ್ಯವರ್ಧಕ ಕಾರ್ಯಗಳು, ಮುಂತಾದ ಸಣ್ಣ ಪ್ರಮಾಣದ ಕೆಲಸಗಳನ್ನು ಹಳ್ಳಿಗರು ತಮ್ಮ ಬಿಡುವಿನ ವೇಳೆ, ಉತ್ಸಾಹ ಶಕ್ತಿಯನ್ನು ಕೊಟ್ಟು ಪೂರೈಸಿಕೊಂಡರೆ, ಯಾವ ಕಾರ್ಯವು ಸರಕಾರ ಮಾಡಬೇಕಾದರೆ ದಶಕಗಳು ಕಳೆಯಬಹುದು ಅಂತಹ ಕಾರ್ಯಗಳು ನಿರಾಯಾಸವಾಗಿ ವಿಲಂಬವಿಲ್ಲದೆ ನೆರವೇರುವುವು. ಈ ಸ್ವಯಂಸೇವಕ ಕಾರ್ಯವು ಕೂಡ ಸಂಘಟಿತ ರೀತಿಯಲ್ಲಿ ಯೋಜನಾಬದ್ಧ ರೀತಿಯಲ್ಲಿ ಆದರೆ ಅದಕ್ಕೆ ಹೆಚ್ಚಿನ ಬೆಲೆ ಬರುವುದು. ಸರಕಾರವು ಕೊಡುವ ಸಹಾಯದ ಉಪಯೋಗವೂ ಹೆಚ್ಚು ಪರಿಣಾಮಕಾರಿಯಾಗುವುದು. ಸಮಾಜವಿಕಾಸ ಯೋಜನೆಯಲ್ಲಿ ಇಂತಹ ಸ್ವಯಂಸೇವಕ ಕಾರ್ಯಕ್ಕೆ ಹೆಚ್ಚಿನ ಮಹತ್ವವಿದೆ. ಸಮಾಜಸೇವೆಯೆ ಧ್ಯೇಯವಾಗಿರುವ ಸಂಘ—ಸಂಸ್ಥೆಗಳು ಕೂಡ ಸಂಘಟಿತ ಮತ್ತು ಸಂಬಂಧೀ

ಕರಿಸಲ್ಪಟ್ಟ ರೀತಿಯಲ್ಲಿ ಕಾರ್ಯ ಮಾಡಿದರೆ ರಾಷ್ಟ್ರದ ಅಭಿವೃದ್ಧಿಯ ಪ್ರಗತಿಯು ನಿರೀಕ್ಷಿಸಿದ್ದಕ್ಕಿಂತ ಕಡಿಮೆ ಕಾಲಾವಧಿಯಲ್ಲಿ ಹೆಚ್ಚಿನ ಗುಣ-ಯುಕ್ತವಾಗುವುದು. ಈ ಬಗೆಯ ಸಂಘಗಳು ಮಹಿಳೆಯರ ಉನ್ನತಿ, ತರುಣರ ಉನ್ನತಿ, ವಿದ್ಯಾರ್ಥಿ ಮತ್ತು ಶಿಕ್ಷಕರ ವಿಕಾಸಗಳಿಗಾಗಿ ದುಡಿಯಬಹುದಾಗಿದೆ. ಸಮಾಜದಲ್ಲಿ ಈ ಮೂರು ಅಂಗಗಳು ಜೀವಾಳದ ಅಂಗಗಳಾಗಿವೆ.

ಸಾರ್ವಜನಿಕರ ಸಹಕಾರವನ್ನು ಪಡೆಯಲು ಅಧಿಕಾರೇತರರನ್ನು ಅಭಿವೃದ್ಧಿ ಸಮಿತಿಗಳು, ಸಲಹಾಸಮಿತಿಗಳು, ಸಮಾಜವಿಕಾಸ ಯೋಜನೆಯಲ್ಲಿಯ ಜಿಲ್ಲಾ ಆಡಳಿತ ಸಮಿತಿಗಳು ಪ್ರಾತಿನಿಧಿಕವಾಗಿ ಕಾರ್ಯಕರ್ತರೆಂದು ಸಮಾವೇಶಮಾಡಿಕೊಳ್ಳುವ ಯೋಜನೆ ಮಾಡಲಾಗಿದೆ. ರಾಷ್ಟ್ರೀಯ ತಳಹದಿಯ ಮೇಲೆ ಈ ರೀತಿಯ ಕಾರ್ಯ ನಡೆಸಲು ಭಾರತ-ಸೇವಕ ಸಮಾಜ, ಮತ್ತು ರಾಷ್ಟ್ರೀಯ ಸಲಹಾಸಮಿತಿಗಳು ರಚಿಸಲ್ಪಟ್ಟಿವೆ. ರಾಷ್ಟ್ರೀಯ ಸಲಹಾ ಸಮಿತಿಯಲ್ಲಿ ದೇಶದಲ್ಲಿ ಬೇರೆ ಬೇರೆ ಅಭಿಪ್ರಾಯವುಳ್ಳ ಕಾರ್ಯವಿಭಾಗಗಳ ಪ್ರತಿನಿಧಿಗಳಿದ್ದಾರೆ. ಅದು ಯೋಜನೆಯ ಕಾರ್ಯದಲ್ಲಿ ಸಾರ್ವಜನಿಕರ ಸಹಕಾರವು ಎಷ್ಟುಮಟ್ಟಿಗೆ ದೊರೆತಿದೆಯೆಂಬುದರ ಪ್ರಗತಿಯನ್ನು ಪರಿಶೀಲಿಸಿ ವಿಮರ್ಶಿಸುವುದು. ಸಾರ್ವಜನಿಕರಲ್ಲಿ ಯಾರಿಗೆ ತಮ್ಮ ವೇಳೆ-ಉತ್ಸಾಹ-ಕೌಶಲಗಳನ್ನು ದಯಪಾಲಿಸಲು ಅನುವುಳ್ಳವರಾಗಿರುವರೊ ಅಂತಹರಿಗಾಗಿ ಭಾರತ ಸೇವಕ ಸಮಾಜವಿದೆ. ಈ ಸಮಾಜದ ಪ್ರಾಥಮಿಕ ಉದ್ದೇಶಗಳು ಹೀಗಿವೆ :

(೧) (ಅ) ರಾಷ್ಟ್ರದ ಆರ್ಥಿಕ ಸಾಮರ್ಥ್ಯವನ್ನು ಬೆಳೆಯಿಸಲು ಮತ್ತು ರಾಷ್ಟ್ರವನ್ನು ಸ್ವಯಂಪೂರ್ಣತೆಯೆಡೆಗೆ ಮುನ್ನಡೆಯಿಸಲು, ಮತ್ತು

(ಬ) ಅಸಹಾಯ ವರ್ಗದವರ ಕಷ್ಟ ಕಾರ್ಪಣ್ಯಗಳನ್ನು ದೂರಮಾಡುವುದಕ್ಕೆ ಮತ್ತು ಸಮಾಜದ ಕಲ್ಯಾಣವನ್ನು ಸಾಧಿಸುವುದಕ್ಕೆ.

ಭಾರತದ ನಾಗರಿಕರಿಗಾಗಿ ಸ್ವಯಂಸೇವಕ ಬುದ್ಧಿಯ ಸೇವೆಯನ್ನು ಸಂಘಟಿಸಲು ಮತ್ತು ಅಭಿವೃದ್ಧಿಯ ಮಾರ್ಗಗಳನ್ನು ಕಂಡುಹಿಡಿಯಲು ಈ ಸಮಾಜವು ಸ್ಥಾಪಿಸಲ್ಪಟ್ಟಿದೆ.

(೨) ಉಪಯೋಗವಾಗದೆ ಉಳಿದ ಜನತೆಯ ವೇಳೆ ಉತ್ಸಾಹ ಮತ್ತು ಸಾಧನಸಂಪತ್ತನ್ನು ಕಂಡುಹಿಡಿದು ಅವುಗಳು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದ ವಿವಿಧ ರಂಗಗಳಲ್ಲಿ ಕಾರ್ಯಕಾರಿಯಾಗುವಂತೆ ಮಾಡುವುದು ಈ ಸಮಾಜದ ಉದ್ದೇಶವಾಗಿದೆ.

ರಾಷ್ಟ್ರವ್ಯಾಪಿಯಾದ ಈ ಭಾರತ ಸೇವಕ ಸಮಾಜದ ಕಾರ್ಯವು ಇನ್ನೂ ಸಂಘಟನೆಯ ಪ್ರಾರಂಭಾವಸ್ಥೆಯಲ್ಲಿದೆ. ಆಸ್ಥೆಯುಳ್ಳವರು ಹೆಚ್ಚು ಹೆಚ್ಚಾಗಿ ಮುಂದೆ ಬಂದಂತೆಲ್ಲ ಈ ಸಮಾಜದ ಶಕ್ತಿಯು ಅಭಿವೃದ್ಧಿಯಾಗಿ ಅಧಿಕಾರೇತರ ಸಹಾಯ ಸಹಕಾರದಿಂದ ನಡೆದ ಉತ್ತಮ ಸಂಘಟಕಶಕ್ತಿಯುಳ್ಳ ಸಂಸ್ಥೆಯಾಗಿ ರಾಷ್ಟ್ರದ ಮುನ್ನಡೆಗೆ ಕಾರಣೀಭೂತವಾಗುವುದರಲ್ಲಿ ಸಂದೇಹವಲ್ಲ.

---

ಪ್ರಕರಣ ಆರು :

# ಅಭಿವೃದ್ಧಿ ಕಾರ್ಯಕ್ರಮಗಳು : ಕೃಷಿ

## ಕೃಷಿಯ ಸ್ಥಿತಿಗತಿ

ಭೂಮಿಯು ದೇಶದ ಬಹುಬೆಲೆಯುಳ್ಳ ಸೊತ್ತು ; ಅದು ಸ್ಥಿರವಾದ-ಚಿರವಾದ ಆಸ್ತಿ. ಆದುದರಿಂದ ಸಂತತವಾಗಿ ನಿರಂತರವಾಗಿ ಅದು ಲಾಭದಾಯಿಯಾಗಿದೆ. ಭಾರತದಲ್ಲಿ ಭೂಮಿಯನ್ನು ಅವಲಂಬಿಸಿ ಬಾಳುವವರು ಬಹುಸಂಖ್ಯಾಕರು ಇರುವರು. ಜನತೆಯ ಬಹುಭಾಗಕ್ಕೆ ಭೂಮಿಯಿಂದ ಉದ್ಯೋಗವು ದೊರೆವುದು. ರಾಷ್ಟ್ರೀಯ ಆದಾಯದಲ್ಲಿ ಭೂಮಿಯಿಂದ ಬರುವುದು ಬಹುದೊಡ್ಡ ಪಾಲು. ಆದುದರಿಂದ ಭಾರತದಲ್ಲಿಯ ಯಾವುದೇ ಬಗೆಯ ಅರ್ಥಿಕ ಅಭಿವೃದ್ಧಿಯ ಯೋಜನೆಯು ಸಿದ್ಧವಾದರೂ ಭೂಮಿಯು ಅಂದರೆ ಕೃಷಿಯು ಅಭಿವೃದ್ಧಿಯು ಮಹತ್ವದ ಸ್ಥಾನವನ್ನು ಪಡೆವುದು. ಕೃಷಿಯಲ್ಲಿ ಸುಧಾರಣೆಯುಂಟುಮಾಡಲು ಮತ್ತು ಒಕ್ಕಲುತನದ ಆಧುನಿಕೀಕರಣವನ್ನು ಸಾಧಿಸಲು ಉಪಾಯಗಳನ್ನು ಕೈಕೊಳ್ಳುವುದು ಮಹತ್ವದ ಸ್ಥಾನವನ್ನು ಪಡೆವುದು.

ಭೌಗೋಲಿಕ ರಚನೆಯನುಸಾರವಾಗಿ ಭಾರತದ ಒಟ್ಟು ಕ್ಷೇತ್ರವು ೮೧ ಕೋಟಿ ೧೦ ಲಕ್ಷ ಎಕರೆಯಷ್ಟಿದೆ. ಇದರಲ್ಲಿ ಸುಮಾರು ೧೯೬೦ ಲಕ್ಷ ಎಕರೆಯ ಬಗ್ಗೆ ವಿಶೇಷ ಮಾಹಿತಿ ಸಿಕ್ಕುವುದಿಲ್ಲ. ಉಳಿದ ೬೧೫೦ ಲಕ್ಷ ಎಕರೆಯ ಭೂಭಾಗವು ಈ ರೀತಿಯಾಗಿ ಹಂಚಿಹೋಗಿದೆ:

| | | ಲಕ್ಷ ಎಕರೆ | ಶತಾಂಶ |
|---|---|---|---|
| ೧ | ಅರಣ್ಯ | ೯೩೦ | ೧೫ |
| ೨ | ಸಾಗುವಳಿಯಾದ ಒಟ್ಟು ಭೂಮಿ | ೨೬೬೦ | ೪೩ |

| | | ಲಕ್ಷ ಎಕರೆ | ಶತಾಂಶ |
|---|---|---|---|
| ೩ | ಪ್ರಚಲಿತ ಪಡಭೂಮಿ | ೫೮೦ | ೯ |
| ೪ | ಸಾಗುವಳಿ-ಯೋಗ್ಯ ಬೀಳುಭೂಮಿ | ೯೮೦ | ೧೬ |
| ೫ | ಸಾಗುವಳಿಗೆ ಸಾಧ್ಯವಿಲ್ಲದ ಭೂಮಿ | ೯೬೦ | ೧೬ |
| ೬ | ವರ್ಗೀಕರಿಸಲು ಬಾರದೆ ಇದ್ದುದು | ೪೦ | ೧ |
| | ಒಟ್ಟು | ೬೧೫೦ | ೧೦೦ |

ಸಾಗುವಳಿಯಾದ ಭೂಮಿಯು ಒಟ್ಟು ಸುಮಾರು ೩೨೪೦ ಲಕ್ಷ ಎಕರೆ ಆಗುವುದು. ಇದರಲ್ಲಿ ಸುಮಾರು ೭೮ ಶತಾಂಶದಷ್ಟು ಭೂಮಿಯಲ್ಲಿ ಆಹಾರ ಧಾನ್ಯ ಬೆಳೆವುದು; ಸುಮಾರು ೧೭ ಶತಾಂಶದಷ್ಟು ಭೂಮಿಯಲ್ಲಿ ವ್ಯಾಪಾರಿ ಬೆಳೆಯು ಬರುವುದು. ಉಳಿದುದರಲ್ಲಿ ಇತರ ಮಸಾಲೆ ಮುಂತಾದ್ದು ಉತ್ಪಾದನೆಯಾಗುವುದು.

ಕೆಲ ಮುಖ್ಯ ರಾಜ್ಯಗಳಲ್ಲಿಯ ನಾಲ್ಕು ದಶಕಗಳವರೆಗಿನ ಕೃಷಿ ಸಂಬಂಧದ ಅಂಕಿ ಸಂಖ್ಯೆಗಳ ಪರಿಶೀಲನೆ ಮಾಡಿದರೆ ಎರಡು ಸಂಗತಿಗಳು ಕಂಡುಬರುವುವು :

(೧) ಬೆಳೆ ತೆಗೆದುಕೊಂಡ ಒಟ್ಟು ಕ್ಷೇತ್ರವು ಎರಡು ಬೆಳೆ ತೆಗೆದುಕೊಂಡ ಮೂಲಕ ಹೆಚ್ಚಾಗಿದ್ದರೂ ಕಳೆದ ನಾಲ್ವತ್ತು ವರುಷಗಳಿಂದ ಭೂಮಿಯ ಮೇಲೆ ಜನಸಂಖ್ಯೆಯ ಒತ್ತಡವು ಹೆಚ್ಚಾಗುತ್ತಲಿದ್ದರೂ ಹೊಸ ಕ್ಷೇತ್ರವು ಸಾಗುವಳಿಗಾಗಿ ಸಾಕಷ್ಟು ತೆಗೆದುಕೊಳ್ಳಲ್ಪಟ್ಟಿಲ್ಲ.

(೨) ಸಣ್ಣ ಸಣ್ಣ ಹಿಡುವಳಿಗಳಲ್ಲಿಯೆ ಸಾಗುವಳಿಯಾದ ಕ್ಷೇತ್ರದ ಬಹುಭಾಗವು ಇದ್ದರೂ ಧಾನ್ಯದ ಬೆಲೆಯ ರಚನೆಯ ಮೂಲಕ ಧಾನ್ಯಗಳ ಪ್ರಮಾಣಾಂಕಗಳಿಗೆ ಬಾಧೆ ತಟ್ಟಿದೆ.

ಸಾಗುವಳಿಯೋಗ್ಯವಾದ ಬೀಳುಭೂಮಿಯು ಸಾಗುವಳಿ ಮಾಡಲ್ಪಟ್ಟಿಲ್ಲವೆಂದ ಮೇಲೆ ಒಕ್ಕಲಿಗನು ವೈಯಕ್ತಿಕವಾಗಿ ಅಂತಹ ಬೀಳುಭೂಮಿಯನ್ನು ಸಾಗುವಳಿ ಮಾಡಲಾರನೆಂದೆ ತೋರುತ್ತದೆ. ಆದುದರಿಂದ ಅಂತಹ ಭೂಮಿಯ ಅಭಿವೃದ್ಧಿಯ ಕಾರ್ಯವು ಸರಕಾರದ ಸಂಘಟಿತರೂಪದಿಂದಲೇ ಸಾಧ್ಯವೆಂದು ಕಂಡುಬಂದಂತಾಯಿತು.

ಕಳೆದ ನಾಲ್ಕು ದಶಕಗಳಲ್ಲಿ ಜನಸಂಖ್ಯೆಯು ೩೯ ಶತಾಂಶದಷ್ಟು ಹೆಚ್ಚಿದೆ. ಆದರೆ ಇದಕ್ಕೆ ಸರಿಜೋಡಿಯಾಗಿ ಆಹಾರಧಾನ್ಯಗಳ ಉತ್ಪಾದನೆ ಯಾಗದ್ದರಿಂದ ಆಂತರಿಕ ಸಾಮಗ್ರಿಯಿಂದ ಪ್ರತಿಯೊಬ್ಬರಿಗೆ ಸಿಕ್ಕುವ ಆಹಾರ ಧಾನ್ಯವು ಅನಿವಾರ್ಯವಾಗಿ ಕಡಿಮೆಯಾಗಿದೆ. ಆಹಾರಪರಿಸ್ಥಿತಿಯನ್ನು ಹದಗೆಡಿಸಲು ಇನ್ನು ಬೇರೆ ಕಾರಣಗಳೂ ಇವೆ. ಬ್ರಹ್ಮದೇಶವು ಪ್ರತ್ಯೇಕವಾದನಂತರ ೧೩ ಲಕ್ಷ ಟನ್ನುಗಳಷ್ಟು ಆಹಾರದ ಕೊರತೆಯುಂಟಾಯಿತು. ೧೯೪೭ ರಲ್ಲಿ ದೇಶದ ವಿಭಜನೆಯಿಂದ ೮ ಲಕ್ಷ ಟನ್ನು ಆಹಾರದ ಕೊರತೆ ಹೆಚ್ಚಾಯಿತು. ಈ ಬಗೆಯಿಂದುಂಟಾದ ಕೊರತೆಯನ್ನು ತುಂಬಿಕೊಳ್ಳಲು ಪರದೇಶದಿಂದ ಧಾನ್ಯದ ಆಯಾತ ಮಾಡಬೇಕಾಯಿತು. ೧೯೪೮ ರಲ್ಲಿ ೨೮ ಲಕ್ಷ ಟನ್ನು, ೧೯೪೯ ರಲ್ಲಿ ೩೭ ಲಕ್ಷ ಟನ್ನು, ೧೯೫೦ ರಲ್ಲಿ ೨೧ ಲಕ್ಷ ಟನ್ನು ೧೯೫೧ ರಲ್ಲಿ ೪೭ ಲಕ್ಷ ಟನ್ನುಗಳಷ್ಟು ಆಹಾರ ಆಯಾತ ಮಾಡಲಾಗಿದೆ.

ವ್ಯಾಪಾರಿ ಬೆಳೆಗಳಾದ ಹತ್ತಿ ಮತ್ತು ನಾರು ( ಜೂಟು ) ಇವುಗಳ ಬೇಡಿಕೆಯು ಪೂರೈಕೆಗಿಂತಲೂ ಕಡಿಮೆಯಾಗಿದೆ. ಈಗಿದ್ದ ಬೇಡಿಕೆ ಪೂರೈಕೆ-ಗಳ ಅಂತರವನ್ನು ಕಡಿಮೆ ಮಾಡಲೇಬೇಕಾಗಿದೆ; ಅದಕ್ಕೆ ಹೆಚ್ಚಿನ ಉತ್ಪಾದನೆ ಮಾಡಬೇಕಾಗಿದೆ. ಚಹಾ, ಕಾಫಿ, ರಬ್ಬರುಗಳ ಸಾಗುವಳಿ ಕ್ಷೇತ್ರವು ಹೆಚ್ಚಾಗದೆ ಇದ್ದರೂ ಉತ್ಪಾದನೆ ಹೆಚ್ಚಿದೆ. ಕಳೆದ ಹತ್ತು ವರುಷಗಳಲ್ಲಿ ಚಹಾ ಬೆಳೆಯುವ ಕ್ಷೇತ್ರ ಅಷ್ಟೇ ಇದ್ದರೂ ೪೩ ಶತಾಂಶದಷ್ಟು ಉತ್ಪಾದನೆ ಹೆಚ್ಚಾಗಿದೆ. ಇದು ಪರದೇಶಿ ನಾಣ್ಯವಿನಿಮಯಕ್ಕೆ ಹೆಚ್ಚು ನೆರವು ತಂದಿದೆ. ಕಾಫಿ ಮತ್ತು ರಬ್ಬರುಗಳ ಉತ್ಪಾದನೆ ಹೆಚ್ಚಾಗಿದ್ದರೂ ದೇಶದಲ್ಲಿಯೆ ಅವುಗಳ ಬೇಡಿಕೆ ಹೆಚ್ಚಾಗಿದೆಯಾದ್ದರಿಂದ ನಿರ್ಯಾತಕ್ಕೆ ಅಷ್ಟು ಬಲವು ಇಲ್ಲದಾಗಿದೆ. ಮೆಣಸು, ಯಾಲಕ್ಕಿ, ಗೋಡಂಬೆ ಮುಂತಾದ ನಿರ್ಯಾತ ಸರಕುಗಳ ಮಾರುಬೆಲೆಗಳು ಏರಿದ್ದರೂ ಕೂಡ ಸಾಗುವಳಿ ಕ್ಷೇತ್ರವು ಹೆಚ್ಚಾಗಿಲ್ಲ.

ಒಕ್ಕಲುತನದ ಪರಿಸ್ಥಿತಿಯು ಹೀಗಿದ್ದುದರಿಂದ ಅದಕ್ಕಾಗಿ ಹೆಚ್ಚಿನ ಲಕ್ಷ್ಯ ಪೂರೈಸುವುದು ಅಗತ್ಯವೆನ್ನಿಸಿತು. ಒಕ್ಕಲುತನ ಅಭಿವೃದ್ಧಿಯ ವಿಷಯ ಬಂದಾಗ ಒಕ್ಕಲಿಗನ ಜೀವನಸಮಸ್ಯೆಗಳು ಮುಂದೆ ಬರುವುವು.

ಒಕ್ಕಲುತನ ಉತ್ಪಾದನೆಯು ಮತ್ತು ಒಕ್ಕಲಿಗನ ಪರಿಸ್ಥಿತಿಗಳು ಪರಸ್ಪರಾವ
ಲಂಬಿಯಾಗಿರುವುದರಿಂದ ಎರಡೂ ಒಂದೇ ಸಮಸ್ಯೆಯ ಇಕ್ಕೆಲಗಳೆಂದು
ಭಾವಿಸಿ ಸಾಗಬೇಕಾಗಿದೆ. ಸ್ಥಗಿತವಾದ ಸಾಮಾಜಿಕ ರಚನೆಯೂ ಅಭಿ-
ವೃದ್ಧಿಗೆ ಆತಂಕವುಳ್ಳದ್ದಾಗಿದೆ. ಭೂಒಡೆಯನೂ ದುಡಿಯುವವನೂ ಬೇರೆ
ಬೇರೆಯಾಗಿದ್ದುದರಿಂದ ಅನಾಸ್ಥೆಗೆ ಕಾರಣವಾಗಿದೆ. ಸಾಗುವಳಿ ಉಪಕರಣ
ಗಳು ಸಾಂಪ್ರದಾಯಿಕ ಪದ್ಧತಿಯನ್ನು ಬಿಟ್ಟು ಮೇಲಕ್ಕೆದ್ದಿಲ್ಲ. ಈ ಎಲ್ಲ
ಪಾರಿವಾರಿಕ ಸಂಗತಿಗಳನ್ನು ಮನದಂದು ಸಮತೂಕದ ಆರ್ಥಿಕ ವ್ಯವಸ್ಥೆ-
ಯನ್ನುಂಟುಮಾಡಬೇಕೆಂದೂ ಸಮಾಜ ವಿಕಾಸವಾಗಬೇಕೆಂದೂ ಒಕ್ಕಲುತನ
ಅಭಿವೃದ್ಧಿ ಹೊಂದಬೇಕೆಂದೂ ಎಲ್ಲೆಡೆಯಲ್ಲಿಯೂ ತೀವ್ರ ಪ್ರಗತಿ ಸಾಧಿಸ
ಬೇಕೆಂದೂ ಪಂಚವಾರ್ಷಿಕ ಯೋಜನೆಯ ಉದ್ದೇಶವಾಗಿದೆ.

## ಯೋಜನೆಗಾಗಿ ಆಹಾರ ಧೋರಣೆ

ಯೋಜನೆಯು ಯಶಸ್ವಿಯಾಗಿ ಪೂರ್ತಿಗೊಳ್ಳಬೇಕಾದರೆ ಸುವ್ಯವ-
ಸ್ಥಿತವಾದ ಆಹಾರ ಧೋರಣೆಯು ಅತ್ಯಗತ್ಯ. ಸಮಾಜದಲ್ಲಿಯ ಬಹು
ಸಂಖ್ಯಾಕರು ಜೀವನದ ಧಾರಣೆಗಾಗಿ ತೊಳಲಾಡುತ್ತಿರುವವರೇ ಆಗಿರು-
ವುದರಿಂದ ಅವರಿಗೆ ಯೋಗ್ಯದರದಿಂದ ಆಹಾರಧಾನ್ಯವನ್ನು ಕೆಳಮಿತಿಯ
ಪ್ರಮಾಣದಲ್ಲಿಯಾದರೂ ಪೂರೈಸುವುದು ಅತ್ಯಾವಶ್ಯಕವಾಗುವುದು. ಅಂತ-
ಹರಿಗೆ ನಿಲುಕುವ ಹಾಗೆ ಆಹಾರಧಾನ್ಯಗಳ ಬೆಲೆಯು ಮಟ್ಟವಿರಲೇಬೇಕಾ-
ಗಿರುವುದು. ಆಹಾರಧಾನ್ಯಗಳ ಬೆಲೆಯು ಬೆಲೆಯ ರಚನೆಯಲ್ಲಿಯ
ಚುಕ್ಕಾಣಿಯಾಗಿರುವುದು. ಆಹಾರಧಾನ್ಯಗಳ ಬೆಲೆ ಏರಿದರೆ ಅದರ ಪರಿ-
ಣಾಮವು ಬೇರೆಡೆಯಲ್ಲಿಯೂ ಆಗಿ ಒಟ್ಟಿನಲ್ಲಿ ಜೀವನ ವೆಚ್ಚವು ಏರುವುದು
ಮತ್ತು ಉತ್ಪಾದನ ವೆಚ್ಚವೂ ಹೆಚ್ಚಾಗುವುದು.

ಆಹಾರ ನಿಯಂತ್ರಣವು ಯುದ್ಧಜನ್ಯ ಪರಿಸ್ಥಿತಿಯ ಮೂಲಕವಾಗಿ
ಬಂದಿದೆಯೆಂಬುದು ಅದರ ಗುಣವನ್ನು ಯೋಜನೆಯ ದೃಷ್ಟಿಯಿಂದ ಮರೆ-
ಯುವಂತೆ ಮಾಡುತ್ತದೆ. ಯುದ್ಧಕಾಲದಂತೆಯೆ ಯೋಜನೆಯ ಕಾಲ-
ದಲ್ಲಿಯೂ ಜೀವನವು ಒಂದು ಬಗೆಯ ನಿಯಂತ್ರಿತ ದಾರಿಯಲ್ಲಿ ಸಾಗಬೇಕಾ-

ಗಿರುವುದರಿಂದ ಆಹಾರ ನಿಯಂತ್ರಣವು ಯೋಜನೆಯ ಯಶಸ್ಸಿನ ಅಡಿ-ಗಲ್ಲಾಗಿದೆ. ಯೋಜನೆಯ ಪ್ರಾರಂಭಾವಸ್ಥೆಯಲ್ಲಿ ಎಲ್ಲ ಕ್ಷೇತ್ರಗಳಲ್ಲಿ ಹೆಚ್ಚು ಹಣವು ತೊಡಗಿರುವುದರಿಂದ ಆದಾಯವು ಆವಶ್ಯಕ ವಸ್ತುಗಳ ಪೂರೈಕೆಗಿಂತ ಹೆಚ್ಚಾಗುವುದು. ಹೆಚ್ಚಿದ ಆದಾಯದ ಮೂಲಕ ಆಹಾರದ ಪ್ರಮಾಣದಲ್ಲಿ ಹೆಚ್ಚಿನ ಬೇಡಿಕೆ ಕಂಡುಬರುವುದು. ಹೆಚ್ಚಿದ ಬೇಡಿಕೆಗೆ ತಕ್ಕಷ್ಟು-ಪೂರೈಕೆ ಆಹಾರ ಧಾನ್ಯಗಳಲ್ಲಿರದಿದ್ದರೆ ಮತ್ತು ಬೆಲೆಯ ನಿಯಂತ್ರಣವಿರದಿದ್ದರೆ ಕೊರತೆಯ ಪರಿಸ್ಥಿತಿಯುಂಟಾಗಿ ಬೆಲೆಗಳು ಏರತೊಡಗುವುವು. ಇದರಿಂದ ನಿಶ್ಚಿತ ಆದಾಯವಿರುವ ಕೆಳತರಗತಿಯ ಜನಸಮುದಾಯಕ್ಕೆ ಇಲ್ಲದ ತೊಂದರೆಯಾಗುವುದು. ಅದಕ್ಕಾಗಿ ಯೋಜನಾಬದ್ಧ ಜೀವನದಲ್ಲಿ ಆದಾಯದ ಬೆಲೆಯ ನಿಯಂತ್ರಣವು ಕ್ರಿಯಾತ್ಮಕ ಕಾರ್ಯ ಮಾಡುವುದು; ಬಡವರನ್ನು ಬಲಿ ಕೊಡದೆ ಉಳಿಸುವುದು.

ದೇಶದಲ್ಲಿ ಆಹಾರದ ಕೊರತೆಯಾದರೂ ಎಷ್ಟಿರುವುದು ? ಉತ್ಪಾದನೆ ಮತ್ತು ಬೇಡಿಕೆಯ ವ್ಯಾಪ್ತಿಯ ಸುದ್ದ ಸಂಗತಿಗಳ ಮೇಲಿಂದ ನಿಶ್ಚಿತ ಉತ್ತರ ಕೊಡಲು ಬರುವುದಿಲ್ಲ. ದೇಶದಲ್ಲಿನ ಬೇರೆ ಬೇರೆ ಪ್ರದೇಶಗಳಲ್ಲಿ ಕಾಲಕಾಲಕ್ಕೆ ಬಳಕೆಯ ಪ್ರಮಾಣವು ಹೆಚ್ಚುಕಡಿಮೆಯಾಗುತ್ತಲಿರುವುದು ಎಂದು ಅಧಿಕೃತ ಅಂಕೆ ಸಂಖ್ಯೆಗಳು ಹೇಳುವುವು. ಅಲ್ಲದೆ ಉತ್ಪಾದನೆಯ ಅಂಕೆ ಸಂಖ್ಯೆಗಳು ಅಷ್ಟು ನಂಬಲರ್ಹವಾಗಿಲ್ಲ. ಕಿರಿ ನೀರಾವರಿಗಳು, ಸಾಗು-ವಳಿಯ ಸುಧಾರಣೆಗಳು ದೇಶದ ಉತ್ಪಾದನ ಸಾಮರ್ಥ್ಯವನ್ನು ಹೆಚ್ಚಿಸಿದ್ದರೂ ಅಧಿಕಾರಿ ಅಂಕೆ ಸಂಖ್ಯೆಗಳಿಂದ ಉತ್ಪಾದನೆ ಹೆಚ್ಚಾದಹಾಗೆ ಕಂಡುಬಂದಿಲ್ಲ. ಉತ್ಪಾದನೆಯು ಹೆಚ್ಚಾಗಿದೆಯೆಂಬುದು ಎಲ್ಲರಿಗೂ ಅನ್ನಿಸಿದೆಯೇನೋ ನಿಜ. ಆದರೆ ಅಂಕೆ ಸಂಖ್ಯೆಗಳ ಪಾವಿತ್ರ್ಯ ತಿಳಿಯದ ನಮ್ಮ ದೇಶದ ಜನ ಸರಿ-ಯಾದ ಉತ್ಪಾದನೆಯ ವಿವರ ಕೊಡುತ್ತಿಲ್ಲ. ಇದರಿಂದ ಪರದೇಶದಿಂದ ಆಹಾರ ಧಾನ್ಯದ ಆಯಾತ ಮಾಡುವುದು ತಪ್ಪದಾಗಿದೆ. ಆಹಾರ ಧಾನ್ಯದ ಉತ್ಪಾದನೆ ಹೆಚ್ಚಿದ್ದರೂ ಬೆಳೆಯುತ್ತಿರುವ ಜನಸಂಖ್ಯೆಯ ದೃಷ್ಟಿಯಿಂದ ಸಾಕಷ್ಟು ಆಗಿದೆಯೆಂಬುದಕ್ಕೆ ಭರವಸೆ ಇಲ್ಲ. ಬೇಡಿಕೆಗಿಂತ ಪೂರೈಕೆ ಹೆಚ್ಚಾಗಿದೆಯೆಂಬುದು ಕಾಲಾಂತರದಲ್ಲಿ ತಿಳಿಯುವ ವಿಷಯವಾಗಿರು-ವುದರಿಂದ ಆಹಾರದ ಕೊರತೆ ಇನ್ನೂ ಉಳಿದಿದೆಯೆಂಬ ಗೃಹಿಕೆಯ ಮೇಲೆಯೆ

ಮುಂದೆ ಸಾಗುವುದು ಹಿತಕರವಾಗುವುದು. ಆದುದರಿಂದ ಯೋಜನೆಯ ಕಾಲಾವಧಿಯಲ್ಲಿ ಸೀದಾಪದ್ಧತಿ, ಬೆಲೆಯ ನಿಯಂತ್ರಣ, ಸರಕಾರದಿಂದ ಧಾನ್ಯಸಂಗ್ರಹ ಮತ್ತು ಕೆಳಮಿತಿಯಷ್ಟು ಆಹಾರದ ಆಯಾತ ಇವು ನಡೆಯಲೇಬೇಕಾಗುವುದು. ಸರಕಾರದ ಧಾನ್ಯಸಂಗ್ರಹವು ಹೆಚ್ಚುತ್ತ ಹೋದ ಹಾಗೆ ಕೊರತೆಯ ಆರ್ಥಿಕ ವ್ಯವಸ್ಥೆಯ ಗಂಡಾಂತರವು ಕಡಿಮೆಯಾಗುತ್ತ ಹೋಗುವುದು. ದೇಶದಲ್ಲಿನ ಉತ್ಪಾದನೆ ಹೆಚ್ಚುತ್ತ ಹೋದಹಾಗೆ ಆಯಾತದ ಪ್ರಮಾಣವು ಕಡಿಮೆಯಾಗುತ್ತ ಹೋಗುವುದು. ನಾಗರಿಕರು ತಮ್ಮ ಆಹಾರದ ಚಟಗಳಲ್ಲಿ ಮಾರ್ಪಾಟು ಮಾಡಿಕೊಳ್ಳುವ ಪ್ರವೃತ್ತಿ ತೋರಿದರೆ ಕೊರತೆಯ ಧಾನ್ಯವಾದ ಅಕ್ಕಿಯ ಆಯಾತದ ಪ್ರಮಾಣದಲ್ಲಿ ಕಡಿಮೆ ಮಾಡಲು ಆಗುವುದು. ಇಲ್ಲದಿರೆ ತೀರ ಕೆಳಮಿತಿಯ ಆಯಾತ ಪ್ರಮಾಣದಲ್ಲಿ ಅಂದರೆ ೫ ಲಕ್ಷ ಟನ್ನು ಅಕ್ಕಿ ಆಯಾತ ಮಾಡಿದರೂ ದೇಶವು ೪೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಬೇಕಾಗುವುದು. ದೇಶದಲ್ಲಿಯ ಅಕ್ಕಿಯ ಉತ್ಪಾದನೆ ನೋಡಿದರೆ ಎರಡು ಮೂರು ಶತಾಂಶಕ್ಕಿಂತ ಹೆಚ್ಚು ಕೊರತೆಯಿಲ್ಲ. ಈ ಕೊರತೆಯನ್ನು ಆಹಾರದ ಚಟದಲ್ಲಿಯ ಮಾರ್ಪಾಟಿನಿಂದ ತುಂಬಿಕೊಳ್ಳಲು ಅಷ್ಟೇನೂ ಕಠಿಣವಲ್ಲ. ನಡೆದುಬಂದ ಚಟವು ಬಿಡಲು ಕಠಿಣವೆಂದರೂ ಅಷ್ಟಕ್ಕಾಗಿ ತೆರುವ ಹಣದ ಮೊತ್ತವನ್ನು ಗಮನಿಸಿದರೆ ಪ್ರಯತ್ನ ಮಾಡಬೇಕೆಂದಾದರೂ ಅನ್ನಿಸಬಹುದೆಂದು ಆಸೆ ಮಾಡಬಹು-ದಾಗಿದೆ.

## ಭೂಸುಧಾರಣೆಯ ಧೋರಣೆ:

ಭೂ ಒಡೆತನದ ಪ್ರಶ್ನೆಯು ಇಂದು ರಾಷ್ಟ್ರೀಯ ಅಭಿವೃದ್ಧಿಯಲ್ಲಿ ಮಹತ್ವದ ವಾದವಸ್ತುವಾಗಿದೆ. ಈ ಪ್ರಶ್ನೆಯ ಪರಿಹಾರವು ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಸಂಘಟನೆಯ ರೀತಿಯ ಮೇಲೆ ಗಂಭೀರವಾಗಿ ಪ್ರಭಾವ ಬೀರುವುದು. ಆದುದರಿಂದ ಭೂಧಾರಣೆಯ ಧೋರಣೆಯ ಉದ್ದೇಶಗಳು ಯಾವುವು ಇರಬೇಕು ಎಂಬುದು ಮಹತ್ವದ ಪ್ರಶ್ನೆಯಾಗಿದೆ. ರಾಷ್ಟ್ರದ ಆರ್ಥಿಕ ವ್ಯವಸ್ಥೆ ಆವಶ್ಯಕತೆಗಳನ್ನು ಗಮನಿಸಿದರೆ, ಒಕ್ಕಲುತನದ ಉತ್ಪಾದನೆ ಹೆಚ್ಚಬೇಕೆಂಬುದು ಮತ್ತು ಸುಧಾರಿಸಿದ ಮತ್ತು ವೈವಿಧ್ಯ

ಪೂರ್ಣ ಗ್ರಾಮೀಣ ಆರ್ಥಿಕ ವ್ಯವಸ್ಥೆ ಇರಬೇಕೆಂಬುದು ಸ್ಪಷ್ಟವಾಗಿ ಕಾಣು-ವುದು. ಸಾಮಾಜಿಕ ದೃಷ್ಟಿಯಿಂದ ವಿಚಾರಿಸಿದರೆ, ಸಾಂಪತ್ತಿಕ ವೈಷಮ್ಯ ಕಡಿಮೆಯಾಗಬೇಕೆಂಬುದು, ದುರ್ಲಾಭ ಪಡೆಯುವುದರ ನಾಶವಾಗಬೇಕೆಂ-ಬುದು, ರೈತರಿಗೆ, ಕಾರ್ಮಿಕರಿಗೆ ಭದ್ರತೆ ಒದಗಿಸಬೇಕೆಂಬುದು, ಮತ್ತು ಗ್ರಾಮಾಂತರಗಳಲ್ಲಿ ವಾಸಿಸುವವರಿಗೆ ಸಮಾನ ಸ್ಥಾನ ಕಾರ್ಯಾವಕಾಶ-ಗಳನ್ನು ಒದವಿಸುವ ಆಶ್ವಾಸನ ಕೊಡಬೇಕೆಂಬುದು ಸ್ಪಷ್ಟವಾಗಿ ಕಂಡು-ಬರುವುದು. ಭೂಮಿಯ ಸಂಬಂಧವಾಗಿದ್ದ ಬೇರೆ ಬೇರೆ ಹಿತಸಂಬಂಧಗಳನ್ನು ಅನುಲಕ್ಷಿಸಿ ಧೋರಣೆಯ ಮುಖ್ಯ ರೂಪರೇಷೆಗಳನ್ನು ನಿಶ್ಚಿತಗೊಳಿಸಬೇಕಾ-ಗುವುದು. ಇದರ ಪರಿಣಾಮವು ಉತ್ಪಾದನದ ಮೇಲೆ ಯಾವ ರೀತಿಯಿಂದ-ಲಾಗುವುದು ಎಂಬುದನ್ನು ಗಮನಿಸಬೇಕು. ಇವರಲ್ಲಿ ಈ ಕೆಳಗಿನವರ ಹಿತ ಗಳು ಅಡಕವಾಗಿವೆ: (೧) ಮಧ್ಯಂತರಿಗಳು (೨) ದೊಡ್ಡ ಒಡೆಯರು (೩) ಸಣ್ಣ ಮತ್ತು ಮಧ್ಯಮ ತರಗತಿಯ ಒಡೆಯರು (೪) ಲಾವಣಿ ಹಿಡಿದ ರೈತರು (೫) ಭೂಮಿಯಿಲ್ಲದ ದುಡಿತದಾಳುಗಳು. ಒಬ್ಬರಿಗೆ ಹಿತ ಮಾಡ ಬೇಕೆಂದಾಗ ಇನ್ನೊಬ್ಬರಿಗೆ ಧಕ್ಕೆ ತಗಲುವುದು. ಸಾಮಾಜಿಕ ಆರ್ಥಿಕ ಮಾರ್ಪಾಟುಗಳು ಆದಮೇಲೆ ಹೊಸದೊಂದು ಸಮಾಜ ವ್ಯವಸ್ಥೆಯ ನಿರ್ಮಾಣವಾಗುವುದು.

ಕಳೆದ ಕೆಲ ವರುಷಗಳಲ್ಲಿಯ ಭೂಸುಧಾರಣೆಯಿಂದ ಮಧ್ಯಂತರಿ ಒಕ್ಕಲತನ ನಿರ್ಮೂಲನ ಮಾಡಲಾಗಿದೆ ಮತ್ತು ಸರಕಾರವು ಎಲ್ಲೆಡೆಯಲ್ಲಿಯೂ ನೇರವಾಗಿ ಭೂಸಾಗುವಳಿ ಮಾಡುವವರ ಸಂಬಂಧವನ್ನು ಇಟ್ಟುಕೊಂಡಿದೆ. ಉತ್ತರ ಪ್ರದೇಶ, ಮಧ್ಯ ಪ್ರದೇಶ, ಮತ್ತು ಮದ್ರಾಸ ರಾಜ್ಯಗಳಲ್ಲಿ ಜಮೀನದಾರಿ ಪದ್ಧತಿಯ ನಿರ್ಮೂಲನವಾಗಿದೆಯಲ್ಲದೆ ಬಿಹಾರದಲ್ಲಿ ಆ ಕಾರ್ಯವು ನಡೆದಿದೆ. ಆಸಾಮ ಮತ್ತು ಓಡಿಸಾಗಳ ಶಾಸನ ಸಭೆಯಲ್ಲಿ ಪಾಸಾದ ಕಾನೂನುಗಳು ಜಾರಿಯಾಗುವುದರಲ್ಲಿವೆ. ಪಶ್ಚಿಮ ಬಂಗಾಲದಲ್ಲಿ ಈ ಬಗ್ಗೆ ಪೂರ್ವಸಿದ್ಧತೆ ನಡೆದಿದೆ. ರಾಜಸ್ಥಾನ, ಮಧ್ಯಭಾರತ, ಹೈದರಾಬಾದ ಮತ್ತು ಸೌರಾಷ್ಟ್ರ ಮತ್ತು ಸೆಂಟ್ರಲ್ ಇಂಡಿಯಾದ ಸಣ್ಣ ರಾಜ್ಯಗಳಲ್ಲಿ ಜಾಗೀರದಾರೀ ಪದ್ಧತಿಯ ನಿರ್ಮೂಲನದ ಬಗ್ಗೆ ಶಾಸನಗಳಾಗಿವೆ. ಮುಂಬಯಿ, ಪಂಜಾಬ ಮತ್ತು ಪೆಪ್ಸುಗಳಲ್ಲಿಯೂ ಈ ಕಾರ್ಯ ನಡೆದದೆ.

ಆದರೆ ಇನ್ನೂ ಎರಡು ಸಮಸ್ಯೆಗಳ ಬಗ್ಗೆ ಪರಿಹಾರ ಉಪಾಯಗಳು ನಿಶ್ಚಿತ-ವಾಗಿಲ್ಲ.

(೧) ಜಮೀನುದಾರರಿಗೆ ಪರಿಹಾರದ್ರವ್ಯ ಕೊಡುವುದು, ಮತ್ತು

(೨) ಆವಶ್ಯಕ ಕಂದಾಯದ ಆಡಳಿತವನ್ನು ಪ್ರಸ್ಥಾಪಿಸುವುದು.

ಸಾಮಾನ್ಯವಾಗಿ ಎಲ್ಲ ರಾಜ್ಯಗಳಲ್ಲಿ ಪರಿಹಾರದ್ರವ್ಯವನ್ನು ಹಸ್ತಾಂತರ ಅಯೋಗ್ಯವಾದ ಮತ್ತು ಬಡ್ಡಿ ಪಡೆಯಲು ಯೋಗ್ಯವಾದ ೪೦ ವರುಷಗಳ ಕಾಲಮಿತಿಯ ಬಾಂಡುಗಳ ರೂಪದಲ್ಲಿ ಕೊಡಬೇಕೆಂದು ಮಾಡಲಾಗಿದೆ. ಜಮೀನದಾರಿ ಮತ್ತು ಜಾಗೀರದಾರೀ ಕ್ಷೇತ್ರಗಳಲ್ಲಿಯ ಕಂದಾಯ ಕಾಗದ ಪತ್ರಗಳು ಮತ್ತು ಕಂದಾಯದ ಆಡಳಿತವು ಇವುಗಳ ಬಗ್ಗೆ ಲಕ್ಷ್ಯಕಾಕ-ಬೇಕಾಗಿದೆ. ಈ ಕ್ಷೇತ್ರಗಳಲ್ಲಿ ಕಂದಾಯದ ಆಡಳಿತವೇ ಇರಲಿಲ್ಲ. ಜಮೀನ ದಾರಿ ನಿರ್ಮೂಲನದನಂತರ ಹೊಣೆಗಾರಿಕೆ ವಹಿಸಿಕೊಂಡ ರಾಜ್ಯಸರಕಾರದ ಕಾರ್ಯವು ಕಂದಾಯ ವಸೂಲಿ ಮತ್ತು ಹಕ್ಕಿನ ಪತ್ರಗಳನ್ನು ವ್ಯವಸ್ಥಿತ-ವಾಗಿಡುವುದು ಇಷ್ಟಕ್ಕೆ ಮರ್ಯಾದಿತವಾಗಿಲ್ಲ. ಬೀಳುಭೂಮಿ, ಅರಣ್ಯ, ಮೀನುಗಾರಿಕೆಯ ಸ್ಥಾನಗಳು, ಕಿರಿ ನೀರಾವರಿಗಳು, ಮುಂತಾದವುಗಳಿಗೆ ಸಂಬಂಧಪಟ್ಟ ಕಾರ್ಯವನ್ನು ಮಾಡಬೇಕಾಗಿದೆ, ಆಡಳಿತದ ಸಮಸ್ಯೆಗಳಿಗೆ ಪ್ರಾಥಮಿಕತೆಯನ್ನು ಕೊಟ್ಟು ಉಳಿದ ಆನುಷಂಗಿಕ ವ್ಯವಸ್ಥೆಯನ್ನು ರಾಜ್ಯ ಸರಕಾರಗಳು ಮಾಡಬೇಕು.

ವಿಶಾಲವಾದ ಕ್ಷೇತ್ರಗಳುಳ್ಳ ದೊಡ್ಡ ಒಡೆಯರ ಅಂಕಿತಕ್ಕೆ ಬೇರೆ ಬೇರೆ ಆಕಾರದ ಹೊಲಗಳು ಇವೆ; ಕೆಲವು ಅನಾರ್ಥಿಕವೂ ಆಗಿವೆ; ಕೆಲವು ಮಿತಿಮೀರಿ ದೊಡ್ಡವಾಗಿವೆ. ಸಣ್ಣವನ್ನು ಜೋಡಿಸಿ ಸರಿಯಾದ ಆಕಾರಕ್ಕೆ ಬರುವಂತೆ ಮಾಡಬೇಕು; ದೊಡ್ಡದಾದವುಗಳಲ್ಲಿ ಕಡಿಮೆ ಮಾಡಿ ಭೂಮಿ-ಯಿಲ್ಲದ ಶ್ರಮಿಕರಿಗೆ ಕೊಡಬೇಕು. ಒಟ್ಟಿನಲ್ಲಿ ಒಬ್ಬ ವ್ಯಕ್ತಿಯು ವಿಶಿಷ್ಟ ಮೇಲ್ಮಿತಿಯ ಪರಿಮಾಣದಕಿಂತ ಹೆಚ್ಚು ಭೂಮಿಯನ್ನು ಇಟ್ಟುಕೊಳ್ಳಬಾರ-ದೆಂಬ ತತ್ವಕ್ಕೆ ಯೋಜನೆ ಸಮಿತಿಯು ಅನುಕೂಲ ಮತ ಕೊಟ್ಟಿದೆ. ಈ ಮೇಲ್ಮಿತಿಯ ಪರಿಮಾಣವು ಭವಿಷ್ಯತ್‌ಕಾಲದಲ್ಲಿ ಪಡೆಯುವವರಿಗಾಗಿಯೂ ಸ್ವತಃ ಸಾಗುವಳಿ ಮಾಡಲು ಅಧಿಕಾರ ವಹಿಸಿಕೊಳ್ಳುವವರಿಗಾಗಿಯೂ

ಅನ್ವಯಿಸಬೇಕೆಂದು ಇಚ್ಛಿಸಲಾಗಿದೆ. ಉತ್ತರ ಪ್ರದೇಶದಲ್ಲಿ ಈ ಮೇಲ್ಮಿತಿ-ಯನ್ನು ೩೦ ಎಕರೆಗೆ ಮರ್ಯಾದಿತಗೊಳಿಸಲಾಗಿದೆ. ಮುಂಬಯಿಯಲ್ಲಿ ೫೦ ಎಕರೆಯಷ್ಟು, ಪಂಜಾಬದಲ್ಲಿ ೫೦ 'ಪ್ರಮಾಣಿತ' ಎಕರೆಯಷ್ಟು, ಹೈದರಾ ಬಾದದಲ್ಲಿ ಆರ್ಥಿಕ ಹಿಡುವಳಿಯ ಐದು ಪಟ್ಟುಗಳಷ್ಟು, ಎಂದು ನಿಶ್ಚಿತ-ಗೊಳಿಸಲಾಗಿದೆ. ಉಳಿದ ರಾಜ್ಯಗಳಲ್ಲಿ ಇನ್ನೂ ಮಿತಿಯನ್ನು ಗೊತ್ತುಮಾಡಿಲ್ಲ. ಆದರೆ ಅದು ಆಗಲೇಬೇಕು.

ಈ ರೀತಿಯ ಮಿತಿಯನ್ನು ಗೊತ್ತುಮಾಡಲು ಅನೇಕ ಪ್ರಮಾಣ ಲಕ್ಷಣಗಳು ಇವೆ. ಒಂದು ಗೊತ್ತುಮಾಡಿದ ಪ್ರದೇಶದಲ್ಲಿಯ 'ಕುಟುಂಬ ಯೋಗ್ಯ ಹಿಡುವಳಿ'ಯ ಪ್ರಮಾಣದ ಮೇಲೆ ನಿಶ್ಚಿತಗೊಳಿಸುವುದು ಹೆಚ್ಚು ವ್ಯಾವಹಾರಿಕವಾಗುವುದು. ಆಯಾ ಪ್ರದೇಶಗಳ ಅನುಕೂಲತೆ ಗಳನ್ನು ನೋಡಿ, ಮೇಲ್ಮಿತಿಯನ್ನು ಗೊತ್ತುಮಾಡಬಹುದಾದರೂ ಕುಟುಂಬ ಯೋಗ್ಯ ಹಿಡುವಳಿಯ ಮೂರು ಪಟ್ಟಾಗುವಷ್ಟು ಗೊತ್ತು ಮಾಡಿದರೆ, ಯೋಗ್ಯವೆನ್ನಿಸುವುದು. ಆದರೆ ಈ ಮೇಲ್ಮಿತಿಯ ಪರಿಮಾಣದ ಮಿತಿಯನ್ನು ಕೇವಲ ಇಂದು ನಾಳೆಯ ಒಡೆಯರಿಗೆ ಅನ್ವಯಿಸಬೇಕೋ, ಈ ಮೊದಲು ಒಡೆಯರಾಗಿದ್ದವರಿಗೂ ಅನ್ವಯಿಸಬೇಕೊ ಎಂಬುದು ಪ್ರಶ್ನೆಯಾಗಿದೆ. ಇದರಿಂದ ಅನೇಕ ಸಮಸ್ಯೆಗಳು ಉದ್ಭೂತವಾಗುವುವು. ಮಿತಿಗಿಂತ ಹೆಚ್ಚಾ-ದುದನ್ನು ಪಡೆದುದಕ್ಕಾಗಿ ಕೊಡುವ ಪರಿಹಾರದ್ರವ್ಯವು ಅವರು ಕೊಂಡ ಬೆಲೆಯಕಿಂತ ಒಮ್ಮೊಮ್ಮೆ ಕಡಿಮೆಯಾಗುವುದು. ಈ ಪರಿಸ್ಥಿತಿಯನ್ನು ಅಲಕ್ಷಿಸುವುದು ರಾಜ್ಯಘಟನೆಯನ್ನು ಉಲ್ಲಂಘಿಸಿದಂತಾಗುವುದು. ಆದುದ-ರಿಂದ ಈ ಸಮಸ್ಯೆಯನ್ನು ಬೇರೆ ರೀತಿಯಲ್ಲಿಯೆ ಬಿಡಿಸಬೇಕಾಗಿದೆ.

ಇಂತಹ ಒಡೆಯರ ಒಡೆತನದಲ್ಲಿ ಭೂಮಿಯ ಕೆಲವು ಭಾಗ ರೈತರಿಗೆ ಲಾವಣಿ ಕರಾರುಗಳ ಮೇಲೆ ಕೊಡಲ್ಪಟ್ಟುದು; ಕೆಲವು ಭಾಗ ಒಡೆಯರ ಸ್ವಂತದ ಸಂಚಾಲನದಲ್ಲಿ ಇರುವುದು. ಹೀಗಿದ್ದ ಸಂದರ್ಭಗಳಲ್ಲಿ, ಮೇಲ್ಮಿ-ತಿಯ ಪರಿಮಾಣದಕಿಂತಲೂ ಹೆಚ್ಚಾಗಿದ್ದರೆ ಅಷ್ಟುಮಟ್ಟಿಗೆ ಲಾವಣಿ ಹಿಡಿದ ರೈತನೆ ಒಡೆಯನೆಂದಾಗಬೇಕೆಂದು ಯೋಜನಾ ಸಮಿತಿಯ ಸೂಚನೆಯಿದೆ. ಈ ಸೂಚನೆಯು ಕಾರ್ಯಕಾರಿಯಾಗಬೇಕಾದರೆ ಪೂರ್ವಭಾವಿಯಾಗಿ

ಅನೇಕ ಹೆಜ್ಜೆಗಳನ್ನು ಇಡಬೇಕಾಗುವುದು. ಮೊದಲನೆಯದಾಗಿ ರೈತನಿಗೆ ಗೇಣಿಯ ಭದ್ರತೆಯುಂಟಾಗಬೇಕು. ಎರಡನೆಯದಾಗಿ ಆ ಭೂಮಿಯ ಮಾರುಬೆಲೆ ನಿಶ್ಚಿತಗೊಳಿಸಲು ಮತ್ತು ಅದನ್ನು ರೈತನಿಂದ ಪಡೆಯಲು ಮಾರ್ಗದರ್ಶಕ ತತ್ವಗಳ ನಿರ್ಣಯವಾಗಬೇಕು. ಲಾವಣಿ ಹಣದ ಇಂತಿಷ್ಟು ಪಟ್ಟು ಎಂದು ಮಾರುಬೆಲೆಯನ್ನು ನಿಶ್ಚಿತಗೊಳಿಸುವುದು ಸುಲಭವೆಂದು ತೋರುತ್ತದೆ. ಮತ್ತು ಆ ಹಣವನ್ನು ಕಂತಿನಲ್ಲಿ ಕೊಡುವಂತಾಗಬೇಕೆಂದು ನಿರ್ಣಯಿಸುವುದು ಹಿತಕಾರಿಯಾಗಿ ತೋರುತ್ತದೆ. ಭೂಕಂದಾಯ ವಸೂಲ ಮಾಡುವಾಗಲೇ ಆ ರೈತನಿಂದ ಅವನು ಈ ಬಗೆಯಾಗಿ ಪಡೆದ ಭೂಮಿಯ ಬೆಲೆಯನ್ನು ಸರಕಾರವು ವಸೂಲ ಮಾಡಬೇಕು. ಭೂ ಒಡೆಯರಿಗೆ ಪರಿಹಾರ ದ್ರವ್ಯವನ್ನು ಮಧ್ಯಂತರಿ ಹಕ್ಕುದಾರರಿಗೆ ಕೊಡಮಾಡಿದಂತೆ ಬಾಂಡುಗಳ ರೂಪದಲ್ಲಿ ಕೊಡಬಹುದು.

ಭೂಒಡೆಯರು ಸ್ವತಃ ಸಾಗುವಳಿ ಮಾಡಲು ಭೂಮಿಯನ್ನು ಇಟ್ಟುಕೊಂಡಿರುವ ಸಂದರ್ಭಗಳಲ್ಲಿ ಅವರ ಸಂಚಾಲನವು ಸಾರ್ವಜನಿಕ ಹಿತ ಸಂಬಂಧವನ್ನು ಅನುಲಕ್ಷಿಸಿ ಇದೆಯೊ ಇಲ್ಲವೊ ನೋಡಬೇಕು. ಯೋಜನೆಯು ಕಣ್ಣುಮುಂದಿಟ್ಟುಕೊಂಡಿದ್ದ ಉತ್ಪಾದನ ಮಟ್ಟವನ್ನು ಏರಿಸಲು ಅವಶ್ಯಕವಾಗುವಷ್ಟು ಕಾರ್ಯಕ್ಷಮತೆಯು ಮಟ್ಟಕ್ಕೆ ಬರುವುದೇ ಎಂದು ವಿಚಾರಿಸಬೇಕು. ಸಾಗುವಳಿ ಮತ್ತು ಸಂಚಾಲನದ ಮಟ್ಟವನ್ನು ಗೊತ್ತುಮಾಡಿ ಭೂಒಡೆಯರು ಅದನ್ನು ಲಕ್ಷಿಸಿ ಕಾರ್ಯಮಾಡುವಂತೆ ರಾಜ್ಯಸರಕಾರಗಳು ಶಾಸನಗಳನ್ನು ಮಾಡಬೇಕು. ಈ ಸೂಚನೆಗಳಿಂದ ಭೂಮಿಯ ಪುನರ್ವಿತರಣ ವ್ಯವಸ್ಥೆಯಾಗುವುದು. ಭೂಸಾಗುವಳಿ ಮತ್ತು ಸಂಚಾಲನ ಶಾಸನದಿಂದ ಸಾಗುವಳಿ ಮಟ್ಟವು ಯೋಜನೆಯು ಅಪೇಕ್ಷಿಸಿದಂತೆ ಆಗುವುದು.

ಇನ್ನು ಕಿರಿ ಮತ್ತು ಮಧ್ಯಮ ತರಗತಿಯ ಒಡೆಯರು. ಕುಟುಂಬ ಯೋಗ್ಯವಾದ ಪ್ರಮಾಣದಲ್ಲಿಯ ಭೂಒಡೆಯರು ಕಿರಿಒಡೆಯರು ಎಂದು ಹೇಳಬಹುದು. ಈ ಪ್ರಮಾಣದಕಿಂತ ಹೆಚ್ಚು ಮತ್ತು ಮೇಲ್ಮಿತಿಯ ಪ್ರಮಾಣದಕಿಂತ ಕಡಿಮೆ ಪ್ರಮಾಣದಲ್ಲಿಯ ಭೂಒಡೆಯರು ಮಧ್ಯಮ ತರಗತಿಯ ಒಡೆಯರು ಎಂದು ಹೇಳಬಹುದು. ಇಂತಹ ಕಿರಿ ಮತ್ತು

ಮಧ್ಯಮ ತರಗತಿಯ ಒಡೆಯರು ಸಹಕಾರಿ ತಳಹದಿಯ ಮೇಲೆ ಸಂಘಟಿಸಿಕೊಂಡು ಉತ್ಪಾದನದಲ್ಲಿ ಅಭಿವೃದ್ಧಿ ಮಾಡಿಕೊಳ್ಳುವಂತೆ ಉತ್ತೇಜಿಸುವ ಧೋರಣೆ ಇರಬೇಕು. ಏಕೆಂದರೆ ಕಿರಿ ಒಡೆಯರಲ್ಲಿ ಎಷ್ಟೋ ಜನರಿಗೆ ತುಣುಕಾದ ಮತ್ತು ಅನಾರ್ಥಿಕವಾದ ಭೂಮಿಗಳಿವೆ; ತುಂಡುಹೊಲಗಳ ಜೋಡಣೆಯ ಕಾರ್ಯವೂ ನಡೆಯಬೇಕು.

ಈ ಕಿರಿ ಮತ್ತು ಮಧ್ಯಮ ತರಗತಿಯ ಭೂಒಡೆಯರಿಂದ ಲಾವಣಿ ಹಿಡಿದ ರೈತರದೂ ಒಂದು ಸಮಸ್ಯೆ. ಈ ರೈತರನ್ನು ಬಿಡಿಸಿ ಒಡೆಯರು ಬೇಕಾದಾಗ ತಾವೇ ಸ್ವತಃ ಸಾಗುವಳಿ ಮಾಡುತ್ತೇವೆನ್ನಬಹುದು. ಒಡೆಯರಾಗಲಿ ಇಲ್ಲವೆ ಅವರ ಕುಟುಂಬದವರಾಗಲಿ ಸಾಗುವಳಿ ಮಾಡುತ್ತಿದ್ದರೆ ಮಾತ್ರ ರೈತರಿಂದ ಹೊಲ ಕಸಿಕೊಳ್ಳಬಹುದು ಎಂದು ಸರಕಾರವು ರೈತನಿಗೆ ಭದ್ರತೆ ಒದವಿಸಬೇಕು. ಒಂದು ನಿಶ್ಚಿತ ಕಾಲಾವಧಿ—ಐದು ವರುಷ—ಗೊತ್ತುಮಾಡಬೇಕು. ಅಷ್ಟರಲ್ಲಿ ಒಡೆಯರು ಸ್ವತಃ ಸಾಗುವಳಿ ಮಾಡುವುದಕ್ಕಾಗಿ ಹೊಲಗಳನ್ನು ರೈತನಿಂದ ಪಡೆಯಬಹುದು. ಈ ಗೊತ್ತುಮಾಡಿದ ಅವಧಿಯಲ್ಲಿ ಒಡೆಯರು ಹಾಗೆ ಮರಳಿ ಪಡೆಯದಿದ್ದರೆ ರೈತನಿಗೆ ಆ ಹೊಲವನ್ನು ಕೊಂಡುಕೊಳ್ಳುವ ಅಧಿಕಾರವಿರಬೇಕು. ರೈತನ ಅಧಿಕಾರಗಳನ್ನು ನಿಶ್ಚಿತಗೊಳಿಸಿ ವ್ಯಾಖ್ಯೆ ಮಾಡಬೇಕು. ರೈತಾಧಿಕಾರದ ಕಾಲಾವಧಿ ಮತ್ತು ಲಾವಣಿ ಇವು ಈ ಸಂಬಂಧದಲ್ಲಿ ವಿಚಾರಾರ್ಹವಾದ ಸಂಗತಿಗಳು.

ಭೂಮಿಯಿಲ್ಲದ ದುಡಿಮೆಯಾಳುಗಳದೊಂದು ಬೇರೆ ಸಮಸ್ಯೆ. ಗೊತ್ತುಮಾಡಿದ ಮೇಲ್ಮಿತಿಯ ಪ್ರಮಾಣದಕಿಂತ ಹೆಚ್ಚಿನ ಭೂಮಿಯನ್ನು ಒಡೆಯರಿಂದ ಪಡೆದು ಪುನರ್ವಿತರಣ ಮಾಡಿದರೂ ಎಲ್ಲರಿಗೂ ಭೂಮಿ ದೊರಕುವ ಭರವಸೆಯಿಲ್ಲ. ಈ ದೃಷ್ಟಿಯಿಂದ ನೋಡಿದಾಗ ಆಚಾರ್ಯ ವಿನೋಬಾ ಭಾವೆಯವರಿಂದ ನಡೆಸಲಾಗುತ್ತಿರುವ ಭೂದಾನ ಯಜ್ಞಕ್ಕೆ ವಿಶೇಷ ಬೆಲೆಯಿದೆ. ಉಳಿದ ಯಾವ ಮಾರ್ಗದಿಂದ ಪರಿಹಾರ ದೊರೆಯದೆ ಇದ್ದ ದುಡಿಮೆಯಾಳುಗಳಿಗೆ ಅವಕಾಶ ಒದಗಿಸುವುದು ಅದು. ಇಂತಹ ಸಾಮಾಜಿಕ ಕ್ರಾಂತಿಯಾಗದೆ ಹೋದರೆ, ಪರಿಸ್ಥಿತಿಯ ಪ್ರಭಾವದಲ್ಲಿ ಸಿಲುಕಿದ ಜನತೆ ಸಮಾನಾವಕಾಶವನ್ನು ಪಡೆಯುವ ಸಂದರ್ಭವೇ ಒದಗಿರಬದು. ಈ

ಸಂದರ್ಭದಲ್ಲಿ ಸಹಕಾರಿ ಪದ್ಧತಿಯ ಮೇಲೆ ಗ್ರಾಮದ ವ್ಯವಸ್ಥೆಯೆಲ್ಲವೂ ನಡೆದರೆ ಗ್ರಾಮದ ಸರ್ವಾಂಗೀಣ ಪ್ರಗತಿಯೂ ಆಗುವುದು, ಮತ್ತು ಎಲ್ಲ ಹಳ್ಳಿಗರಿಗೂ ಉದ್ಯೋಗ ದೊರಕಿಸಿಕೊಟ್ಟಂತಾಗುವುದು.

ಕೇವಲ ಒಕ್ಕಲುತನ ಕೆಲಸಗಾರರ ದೃಷ್ಟಿಯಿಂದ ಮಾತ್ರವೇ ಹಳ್ಳಿಯ ಆರ್ಥಿಕ ವ್ಯವಸ್ಥೆಯು ಸಹಕಾರಿ ಪದ್ಧತಿಯ ಪುನರ್ಘಟನೆಯಿಂದ ಆಗಬೇಕಾಗಿಲ್ಲ. ದೊಡ್ಡ, ಕಿರಿ ಮತ್ತು ಮಧ್ಯಮ ತರಗತಿಯ ಒಡೆಯರಿಂದ ಇಸಿದುಕೊಳ್ಳಲಾದ ಭೂಮಿಯ ಪುನರ್ವಿತರಣವಾದನಂತರವೂ ಸಾಕಷ್ಟು ಅವಕಾಶ ವೈಷಮ್ಯವು ಉಳಿದೇ ಉಳಿವುದು. ಒಂದು ವಿಭಾಗದ ಹಿತ ಸಾಧಿಸುವ ಪ್ರಯತ್ನದಲ್ಲಿ ಇನ್ನೊಂದು ವಿಭಾಗಕ್ಕೆ ಧಕ್ಕೆ ತಗಲಿರುತ್ತದೆ. ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದ, ಗ್ರಾಮದ ಆರ್ಥಿಕ ವ್ಯವಸ್ಥೆಯಲ್ಲಿ ವೈವಿಧ್ಯವನ್ನುಂಟುಮಾಡುವ ದೃಷ್ಟಿಯಿಂದ, ಸ್ಥಾನಿಕ ನಿರುದ್ಯೋಗಿತೆಯನ್ನು ಕಡಿಮೆ ಮಾಡುವ ದೃಷ್ಟಿಯಿಂದ, ಸಹಕಾರೀ ಪದ್ಧತಿಯ ಗ್ರಾಮವ್ಯವಸ್ಥೆಯಾಗುವುದು ಹಿತಕರವಾಗಿದೆ. ಸಹಕಾರಿ ಪದ್ಧತಿಯ ಒಕ್ಕಲುತನದ ಬಗ್ಗೆ ದೇಶದಲ್ಲಿ ವಿವಿಧ ರೀತಿಯ ಪ್ರಯೋಗಗಳು ನಡೆದಿವೆ. ಇವುಗಳ ಪರಿಶೀಲನೆಯಿಂದ ಹೊಸದಾರಿ ಸೂಚಿಸಬಹುದಾಗಿದೆ.

ಸ್ವಾತಂತ್ರ್ಯೋತ್ತರದ ವರುಷಗಳಲ್ಲಿ ಅನೇಕ ರಾಜ್ಯಗಳಲ್ಲಿ ಭೂಸುಧಾರಣೆಯ ಶಾಸನಕ್ಕಾಗಿ ವಿವರವಾದ ವಿಚಾರಣೆ—ಪರಿಶೀಲನೆ ನಡೆಸಲಾಯಿತು. ಇದರ ಪರಿಣಾಮವಾಗಿಯೆ ಜಮೀನುದಾರಿ ಜಾಗೀರುದಾರಿ ಪದ್ಧತಿಗಳ ನಿರ್ಮೂಲನವಾಯಿತು. ಈಗ ಹೆಚ್ಚಿನ ಸುಧಾರಣೆಯಾಗುವ ಕಾಲ ಬಂದಿದೆ. ಅದಕ್ಕೆ ಈಗಾಗಲೇ ಕೈಕೊಂಡ ಸುಧಾರಣೆಗಳ ವಸ್ತುನಿಷ್ಠ ವಿಮರ್ಶಾತ್ಮಕ ಮೌಲ್ಯಮಾಪನವೂ ಆಗಬೇಕು. ಪ್ರತಿಯೊಂದು ರಾಜ್ಯದಲ್ಲಿ ಮತ್ತು ಕೇಂದ್ರದಲ್ಲಿ ಈ ಬಗ್ಗೆ ಮಾಹಿತಿಸಂಗ್ರಹ ಮಾಡುವ ಸಂಸ್ಥೆಯೊಂದು ಬೇಕು. ಕೋಟ್ಯವಧಿ ಜನತೆಯ ಹಿತಸಂಬಂಧಗಳನ್ನು ಲಕ್ಷಿಸಿ ಕಾರ್ಯ ಮಾಡಬೇಕಾಗಿರುವುದರಿಂದ ಪ್ರತಿಯೊಂದು ಹೆಜ್ಜೆಯೂ ಪೂರ್ವಪರೀಕ್ಷೆ ಸಮೀಕ್ಷೆಯ ಅನಂತರ ಇಡಬೇಕಾಗುವುದು. ವೈಜ್ಞಾನಿಕ ರೀತಿಯಲ್ಲಿ ಸಂಶೋಧನೆ ನಡಸಿದನಂತರ ಅವುಗಳ ಪರಿಣಾಮವು ಹಿತಕಾರಿಯಾಗುವುದೆಂದು

ಮನಗಂಡನಂತರ ಸುಧಾರಣೆಗಳನ್ನು ಕಾರ್ಯಕಾರಿ ಮಾಡಿದರೆ ಭವಿಷ್ಯತ್ ಕಾಲದ ಪ್ರಗತಿಯು ಕುಂಠಿತವಾಗದೆ ಸಾಗುವುದು.

## ಕೃಷಿಶ್ರಮಿಕ

ಒಕ್ಕಲುತನದ ಕೆಲಸಗಳಲ್ಲಿ ಕೂಲಿಯ ಮೇಲೆ ಕೆಲಸಕ್ಕೆ ಇಟ್ಟುಕೊಳ್ಳಲ್ಪಟ್ಟಂಥ ಹಳ್ಳಿಯ ದುಡಿಮೆಯಾಳಿಗೆ 'ಕೃಷಿಶ್ರಮಿಕ' ಎಂದು ಕರೆಯಲಾಗಿದೆ. ೧೯೫೧ರ ಜನಗಣತಿಯು ಈ ವರ್ಗದ ಸಂಖ್ಯಾವ್ಯಾಪ್ತಿ ಮತ್ತು ಪ್ರಾದೇಶಿಕ ವಿತರಣವನ್ನು ತಿಳಿಯಲು ಸಾಧನವಾಗಿದೆ. ಒಕ್ಕಲುತನದಲ್ಲಿ ತೊಡಗಿದ ೨೪೯೦ ಲಕ್ಷ ಜನರಲ್ಲಿ ಸುಮಾರು ೧೮ ಶತಾಂಶದಷ್ಟು, ಇಂತಹ ಶ್ರಮಿಕರು ಮತ್ತು ಅವರ ಅವಲಂಬಿತರು ಇರುವರು. ಈ ಸಂಖ್ಯೆಯ ಪ್ರಮಾಣವು ರಾಜ್ಯರಾಜ್ಯಗಳಲ್ಲಿ ಭಿನ್ನವಾಗಿದೆ. ತ್ರಾವಣಕೋರ–ಕೋಚೀನದಲ್ಲಿ ೩೭ ಶತಾಂಶವಿದೆ. ೮ ಶತಾಂಶದಷ್ಟು ಉತ್ತರ ಪ್ರದೇಶದಲ್ಲಿದೆ. ಉಳಿದ ರಾಜ್ಯಗಳಲ್ಲಿ ಈ ಮಿತಿಗಳ ನಡುವಿನ ಪ್ರಮಾಣದಷ್ಟು ಇದೆ. ಎಲ್ಲಿ ಒಕ್ಕಲುತನದ ಮೇಲೆ ಹೆಚ್ಚು ಜನರು ಉಪಜೀವಿಸಿರುವರೋ ಅಲ್ಲಿ ಇವರ ಪ್ರಮಾಣ ಹೆಚ್ಚಿನದು ಆಗಿದೆ. ಈ ವರ್ಗದ ಜನ ಹೆಚ್ಚಾಗಲಿಕ್ಕೆ ಗ್ರಾಮಕೈಗಾರಿಕೆಗಳು ಕಮರಿದ್ದೇ ಮಹತ್ವದ ಕಾರಣವಾಗಿದೆ. ಹೊಲಗಳು ತುಂಡಾಗುತ್ತಿದ್ದ ಪರಿಪಾಠವೂ ಇವರ ಸಂಖ್ಯೆ ಬೆಳೆಯಲು ಪೋಷಕ ಕಾರಣವಾಗಿದೆ. ವರುಷದ ಬಹುಭಾಗ ನಿರುದ್ಯೋಗಿಯಾಗುವ ಮತ್ತು ತನ್ಮೂಲಕ ಅನೇಕ ಸಾಮಾಜಿಕ ಸಂಕಟಗಳಿಗೆ ಈಡಾಗುವ ಈ ವರ್ಗದ ಮೂಲಕ ಕೃಷಿವ್ಯವಸ್ಥೆಯಲ್ಲಿ ದೌರ್ಬಲ್ಯ ಉಂಟಾಗಿದೆ.

ಕೃಷಿಶ್ರಮಿಕರು ಸಿಲುಕಿಕೊಂಡಿರುವ ಸಾಮಾಜಿಕ ಮತ್ತು ಆರ್ಥಿಕ ತೊಂದರೆಗಳನ್ನು ನಿವಾರಿಸುವುದು ಪಂಚವಾರ್ಷಿಕ ಯೋಜನೆಯ ಮೂಲ ಉದ್ದೇಶವಾಗಿದೆ. ಇವರ ಆರ್ಥಿಕ ಸ್ಥಿತಿಯು ಒಟ್ಟಿನಲ್ಲಿ ಗ್ರಾಮದಲ್ಲಿಯ ಒಕ್ಕಲುತನದ ಆರ್ಥಿಕಸ್ಥಿತಿಯನ್ನು ಅವಲಂಬಿಸಿದೆ. ನೀರಾವರಿ ಮತ್ತು ಸಾಗುವಳಿಯ ಕಾರ್ಯಗಳ ವಿಸ್ತರಣದಿಂದ ಈ ಜನರಿಗೆ ಹೆಚ್ಚು ಕೆಲಸ್ಯಾಗಿ ಉದ್ಯೋಗ ದೊರೆಕಲಿದೆ. ಭೂಮಿಯ ಪುನರ್ವಿತರಣ, ಪಡಭೂಮಿಯ ಸಾಗುವಳಿ ಮುಂತಾದ ಕಾರ್ಯಕ್ರಮಗಳಿಂದಲೂ ಪರಿಹಾರ ದೊರೆಯುತ್ತಲಿದೆ.

ಈ ಶ್ರಮಿಕರ ಪುನರ್ನಿವೇಶನಕ್ಕೆ ಕೇಂದ್ರದ ಯೋಜನೆಯಲ್ಲಿ ಎರಡು ಕೋಟಿ ರೂಪಾಯಿಗಳನ್ನು ಪ್ರತ್ಯೇಕವಾಗಿ ಇಡಲಾಗಿದೆ. ದೇಶದಲ್ಲಿ ಔದ್ಯೋಗೀಕರಣ ಹೆಚ್ಚಿದಂತೆ ಕೆಲ ಶ್ರಮಿಕರು ಪಟ್ಟಣಗಳಿಗೆ ಬರತೊಡಗಿ ಅಲ್ಲಿ ಇದ್ದವರಿಗೂ ಹೊರಗೆ ಹೋದವರಿಗೂ ಉದ್ಯೋಗ ದೊರಕಬಹುದಾಗಿದೆ. ಗ್ರಾಮಕೈಗಾರಿಕೆಗಳ ಪುನರುತ್ಥಾನದಿಂದಲೂ ಸಾಕಷ್ಟು ನೆರವು ದೊರೆವುದು. ಹಿಂದುಳಿದ ವರ್ಗದವರಿಗಾಗಿ ಮಾಡಿದ ಅನುಕೂಲತೆಗಳಿಂದಲೂ ಈ ವರ್ಗಕ್ಕೆ ಸಹಾಯ ದೊರೆವುದು. ಇವಲ್ಲದೆ ಈ ಶ್ರಮಿಕರಿಗಾಗಿ ಈ ಕೆಳಗಿನ ವಿಶೇಷ ಉಪಾಯಯೋಜನೆಯನ್ನು ಮಾಡಲಾಗಿದೆ :

(೧) ಈ ಶ್ರಮಿಕರಿಗೆ ತಮ್ಮದೆಂಬ ಮನೆಯಾಗಲಿ ಮನೆ ಕಟ್ಟಿಕೊಳ್ಳಲು ತಮ್ಮದೆಂಬ ನೆಲವಾಗಲಿ ಇರುವುದಿಲ್ಲ. ಈಗಾಗಲೆ ಅವರು ವಾಸಿಸುವ ಮನೆಗಳು ನಿಂತ ನೆಲದ ಭೋಗಾಧಿಕಾರ ಅವರಿಗೆ ಉಳಿವಂತೆ ಶಾಸನದ ಸಹಾಯ ದೊರೆಯಬೇಕು. ಆ ನೆಲದ ಅಧಿಕಾರವು ಗ್ರಾಮ ಪಂಚಾಯತದ ಕಡೆಗೆ ಇದ್ದರೆ ಈ ಶ್ರಮಿಕರಿಗೆ ಆ ನೆಲವು ಯಾವ ಬೆಲೆಯಿಲ್ಲದೆ ದೊರೆಯುವಂತಾಗಬೇಕು. ವ್ಯಕ್ತಿಗಳ ಒಡೆತನಕ್ಕೆ ಇಂತಹ ನೆಲವು ಸಂಬಂಧಪಟ್ಟಿದ್ದರೆ ಒಲವಿನಿಂದ, ಸಾಧ್ಯವಾಗದಿದ್ದರೆ ಶಾಸನದ ಸತ್ತೆಯಿಂದ ಅವುಗಳ ಅಧಿಕಾರ ಪಡೆಯಬೇಕು. ಅವರಿಗೆ ಪಂಚಾಯತದಿಂದ ಪರಿಹಾರ ದ್ರವ್ಯ ಸಿಕ್ಕಬೇಕು. ಹೊಸ ನೆಲವು ಬೇಕಾಗಿದ್ದರೆ ಗ್ರಾಮದ ವಿಸ್ತರಣದಲ್ಲಿ ಅವುಗಳನ್ನು ಕೊಡಬೇಕು.

(೨) ಆಚಾರ್ಯ ವಿನೋಬಾ ಭಾವೆಯವರ ಭೂದಾನಯಜ್ಞದಿಂದಲೂ ಸಾಕಷ್ಟು ನೆರವು ಸಿಕ್ಕುತ್ತಲಿದೆ. ಈ ಬಗೆಯಾಗಿ ದೊರೆತ ಹೊಲಗಳ ಸಾಗುವಳಿ ಮಾಡಲು ಶ್ರಮಿಕರಿಗೆ ಉಪಕರಣಗಳ ಸಹಾಯ ಕೊಡಲ್ಪಡಬೇಕು.

(೩) ಸಹಕಾರೀ ಸಂಸ್ಥೆಗಳ ಸಹಾಯದಿಂದ ಇಂಥ ಶ್ರಮಿಕರ ಸಹಕಾರೀ ಸಂಘಗಳನ್ನು ಮಾಡಿಸಿ ಅವರು ರಚನಾಕಾರ್ಯದಲ್ಲಿ ತೊಡಗುವಂತೆ ಉತ್ತೇಜಿಸಬೇಕು. ಇಂತಹ ಸಹಕಾರೀ ಸಂಘಗಳಿಗೆ ಹೊಸದಾಗಿ ಪಡೆದ ಬೀಳು ಭೂಮಿ ಮತ್ತು ಸಾಗುವಳಿಯೋಗ್ಯ ಪಡಭೂಮಿಗಳನ್ನು ಕೊಡಬೇಕು.

ಈ ಬಗೆಯಾಗಿ ದೊರೆವ ಭೂಮಿಯು ಸಾಕಷ್ಟಾಗದಿದ್ದರೂ ಅದರಿಂದ ಈ ಶ್ರಮಿಕವರ್ಗದಲ್ಲಿ ಹೊಸ ಆಸೆ-ಚೈತನ್ಯ ಕುದುರುವುದು.

(ಆ) ಅವರಿಗೆ ಯಾವ ಭೂಮಿ ಕಾಣಿ ಇಲ್ಲದ್ದರಿಂದ ಅವರು ಯಾವ ಬಗೆಯ ಜಾಮೀನು ಕೊಡಲಾರರು. ಆದುದರಿಂದ ಸರಕಾರದ ಸಹಾಯಕ್ಕಾಗಿ ಅವರು ನಿಯಮಕ್ಕನುಸಾರವಾಗಿ ಅನರ್ಹರಾಗುವರು. ವೈಯಕ್ತಿಕವಾಗಿ ಸಾಲಕೊಡಬೇಕೆಂದರೆ ಆಡಳಿತಾತ್ಮಕ ತೊಡಕುಗಳುಂಟಾಗುವುದರಿಂದ ಈ ಶ್ರಮಿಕರ ಸಹಕಾರೀ ಸಂಘಗಳ ಮುಖಾಂತರ ಸರಕಾರವು ಸಾಲಕೊಡಬೇಕು. ಆ ಸಾಲದ ಹಣದಿಂದ ಅವರು ಮನೆ ಕಟ್ಟಿಕೊಳ್ಳಬಹುದು; ಸಾಗುವಳಿ ಉಪಕರಣಗಳನ್ನೂ, ಎತ್ತುಗಳನ್ನೂ, ಕೊಳ್ಳಬಹುದು; ಆನುಷಂಗಿಕ ಗ್ರಾಮ ಕೈಗಾರಿಕೆಗಳನ್ನು ಪ್ರಾರಂಭಿಸಬಹುದು. ಇಂತಹರ ಮಕ್ಕಳಿಗೆ ತಾಂತ್ರಿಕ ಶಿಕ್ಷಣ ಕೊಡಲು ಶೈಕ್ಷಣಿಕ ಶಿಷ್ಯವೃತ್ತಿಗಳನ್ನು ದಯಪಾಲಿಸಬೇಕು.

(ಇ) ಜಿಲ್ಲೆಯಲ್ಲಿಯ ಅಭಿವೃದ್ಧಿ ಕಾರ್ಯ ವಿಸ್ತರಣ ಸಂಸ್ಥೆಯು ಈ ಶ್ರಮಿಕರ ಕಲ್ಯಾಣದ ಬಗ್ಗೆ ವಿಶೇಷ ಲಕ್ಷ್ಯ ಹಾಕಬೇಕು. ಗ್ರಾಮ ಪಂಚಾಯತಿಯೂ ಕೂಡ, ಈ ಕಾರ್ಯವು ತನ್ನದೇದು ಬಗೆವಂತೆ ಮಾಡಿ ಕೃಷಿಶ್ರಮಿಕರ ಕಲ್ಯಾಣ ಸಾಧಿಸುವಂತೆ ಮಾಡಬೇಕು.

ಆಗ ಈ ವಿಷಯವು ಇದು ಬಗೆಹರಿಯದ ಸಮಸ್ಯೆಯಂತೆ ಕಂಡುದು ಪರಿಹಾರಯೋಗ್ಯವಾಗಿ ಗ್ರಾಮದಲ್ಲಿಯ ಈ ಶ್ರಮಿಕರು ಸಮರ್ಥ ನಾಗರಿಕರಾಗಲು ಸಹಾಯವಾಗುವುದು. ಗ್ರಾಮಜೀವನವು ವಿಕಾಸವಾಗುವುದು.

## ಕೃಷಿಯ ಕಾರ್ಯಕ್ರಮ

ಆಹಾರಧಾನ್ಯ ಮತ್ತು ಮುಖ್ಯ ವ್ಯಾಪಾರಿ ಬೆಳೆಗಳ ಕೊರತೆಯ ಪರಿಸ್ಥಿತಿಯಿದ್ದ ಬಗ್ಗೆ ಈಮೊದಲೆ ವಿವರಿಸಲಾಗಿದೆ. ಈ ಕೊರತೆಯನ್ನು ಕಡಿಮೆ ಮಾಡಲು ಇಲ್ಲವೆ ಹೋಗಲಾಡಿಸಲು ಪಂಚವಾರ್ಷಿಕ ಯೋಜನೆಯು ಪ್ರಯತ್ನಿಸುತ್ತಲಿದೆ. ಅದರ ವಿವರ ಇಂತಿದೆ:

| ವಸ್ತು | ಹೆಚ್ಚು ಉತ್ಪಾದನೆ ಆಗಬೇಕಾದುದು | ಶತಾಂಶ |
|---|---|---|
| ಆಹಾರಧಾನ್ಯ | ೭೬ ಲಕ್ಷ ಟನ್ನು | ೧೪ |
| ಹತ್ತಿ | ೧೨.೬ ಲಕ್ಷ ಬೇಲು | ೪೨ |
| ಜೂಟು | ೨೦.೯ ಲಕ್ಷ ಬೇಲು | ೬೩ |
| ಕಬ್ಬು | ೭ ಲಕ್ಷ ಟನ್ನು | ೧೨ |
| ಎಣ್ಣೆಕಾಳು | ೪ ಲಕ್ಷ ಟನ್ನು | ೮ |

ಆಹಾರಧಾನ್ಯಗಳ ಒಟ್ಟು ಅಂಕೆಯಾದ ೭೬ ಲಕ್ಷ ಟನ್ನುಗಳಲ್ಲಿ ೪೦ ಲಕ್ಷ ಟನ್ನು ಅಕ್ಕಿ, ೨೦ ಲಕ್ಷ ಟನ್ನು ಗೋದಿ, ೧೦ ಲಕ್ಷ ಟನ್ನು ಕಡಲೆ ಮತ್ತು ಅಕ್ಕಡಿಕಾಳುಗಳು, ೫ ಲಕ್ಷ ಟನ್ನು ಜೋಳ ಮುಂತಾದವುಗಳು. ಇಷ್ಟು ಪ್ರಮಾಣದಲ್ಲಿ ಹೆಚ್ಚಿನ ಉತ್ಪಾದನೆಯಾಗಬೇಕೆಂಬ ಗುರಿಯನ್ನು ರಾಜ್ಯ ಸರಕಾರಗಳೊಡನೆ ವಿಚಾರವಿನಿಮಯ ಮಾಡಿಯೆ ನಿರ್ಧರಿಸಲಾಗಿದೆ. ೧೯೫೧ರಲ್ಲಿ ಉಪಲಬ್ಧವಿದ್ದ ಅಂಕಿಸಂಖ್ಯೆಗಳ ಮೇಲೆ ಈ ಕಾರ್ಯಕ್ರಮವನ್ನು ನಿಶ್ಚಿತಗೊಳಿಸಲಾಗಿದೆ. ಹೆಚ್ಚು ವಿವರವಾದ ಅಂಕಿಗಳು ದೊರೆತಹಾಗೆ ಪುನರ್ವಿಮರ್ಶೆಯನ್ನು ಮಾಡಲಾಗಿದೆ.

ಈಗ ಸಾದರಪಡಿಸಲಾದ ಕೃಷಿ ಅಭಿವೃದ್ಧಿ ಕಾರ್ಯಕ್ರಮವು ಎರಡು ಭಾಗಗಳಲ್ಲಿ ವಿಭಾಗಿತವಾಗಿದೆ: (೧) ರಾಜ್ಯ ಸರಕಾರಗಳೊಡನೆ ವಿಚಾರ ವಿನಿಮಯ ಮಾಡಿ ೬೦ ಲಕ್ಷ ಟನ್ನುಗಳಷ್ಟು ಹೆಚ್ಚಿನ ಆಹಾರಧಾನ್ಯ ಉತ್ಪಾದನೆಯಾಗುವ ೧೨೫ ಕೋಟಿ ರೂಪಾಯಿಗಳ ವೆಚ್ಚದ ಯೋಜನೆಗಳು ಮತ್ತು (೨) ಇನ್ನೂ ಹೆಚ್ಚಿನ ೧೬ ಲಕ್ಷ ಟನ್ನುಗಳಷ್ಟು ಆಹಾರಧಾನ್ಯ ಬೆಳೆಯುವ ಯೋಜನಾಸಮಿತಿ ಸೂಚಿಸಿದ ಪೂರಕ ಯೋಜನೆಗಳು. ಹೆಚ್ಚಿನ ಯೋಜನೆಗಳ ಸ್ವರೂಪವನ್ನು ಈ ಕೆಳಗಿನ ವಿವರಗಳು ತಿಳಿಸುವುವು :

| | ಕೋಟಿ ರೂ. |
|---|---|
| ೧. ಕಿರಿ ನೀರಾವರಿ ರಚನೆಗಳಿಗಾಗಿ ಮಾಡಿದ ಹೆಚ್ಚಿನ ಸೌಕರ್ಯ | ೩೦ |
| ೨. ಕೊಳವೆ ಬಾವಿಗಳ ರಚನೆಗಾಗಿ ಹೆಚ್ಚಿನ ಕಾರ್ಯಕ್ರಮ | |
| ೩. ರಾಷ್ಟ್ರೀಯ ವಿಸ್ತರಣದ ಸಂಘಟನೆ | ೩ |

೪. ಹೆಚ್ಚು ಆಹಾರ ಬೆಳೆಯಿರಿ ಆಂದೋಲನದ ೧೯೫೨–೫೩ರ
ಪೂರಕ ಧನಸಹಾಯ ೧೦

೫. ಈಗಾಗಲೆ ಪ್ರಾರಂಭವಾಗಿರುವ ೬೬ ಯೋಜನೆಗಳನ್ನು ಒಳಗೊಂಡ
ಸಮಾಜ ವಿಕಾಸ ಯೋಜನೆಗಳು. ೯೦

ಇವುಗಳಿಗೆ ಜತೆಗೂಡಿ ಗೊಬ್ಬರ ಉತ್ಪಾದನೆಯ ಕಾರ್ಯಕ್ರಮವು ಮತ್ತು ಒಕ್ಕಲುತನ ಸಹಾಯಧನದ ಕಾರ್ಯಕ್ರಮವು ೧೯೫೫–೫೬ರ-ವಷ್ಟರಲ್ಲಿ ಸರಕಾರದ ಮತ್ತು ಸಹಕಾರೀ ಆಂದೋಲನದ ಮುಖಾಂತರ ಒಕ್ಕಲಿಗನಿಗೆ ಅಲ್ಪಾವಧಿಯ ಧನಸಹಾಯವೆಂದು ೧೦೦ ಕೋಟಿ ರೂಪಾಯಿ ಮತ್ತು ೨೫ ಕೋಟಿ ರೂಪಾಯಿಯ ಮಧ್ಯಮ ಕಾಲಾವಧಿಯ ಮತ್ತು ೫ ಕೋಟಿ ರೂಪಾಯಿಗಳ ದೀರ್ಘಕಾಲಾವಧಿಯ ಧನಸಹಾಯವೂ ದೊರೆವುದು.

ಈ ಎಲ್ಲ ಸಾಧನಗಳು ಸಹಾಯಮಾಡಿದಾಗ ಹೆಚ್ಚಿನ ಉತ್ಪಾದನೆಯ ಗುರಿ ಮುಟ್ಟುವುದು ಮತ್ತು ದೇಶದ ಆಹಾರಧಾನ್ಯದ ಕೊರತೆಯು ತುಂಬಿ ಬರುವುದು. ರಾಜ್ಯ ಸರಕಾರಗಳೊಂದಿಗೆ ಚರ್ಚಿಸಿ ಗೊತ್ತುಮಾಡಲಾದ ೬೫ ಲಕ್ಷ ಟನ್ನುಗಳ ಆಹಾರ ಉತ್ಪಾದನೆಯ ಯೋಜನೆಯನ್ನು ಈ ರೀತಿಯಿಂದ ಸಾಧಿಸಬೇಕೆಂದಿದೆ:

| | | |
|---|---|---|
| ಹಿರಿ ನೀರಾವರಿ ರಚನೆಗಳ ಸಹಾಯದಿಂದ | ೨೦·೧ | ಲಕ್ಷ ಟನ್ನು |
| ಕಿರಿ ನೀರಾವರಿಗಳಿಂದ | ೧೭·೮ | ,, |
| ಬೀಳುಭೂಮಿಯನ್ನು ಮರಳಿ ಪಡೆದು ಅಭಿವೃದ್ಧಿ ಮಾಡುವುದರಿಂದ | ೧೫·೧ | ,, |
| ಗೊಬ್ಬರ ಮತ್ತು ಫರ್ಟಿಲಾಯಿಜರುಗಳಿಂದ | ೬·೫ | ,, |
| ಸುಧಾರಿಸಿದ ಬೀಜಗಳಿಂದ | ೪·೬ | ,, |
| | ೬೪·೧ | ಲಕ್ಷ ಟನ್ನು |

ಮೇಲ್ಕಾಣಿಸಿದ ಹಿರಿ–ಕಿರಿ ನೀರಾವರಿ ರಚನೆಗಳಿಂದ ೧೯೦ ಲಕ್ಷ ಎಕರೆ ನೆಲ ನೀರುಣ್ಣುವುದು. ಇದರಲ್ಲಿ ರಾಜ್ಯಗಳ ಯೋಜನೆಗಳಲ್ಲಿ ಅಡಕವಾದ

೮೨ ಲಕ್ಷ ಎಕರೆ ಭೂಮಿಯು ಕಿರಿ ನೀರಾವರಿಯಿಂದ ನೀರು ಪಡೆವುದು. ಅದರ ವಿವರ ಇಂತಿದೆ :

| | | |
|---|---|---|
| ೧ | ಒಡ್ಡುಕಟ್ಟು ಮತ್ತು ಕಾಲುವೆ | ೪೪ ಲಕ್ಷ ಎಕರೆ |
| ೨ | ಭಾವಿಗಳು (ಹೊಸವೂ ದುರಸ್ತಿ ಮಾಡಿದುವೂ) | ೧೬ ,, |
| ೩ | ಕೊಳವೆ ಬಾವಿಗಳು (ಹಿರಿ ನೀರಾವರಿಯಲ್ಲಿ ಸಮಾವೇಶವಾಗದುವು) | ೬ ,, |
| ೪ | ಕೆರೆಗಳು (ಸುಧಾರಣೆ ಮಾಡಿದ್ದು ಮತ್ತು ಕಟ್ಟಿದ್ದು) | ೮ ,, |
| ೫ | ಪಂಪಿಂಗ ವ್ಯವಸ್ಥೆಯಿಂದ | ೭ ,, |
| | ಒಟ್ಟು | ೮೨ ಲಕ್ಷ ಎಕರೆ |

ಇದಕ್ಕೆ ಜತೆಯಾಗಿ ಪೂರಕ ಕಿರಿ ನೀರಾವರಿ ಯೋಜನೆಗಳಿಂದ ಇನ್ನೂ ೩೦ ಲಕ್ಷ ಎಕರೆಗಳಿಗೆ ನೀರುಣ್ಣಿಸುವ ಅನುಕೂಲತೆಯು ಏರ್ಪಾಡಾಗಿದೆ. ಅದಕ್ಕಾಗಿ ೩೦ ಕೋಟಿ ರೂಪಾಯಿಗಳನ್ನು ತೆಗೆದಿಡಲಾಗಿದೆ. ಇವೆಲ್ಲವೂ ಸೇರಿ ಒಟ್ಟು ಕಿರಿ ನೀರಾವರಿ ಯೋಜನೆಗಳಿಗೆ ೭೭ ಕೋಟಿ ರೂಪಾಯಿಗಳ ವೆಚ್ಚವಾಗುವುದು. ಸಮಾಜವಿಕಾಸಯೋಜನೆಗೆ ಮೀಸಲಾಗಿಡಲಾಗಿದ್ದ ಹಣದಲ್ಲಿಯ ೧/೩ ಹಣವು ನೀರಾವರಿಗಾಗಿಯೆ ಬಳಸಲಾಗುತ್ತಿದೆ. ಈ ಎಲ್ಲ ಯೋಜನೆಗಳು ಕಾರ್ಯಕಾರಿಯಾದಹಾಗೆ ಮೇಲೆ ವಿವರಿಸಿದ್ದರಕಿಂತ ಹೆಚ್ಚಾಗಿಯೆ ಭೂಮಿಯು ನೀರಾವರಿ ಪೋಷಿತವಾಗುವುದು.

ಬೀಳುಬಿದ್ದ ಭೂಮಿಯನ್ನು ಮರಳಿ ಸಾಗುವಳಿಗಾಗಿ ಪಡೆಯುವ ಯೋಜನೆಯಲ್ಲಿ ರಾಜ್ಯಸರಕಾರಗಳು ೨೫ ಕೋಟಿ ರೂಪಾಯಿಗಳನ್ನು, ಕೇಂದ್ರ ಸರಕಾರವು ಕೇಂದ್ರ ಟ್ರಾಕ್ಟರ ಸಂಸ್ಥೆಗಾಗಿಯೆಂದು ೧೦ ಕೋಟಿ ರೂಪಾಯಿಗಳನ್ನು ತೆಗೆದಿಟ್ಟಿವೆ. ಇದರಿಂದ ೭೪ ಲಕ್ಷ ಎಕರೆ ಭೂಮಿಯು ಅಭಿವೃದ್ಧಿಯಾಗಲಿದೆ. ಇದರಲ್ಲಿ ಕೇಂದ್ರ ಮತ್ತು ರಾಜ್ಯಗಳ ಟ್ರಾಕ್ಟರ ಸಂಸ್ಥೆಗಳು ಅನುಕ್ರಮವಾಗಿ ೧೪ ಲಕ್ಷ ಮತ್ತು ೧೨ ಲಕ್ಷ ಎಕರೆ ಭೂಮಿಯನ್ನು ಸಾಗವಳಿಗಾಗಿ ಪಡೆಯುತ್ತವೆ. ಉಳಿದ ೪೮ ಲಕ್ಷ ಎಕರೆ ಭೂಮಿಯನ್ನು ರೈತರು

ವೈಯುಕ್ತಿಕವಾಗಿಯೆ ಸಾಗುವಳಿಗಾಗಿ ಪಡೆಯುವರೆಂದು ಎಣಿಸಲಾಗಿದೆ. ರೈತರಿಗೆ ಆವಶ್ಯಕವಾದಲ್ಲಿ ಸರಕಾರದ ನೆರವು ಕೊಡಲಾಗುವುದು.

ವ್ಯಾಪಾರಿ ಬೆಳೆಗಳಿಗಾಗಿ ಸರಕುಸಮಿತಿಗಳು ತಮ್ಮ ಧನಸಂಗ್ರಹದಿಂದ ಅವುಗಳ ಹೆಚ್ಚಿನ ಉತ್ಪಾದನೆಗಾಗಿ ಸಹಾಯ ಮಾಡುವುವು. ಈ ಸಮಿತಿಗಳು ವಿಶೇಷ ಕರರೂಪದಿಂದ ಈ ಕೆಳಗಿನಂತೆ ಧನಸಂಗ್ರಹ ಮಾಡುವುವು: ಹತ್ತಿ ೩.೫ ಕೋಟಿ; ಕಬ್ಬು ೧.೩ ಕೋಟಿ; ಎಣ್ಣೆಕಾಳುಗಳು ೦.೫ ಕೋಟಿ. ಜೂಟಿಗಾಗಿ ಪ್ರತ್ಯೇಕ ಕರದ ಅನುಕೂಲತೆ ಇಲ್ಲದ್ದರಿಂದ ಯೋಜನೆಯು ೫೦ ಲಕ್ಷ ರೂಪಾಯಿಗಳನ್ನು ತೆಗೆದಿಟ್ಟಿದೆ. ಆಹಾರಧಾನ್ಯಗಳಕಿಂತ ವ್ಯಾಪಾರಿ ಬೆಳೆಗಳ ಬೆಲೆಯ ಮೇಲೆ ಅವುಗಳ ಹೆಚ್ಚಿನ ಉತ್ಪಾದನೆಯು ಅವಲಂಬಿಸಿದೆ. ಸದ್ಯಕ್ಕಿದ್ದ ಆಹಾರಧಾನ್ಯಗಳ ಮತ್ತು ವ್ಯಾಪಾರಿ ಬೆಳೆಗಳ ಬೆಲೆಯ ಸಂಬಂಧವೇ ಉಳಿಯುವುದಾದರೆ ವ್ಯಾಪಾರಿಬೆಳೆಯ ಹೆಚ್ಚಿನ ಉತ್ಪಾದನದ ಪ್ರಮಾಣದ ಗುರಿಯನ್ನು ಮುಟ್ಟಲು ಸಾಧ್ಯವಾಗುವುದು.

ಯಾವ ಬೆಳೆಯನ್ನು ಬೆಳೆಯಬೇಕೆಂದು ರೈತನು ನಿರ್ಣಯಿಸಲು ಅನೇಕ ಸಂಗತಿಗಳು ಕಾರಣವಾಗಿರುವುವು. ಬೆಲೆ, ಹವಾಮಾನ ಪರಿಸ್ಥಿತಿ, ಬಂಡವಲಿನ ಪೂರೈಕೆ ಇವು ಕಾಲಕಾಲಕ್ಕೆ ಬದಲಾಗುವುವು. ನೀರಾವರಿಯ ಅನುಕೂಲತೆ, ಸಂಪರ್ಕಸಾಧನಗಳಲ್ಲಿ ಸುಧಾರಣೆ, ಪಟ್ಟಣಗಳ ಬೆಳಿಗೆ, ಆಹಾರ ಚಟಗಳಲ್ಲಿಯ ಮಾರ್ಪಾಟು, ಇವೂ ಕೂಡ ಆಯಾ ಬೆಳೆಗಳ ಕ್ಷೇತ್ರಪ್ರಮಾಣವನ್ನು ನಿರ್ಣಯಿಸುತ್ತವೆ. ಆದರೂ ಹೊಸ ಭೂಮಿಯು ಸಾಗುವಳಿಗೆ ತರಲ್ಪಡುವ ಸಂಗತಿಯೂ ನೀರಾವರಿಯ ಅನುಕೂಲತೆಯೂ ಹೆಚ್ಚಾಗುತ್ತಲಿದೆಯೆಂಬ ಸಂಗತಿಯಿಂದ ಸ್ಥೂಲವಾಗಿ ಈ ಐದು ವರುಷದ ಕಾಲಾವಧಿಯ ಕೊನೆಗೆ ಆಯಾ ಬೆಳೆಗಳು ಇಂತಿಷ್ಟು ಕ್ಷೇತ್ರದಲ್ಲಿ ಬೆಳೆಯಬಹುದೆಂದು ಗಣಿಸಲಾಗಿದೆ:

| | ೧೯೫೦–೫೧ | ೧೯೫೫–೫೬ |
|---|---|---|
| | ಲಕ್ಷ ಎಕರೆ | |
| ಅಕ್ಕಿ | ೭೬೦ | ೮೦೦ |
| ಗೋದಿ | ೨೪೦ | ೨೭೦ |
| ಬೇರೆ ಧಾನ್ಯಗಳು | ೯೩೦ | ೯೦೦ |
| ಕಡಲೆ ಮತ್ತು ಇತರ ಅಕ್ಕಡಿಕಾಳು | ೪೭೨ | ೪೯೦ |
| ಹತ್ತಿ | ೧೪೬ | ೧೮೦ |
| ಜೂಟು | ೧೪ | ೨೦ |
| ಕಬ್ಬು | ೪೨ | ೪೫ |
| ಎಣ್ಣೆಕಾಳುಗಳು | ೨೬೭ | ೨೭೦ |
| ಹಣ್ಣು–ಪಲ್ಲೆ | ೫೦ | ೬೦ |
| ಇತರ | ೨೫೦ | ೨೪೦ |

ಈ ರೀತಿಯಾಗಿ ಗುರಿಯನ್ನು ನಿರ್ಣಯಿಸುವಾಗ ಋತುಮಾನದ ಸ್ಥಿತ್ಯಂತರಗಳನ್ನು ಗಣನೆಗೆ ತರಲು ಸಾಧ್ಯವಿಲ್ಲ. ಆ ಸ್ಥಿತ್ಯಂತರಗಳು ಒಕ್ಕಲುತನ ಉತ್ಪಾದನೆಯಲ್ಲಿ ಅನಿವಾರ್ಯವೆಂದು ಗಣಿಸಿದರೂ ಒಟ್ಟಿನಲ್ಲಿ ೧೦ ಶತಾಂಶದಷ್ಟು ಹೆಚ್ಚುಕಡಿಮೆಯಾಗಬಹುದು. ಆದರೆ ಸುಧಾರಿಸಿದ ಬೀಜ, ಗೊಬ್ಬರ, ರಾಸಾಯನಿಕ ಗೊಬ್ಬರ ಇವು ಉತ್ಪಾದನವನ್ನು ಎಣಿಕೆಗಿಂತ ಹೆಚ್ಚಾಗಿಯೆ ಒದವಿಸುವವೆಂಬ ಭರವಸೆಯೂ ಇದೆ. ಆದುದರಿಂದ ಗುರಿಯ ಸಾಧನೆಯಲ್ಲಿ ಯಾವ ಸಂದೇಹಕ್ಕೂ ಆಸ್ಪದವಿಲ್ಲವೆಂದು ಹೇಳಬಹುದು.

ಪ್ರಕರಣ ಏಳು:

# ಅಭಿವೃದ್ಧಿ ಕಾರ್ಯಕ್ರಮಗಳು: ಕೃಷಿಯ ಪೋಷಕಾಂಗಗಳು.

## ಸಮಾಜವಿಕಾಸ ಮತ್ತು ವಿಸ್ತರಣ ಸೇವೆ

ಹಳ್ಳಿಗಳ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ರೂಪಾಂತರಿಸಲು ಪಂಚವಾರ್ಷಿಕ ಯೋಜನೆಯು ಸಮಾಜವಿಕಾಸ-ಅಭಿವೃದ್ಧಿಯನ್ನು ಪದ್ಧತಿಯೆಂದಾಗಿ ಮಾಡಿಕೊಂಡಿದೆ ಮತ್ತು ಗ್ರಾಮಸೇವಾ ವಿಸ್ತರಣವನ್ನು ಸಾಧನವೆಂದಾಗಿ ಮಾಡಿಕೊಂಡಿದೆ. ಸಮಾಜವಿಕಾಸ ಯೋಜನೆಗೆ ಪಂಚವಾರ್ಷಿಕ ಯೋಜನೆಯಲ್ಲಿ ೯೦ ಕೋಟಿ ರೂಪಾಯಿಗಳನ್ನು ತೆಗೆದಿಡಲಾಗಿದೆ.

ಕಳೆದ ಮುವ್ವತ್ತು ವರುಷಗಳಲ್ಲಿ ರಾಜ್ಯಗಳಲ್ಲಿ ಬೇರೆ ಬೇರೆ ಆಡಳಿತ ವಿಭಾಗದವರು ಗ್ರಾಮಾಭಿವೃದ್ಧಿಗಾಗಿ ಹಲವಾರು ಪ್ರಯತ್ನಗಳನ್ನು ಮಾಡಿದರು. ಈ ಪ್ರಯತ್ನಗಳಲ್ಲಿ ಸಂಬಂಧೀಕರಣವಿಲ್ಲದ್ದರಿಂದ ಗ್ರಾಮಜೀವನದ ಸಮಗ್ರದೃಷ್ಟಿಯು ಕಾರ್ಯವಾಗಲಿಲ್ಲ. ಈ ಬಗೆಯಲ್ಲಿ ಆದ ಪ್ರಯತ್ನಗಳ ಪರಿಣಾಮಗಳ ಪರಿಶೀಲನೆಯಿಂದ ಸ್ಥೂಲವಾಗಿ ಕೆಲ ಮಾತುಗಳು ಕಂಡುಬರುವುವು.

(೧) ಒಂದೊಂದು ಆಡಳಿತ ವಿಭಾಗದವರು ತಮ್ಮ ಕಾರ್ಯಕ್ಕೆಂದು ಹಳ್ಳಿಗೆ ಹೋದಾಗ ಅವರು ತಮ್ಮ ದೃಷ್ಟಿಯಿಂದಲೆ ಕಾರ್ಯ ಮಾಡುತ್ತಿದ್ದುದರಿಂದ ಹಳ್ಳಿಗರ ಮನಸ್ಸಿನಲ್ಲಿ ಒಂದು ಬಗೆಯ ಗೊಂದಲವೇಳುತ್ತಿದ್ದಿತು. ಸರಕಾರದ ಕಾರ್ಯವಿಭಾಗಗಳಂತೆ ಹಳ್ಳಿಗರ ಜೀವನವು ವಿಭಾಗಿತವಾಗಿರುವುದಿಲ್ಲ. ಹತ್ತು ರೀತಿಯ ಕಾರ್ಯಕ್ಕಾಗಿ ಹತ್ತು ಬೇರೆ ಜನರು ಬಂದು

ಹಳ್ಳಿಗನಿಗೆ ತಿಕ್ಕೆಬೀಳುವುದಕ್ಕಿಂತ ಹತ್ತು ವಿಭಾಗದ ಕಾರ್ಯವನ್ನು ಹೊಂದುಗೂಡಿಸುವ ಒಬ್ಬನೆ ಕಾರ್ಯಕರ್ತನು ಇರುವುದು ಲೇಸೆಂದು ಇಂದು ಗ್ರಾಮಸೇವಕನೆಂದು ಹೆಸರು ಪಡೆದು ಬಂದಿದ್ದಾನೆ.

(೨) ಹಳ್ಳಿಗರನ್ನು ಹೊರಗಿನವರು ಬಂದು ಸುಧಾರಿಸುವ ಪ್ರಯತ್ನದಕಿಂದ ಹಳ್ಳಿಗರು ತಮ್ಮ ಸುಧಾರಣೆಯನ್ನು ತಾವೇ ಮಾಡಿಕೊಳ್ಳುವ ಹೊಣೆ ಹೊರಬೇಕು. ಸುಧಾರಣೆಯಲ್ಲಿ ಆಸ್ಥೆ ಆಸಕ್ತಿ ಅವರಿಗೆ ಹುಟ್ಟಿದರೆ ಮಾತ್ರ ಹೊರಗಿನ ನೆರವಿನ ಸದುಪಯೋಗವಾಗುವುದು. ಅವರಿಗೆ ಸುಧಾರಣೆ ಬೇಕಾಗಿಲ್ಲದಿದ್ದರೆ ಅವರ ಮೇಲೆ ಹೇರಿ ಏನು ಪ್ರಯೋಜನ ? ತಮ್ಮ ಹಿತ ಯಾತರಲ್ಲಿದೆಯೆಂಬುದನ್ನು ಅವರು ತಿಳಿಯುವಂತೆ ಮಾಡಬೇಕು ಮತ್ತು ಗ್ರಾಮದ ಪುನರುಜ್ಜೀವನ ಕಾರ್ಯದಲ್ಲಿ ಉತ್ಸಾಹಾಸಕ್ತಿಯನ್ನು ತೋರುವಂತೆ ಮಾಡಬೇಕು.

ಹಿಂದೆ ಪಡೆದ ಅನುಭವಗಳ ಸಾರದಿಂದ ಇಂದಿನ ಸಮಾಜ ವಿಕಾಸ ಯೋಜನೆಗಳನ್ನು ರೂಪಿಸಲಾಗಿದೆ. ಈ ಯೋಜನೆಯನ್ನು ೧೯೫೨ರಲ್ಲಿ ಪ್ರಾರಂಭಿಸಲಾಗಿದೆ. ಈ ವಿಚಾರವೇನು ಹೊಸದಾಗದೆ ಇದ್ದರೂ ಅದರ ಪ್ರಯೋಗ ಮಾತ್ರ ವ್ಯವಸ್ಥಿತವಾಗಿ ಸಂಘಟಿತವಾಗಿದೆ. ಈಗ ಕಾರ್ಯಕಾರಿಯಾಗುತ್ತಲಿರುವ ೫೫ ಸಮಾಜ ವಿಕಾಸ ಯೋಜನೆಗಳು ದೇಶವ್ಯಾಪಿಯಾಗಿದ್ದು ಒಂದೊಂದು ಘಟಕದಲ್ಲಿ ೩೦೦ ಹಳ್ಳಿಗಳ ಸಮಾವೇಶವಾಗಿರುತ್ತದೆ. ಒಂದೊಂದು ಘಟಕದ ಕ್ಷೇತ್ರವು ಸುಮಾರು ೫೦೦ ಚದರು ಮೈಲು; ಸಾಗುವಳಿಯಾದ ಭೂಮಿ ೧೫೦,೦೦೦ ಎಕರೆ; ಪೋಷಿತವಾದ ಜನಸಂಖ್ಯೆ ೨೦೦,೦೦೦. ಒಂದೊಂದು ಘಟಕವು ೩ ಅಭಿವೃದ್ಧಿ ಕ್ಷೇತ್ರಗಳಲ್ಲಿ ನೂರು ಹಳ್ಳಿಗಳ ಗುಂಪಿನಲ್ಲಿ ವಿಭಾಗಿತವಾಗಿದೆ; ಈ ಅಭಿವೃದ್ಧಿ ಕ್ಷೇತ್ರ ಒಂದೊಂದರಲ್ಲಿ ೫ ಹಳ್ಳಿಗಳ ಒಂದೊಂದು ಗುಂಪು ಮಾಡಲ್ಪಟ್ಟು ಅದು ಗ್ರಾಮಸೇವಕನ ನಿಯಂತ್ರಣದಲ್ಲಿ ಇರುವುದು.

ಈ ಸಮಾಜ ವಿಕಾಸ ಯೋಜನೆಯಲ್ಲಿಯ ಮುಖ್ಯ ಚಟುವಟಿಕೆಗಳು ಒಕ್ಕಲುತನದ ಕಾರ್ಯ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಾದ, ಸಂಪರ್ಕ, ಶಿಕ್ಷಣ, ಆರೋಗ್ಯ, ಪೂರಕ ನೌಕರಿ, ವಸತಿ, ಸಮಾಜ

ಕಲ್ಯಾಣ. ಒಕ್ಕಲುತನ ಕಾರ್ಯದಲ್ಲಿ ಬೀಳು ಭೂಮಿಯನ್ನು ಸಾಗುವಳಿಗಾಗಿ ಮರಳಿ ಪಡೆವುದು, ಕಿರಿ ನೀರಾವರಿಗಳಿಂದ ಒಕ್ಕಲುತನಕ್ಕೆ ನೀರಿನ ಅನುಕೂಲತೆ ಒದವಿಸುವುದು,— ಈ ಘಟಕದಲ್ಲಿಯ ಅರ್ಧದಷ್ಟು ಭೂಮಿಯಾದರೂ ನೀರಾವರಿ ಪೋಷಿತವಾಗಬೇಕೆಂದು ಅಪೇಕ್ಷೆಯಿದೆ. ಸಾಗುವಳಿಯಲ್ಲಿ ಸುಧಾರಿಸಿದ ತಂತ್ರವನ್ನು ಬಳಸುವುದು, ಸುಧಾರಿಸಿದ ಬೀಜ, ಗೊಬ್ಬರ, ರಾಸಾಯನಿಕ ಗೊಬ್ಬರಗಳನ್ನು ಉಪಯೋಗಿಸುವುದು, ಅಲ್ಲಲ್ಲಿ ಜಾತಿಯ ಹೋರಿಗಳನ್ನು ಸಾಕಿ ದನಗಳ ತಳಿಯನ್ನು ಸುಧಾರಿಸುವುದು, ಮುಂತಾದುವು ಸಮಾವೇಶವಾಗುವುವು. ಐದು ಹಳ್ಳಿಗೊಬ್ಬನಂತೆ ಇರುವ ಗ್ರಾಮಸೇವಕನು ಮೇಲ್ಕಾಣಿಸಿದ ಕಾರ್ಯಗಳ ಮೇಲ್ವಿಚಾರಣೆ ಮಾಡಬೇಕು, ಮತ್ತು ಗ್ರಾಮದ ಚಟುವಟಿಕೆಗಳು ಸಹಕಾರೀ ಪದ್ಧತಿಯಮೇಲೆ ನಡೆಯುವಂತೆ ಉತ್ತೇಜನ ಕೊಡಬೇಕು. ಈ ಐದು ಹಳ್ಳಿಗಳ ಒಂದೊಂದು ಗುಂಪಿನಲ್ಲಿ ಕನಿಷ್ಠ ವರ್ಷಕ್ಕೆ ಒಂದಾದರೂ ವಿವಿಧೋದ್ದೇಶದ ಸಹಕಾರೀ ಸಂಘವು ಕಾರ್ಯ ಮಾಡುವಂತೆ ಮಾಡಬೇಕು.

ಪ್ರತಿಯೊಂದು ಹಳ್ಳಿಯಿಂದ ರಾಜಮಾರ್ಗಕ್ಕೆ ಸಂಪರ್ಕವುಂಟಾಗುವಂತೆ ಮಾಡುವುದು. ಇವು ಹಳ್ಳಿಗರ ಸ್ವಯಂಸೇವಕ ಬುದ್ಧಿಯ ಕಾರ್ಯದಿಂದ ನೆರವೇರಬೇಕು. ಪ್ರಾಥಮಿಕ ಶಾಲೆಗಳು ತೆರೆಯಲ್ಪಡುವುವು. ಅಲ್ಲಲ್ಲಿ ಔದ್ಯೋಗಿಕ ಮತ್ತು ತಾಂತ್ರಿಕ ಶಿಕ್ಷಣದ ವ್ಯವಸ್ಥೆಯೂ ಆಗುವುದು. ಒಂದೊಂದು ಅಭಿವೃದ್ಧಿ ಕ್ಷೇತ್ರಕ್ಕೆ ಒಂದು ಆಸ್ಪತ್ರೆಯ ವ್ಯವಸ್ಥೆಯಾಗುವುದು; ಒಂದು ಸಂಚಾರಿ ಆಸ್ಪತ್ರೆಯೂ ಜೋಡಿಸಲ್ಪಡುವುದು. ಕುಡಿಯುವ ನೀರಿನ ಪೂರೈಕೆಯನ್ನು ವ್ಯವಸ್ಥಿತಗೊಳಿಸಿ, ಕೊಳೆನೀರು ಸರಿಯಾಗಿ ಹರಿದು ಹೋಗುವಂತೆ ಮಾಡಿ, ಮಲವನ್ನು ವ್ಯವಸ್ಥಿತವಾಗಿ ದೂರಾಗಿಸಿ, ಬೇನೆ ಬೇಸರಿಕೆಗಳು ಉಂಟಾಗದಂತೆ ಜಾಗ್ರತೆ ವಹಿಸಲಾಗುವುದು.

ಹೊಸ ವಸತಿಗಳ ರಚನೆಯ ಮಾದರಿಯಲ್ಲಿ ಹಳ್ಳಿಗಳನ್ನು ತಯಾರಿಸುವುದು, ಮಕ್ಕಳಿಗಾಗಿ ಆಟದ ಬಯಲನ್ನು ಮೀಸಲಾಗಿಡುವುದು, ಗ್ರಾಮ ಕೈಗಾರಿಕೆಗಳನ್ನು ಕಿರಿ ಉದ್ಯಮಗಳನ್ನು ಬೆಳೆಸಿ ನಿರುದ್ಯೋಗಿಯಾದವರನ್ನು ಮತ್ತು ಅರ್ಧೋದ್ಯೋಗಿಯಾದವರನ್ನು ಲಾಭದಾಯಕ ಕಾರ್ಯದಲ್ಲಿ

ತೊಡಗಿಸುವುದು, ಇವು ಆ ಕಾರ್ಯಯೋಜನೆಯಲ್ಲಿ ಸಮಾವೇಶ ವಾಗಿರುವುವು.

ಪ್ರತಿಯೊಂದು ಸಮಾಜವಿಕಾಸಯೋಜನೆಯ ಕೇಂದ್ರಕ್ಕೆ ಒಬ್ಬ ಯೋಜನೆಯ ಕಾರ್ಯಕಾರೀ ಅಧಿಕಾರಿ ಇದ್ದು ಅವನ ಕೈಕೆಳಗೆ ಸುಮಾರು ೧೨೫ ರಷ್ಟು ಸುಪರವಾಯಿಜರರು ಮತ್ತು ಗ್ರಾಮಸೇವಕರು ಇರುವರು. ಈ ಕಾರ್ಯಕರ್ತರೂ ಮತ್ತು ಉಳಿದ ನೌಕರವರ್ಗದವರೂ ೩೦ ತರಬೇತಿ ಕೇಂದ್ರಗಳಲ್ಲಿ ಶಿಕ್ಷಣ ಪಡೆಯುವರು. ಈ ೩೦ ತರಬೇತಿ ಕೇಂದ್ರಗಳು ದೇಶವ್ಯಾಪಿಯಾಗಿದ್ದು ಅವು ಅಮೇರಿಕೆಯ ಫೋರ್ಡ ಫೌಂಡೇಶನದ ನೆರವಿನಿಂದ ಸ್ಥಾಪಿತವಾಗಿವೆ. ಒಂದೊಂದರಲ್ಲಿ ಸುಮಾರು ೭೦ ಜನರು ಶಿಕ್ಷಣ ಪಡೆಯಬಹುದಾಗಿದೆ. ಇದರ ಜತೆಗೆ ಒಕ್ಕಲುತನ ವಿಸ್ತರಣ ಕಾರ್ಯ ಕರ್ತರು ಒಕ್ಕಲಿಗರನ್ನು, ಪಂಚರನ್ನು, ಗ್ರಾಮಮುಂದಾಳುಗಳನ್ನು ತರಬೇತು ಗೊಳಿಸುವರು. ಅಧಿಕಾರೇತರ ಸಲಹಾಸಮಿತಿಗಳು ಸ್ಥಾಪಿಸಲ್ಪಟ್ಟಿದ್ದು ಅವು ಜನತೆಯ ಪ್ರತಿನಿಧಿಯಾಗಿ ಕಾರ್ಯಮಾಡುವುವು. ಭಾರತ ಸೇವಕ ಸಮಾಜದ ಮುಖಾಂತರವೂ ಹಳ್ಳಿಗರ ಸಹಕಾರವನ್ನು ಪಡೆಯಲಾಗುವುದು.

ಈ ಕ್ಷೇತ್ರಗಳಲ್ಲಿಯ ದೊಡ್ಡ ರಚನಾಕಾರ್ಯವಿದ್ದರೆ ಅದನ್ನು ಸರಕಾರವೇ ನಿರ್ವಹಿಸುವುದು. ಆದರೆ ಸ್ಥಳೀಯ ಜನರು ಹಣದ ರೂಪದಿಂದಾಗಲಿ, ಸ್ವಯಂಸೇವಕಬುದ್ಧಿಯ ಸೇವೆಯಿಂದಾಗಲಿ ನೆರವಾಗಲು ಮುಂದೆ ಬಂದರೇನೆ ಸರಕಾರವು ಆ ಕರಾರಿನ ಮೇಲೆ ಆ ರಚನಾಕಾರ್ಯಗಳನ್ನು ಕೈಕೊಳ್ಳುವುದು.

ಸಾಧಾರಣ ಪ್ರಾಥಮಿಕ ಮಾದರಿಯ ಗ್ರಾಮ-ಸಮಾಜವಿಕಾಸ ಯೋಜನೆಯ ವೆಚ್ಚವು ಮೂರು ವರುಷಗಳಲ್ಲಿ ೭೫ ಲಕ್ಷ ಆಗಬಹುದೆಂದು ಅಂದಾಜು ಮಾಡಲಾಗಿದೆ. ಮಿಶ್ರ ಮಾದರಿಯ ಅಂದರೆ ಒಂದು ಪಟ್ಟಣದ ಘಟಕವುಳ್ಳಂತಹ ಯೋಜನೆಗೆ ೧೧೧ ಲಕ್ಷ ರೂಪಾಯಿ ವೆಚ್ಚವಾಗುವುದೆಂದು ಗಣಿಸಲಾಗಿದೆ. ಈ ವೆಚ್ಚಗಳಲ್ಲಿ ಕೇಂದ್ರ ಸರಕಾರವು ೭೫ ಶತಾಂಶ ಅನಾವರ್ತ ವೆಚ್ಚವನ್ನು, ೫೦ ಶತಾಂಶ ವಾರ್ಷಿಕ ಆವರ್ತ ವೆಚ್ಚವನ್ನು ವಹಿಸುತ್ತದೆ. ಉಳಿದ ವೆಚ್ಚದ ಭಾಗವು ಆಯಾ ರಾಜ್ಯಗಳ ಸರಕಾರಗಳು

ವಹಿಸುತ್ತವೆ. ಸಮಾಜವಿಕಾಸ ಯೋಜನೆಗಳು ಭಾರತ-ಅಮೇರಿಕೆಯ ತಾಂತ್ರಿಕ ಸಹಕಾರೀ ಕಾರ್ಯಕ್ರಮದಿಂದ ಪ್ರೋತ್ಸಾಹಿತವಾಗುವುವು. ಇದರ ಅನ್ವಯವಾಗಿ ಕೊಳವೆಭಾವಿಗಳು, ರಾಸಾಯನಿಕ ಗೊಬ್ಬರ, ಕೃಷಿಕ ಉಪಕರಣಗಳಿಗಾಗಿ ಕಬ್ಬಿಣ, ಉಕ್ಕು, ಗ್ರಾಮಸೇವಕರು ಮತ್ತು ಸುಪರ ವಾಯಿಜರರು ಇವರುಗಳ ತರಬೇತಿಗಳ ಸಹಾಯ ದೊರೆವುದು.

'ಹೆಚ್ಚು ಆಹಾರ ಬೆಳೆಯಿರಿ' ಆಂದೋಲನದ ವಿಚಾರಣಾ ಸಮಿತಿಯು ರಾಷ್ಟ್ರೀಯ ವಿಸ್ತರಣ ಸೇವೆಯನ್ನು ಸಂಘಟಿಸಲು ಶಿಫಾರಸು ಮಾಡಿತು. ಹತ್ತು ವರುಷಗಳ ಕಾಲಾವಧಿಯಲ್ಲಿ ಈ ಸೇವೆಯ ಸಹಾಯವು ದೇಶ ವ್ಯಾಪ್ತ್ಯಂತ ದೊರೆವಂತಾಗುವುದು. ಯೋಜನೆಯ ಕಾಲಾವಧಿಯಲ್ಲಿ ೧೨೦೦೦೦ ಹಳ್ಳಿಗಳಿಗೆ ಈ ಸೇವೆಯ ಲಾಭ ಮುಟ್ಟುವುದು. ಈ ಸೇವೆಯಿಂದ ಗ್ರಾಮಜೀವನಕ್ಕೆ ಹೊಸ ಚೈತನ್ಯ ಬರುವುದಲ್ಲದೆ ಆಹಾರ ಉತ್ಪಾದನೆಯಲ್ಲಿ ಹೆಚ್ಚಳವನ್ನು ಸಾಧಿಸಲು ನೆರವಾಗುವುದು. ಈ ರೀತಿಯ ಸೇವೆ ಸಲ್ಲಿಸುವಾಗ ಉದ್ಭೂತವಾದ ಸಮಸ್ಯೆಗಳನ್ನು ಸಂಶೋಧನಾತ್ಮಕವಾಗಿ ಅಭ್ಯಸಿಸಿ ಪರಿಹಾರ ಉಪಾಯಗಳನ್ನು ಸೂಚಿಸುವ ವ್ಯವಸ್ಥೆಯನ್ನು ಮಾಡಲಾಗಿದೆ.

## ಒಕ್ಕಲುತನಕ್ಕೆ ಧನಸಹಾಯ

ಕೃಷಿ ಉತ್ಪಾದನವು ಭಾರತದಲ್ಲಿ ಕೋಟ್ಯವಧಿ ರೈತರ ಮೇಲೆ ಅವ ಲಂಬಿಸಿದೆ. ಸಾಕಷ್ಟು ಧನಸಹಾಯವಿಲ್ಲದ್ದಕ್ಕಾಗಿ ಬಹುಸಂಖ್ಯಾಕ ರೈತರು ಸುಧಾರಿಸಿದ ಬೀಜ, ಗೊಬ್ಬರ, ಹೊಸ ತಂತ್ರ ಇವುಗಳ ಲಾಭ ಪಡೆಯಲು ಅಸಮರ್ಥರಾಗಿದ್ದಾರೆ. ಇಂತಹರಿಗೆ ಸಕಾಲಕ್ಕೆ ಸಾಲ ಒದಗಿಸಿಕೊಡುವುದು ಅತ್ಯಗತ್ಯವಾಗಿದೆ. ಒಕ್ಕಲಿಗನಿಗೆ ಅಲ್ಪಾವಧಿಯ, ಮಧ್ಯಮಾವಧಿಯ ಮತ್ತು ದೀರ್ಘಾವಧಿಯ ಸಾಲ ಬೇಕಾಗುತ್ತದೆ. ಅಲ್ಪಾವಧಿಯ ಸಾಲವು ಬೀಜ, ಗೊಬ್ಬರ ಮತ್ತು ಕೂಲಿಯ ವೆಚ್ಚಕ್ಕೆಂದು ಬೇಕಾಗುತ್ತದೆ. ಮಧ್ಯಮಾ ವಧಿಯ ಸಾಲವು ಭಾವಿ ಅಗಿಸಲು, ದನಗಳನ್ನು ಕೊಳ್ಳಲು, ಪಂಪಿಂಗ ವ್ಯವಸ್ಥೆಗೆ ಉಪಕರಣ ಕೊಳ್ಳಲು ಮುಂತಾದವುಗಳಿಗಾಗಿ ಬೇಕಾಗುತ್ತದೆ. ಅಲ್ಪಾವಧಿಯ ಸಾಲವನ್ನು ವರುಷಾಂತ್ಯದಲ್ಲಿ ರಾಶಿಮಾಡುವ ಕಾಲಕ್ಕೆ

ಮರಳಿ ಪಡೆಯುಬಹುದು. ಆದರೆ ಮಧ್ಯಮಾವಧಿಯ ಸಾಲವನ್ನು ತೀರಿಸಲು ನಾಲ್ಕೈದು ವರುಷಗಳಾದರೂ ಬೇಕು. ಇವುಗಳನ್ನು ಕಂತಿನಿಂದ ಪಡೆಯು ಬಹುದು. ಹತ್ತು ಇಪ್ಪತ್ತು ವರುಷಗಳ ಕಾಲಾವಧಿಯಲ್ಲಿ ಹಣ ಮರಳಿಸುವ ಅನುಕೂಲತೆಯುಳ್ಳ ಸಾಲವನ್ನು ದೀರ್ಘಾವಧಿಯ ಸಾಲವೆಂದು ಹೇಳ ಬಹುದು. ಇದರಿಂದ ಹಳೆಯ ಸಾಲ ತೀರಿಸಲು, ದೊಡ್ಡ ಯಂತ್ರಗಳನ್ನು ಕೊಳ್ಳಲು, ಭೂಮಿಯನ್ನು ಕೊಂಡುಕೊಳ್ಳಲು ಉಪಯೋಗವಾಗುತ್ತದೆ.

ಒಕ್ಕಲಿಗರಿಗೆ ಬೇಕಾದ ಧನಸಹಾಯವು ಈ ಕೆಳಗಿನಂತೆ ಪಡೆಯು ಲಾಗುತ್ತಿದೆ.

(೧) ಖಾಸಗಿ ಏಜನ್ಸಿಗಳು : (ಅ) ಸಾಹುಕಾರರು ಮತ್ತು ಭೂ ಒಡೆಯರು,
(ಬ) ವ್ಯಾಪಾರಿ ಬ್ಯಾಂಕುಗಳು.

(೨) ಸಾರ್ವಜನಿಕ ಏಜೆನ್ಸಿಗಳು : (ಅ) ಸರಕಾರ
(ಬ) ಸಹಕಾರೀ ಸಂಘಗಳು.

ಇತ್ತೀಚಿನ ಕಾಲದವರೆಗೆ ಸಾಹುಕಾರರು ಮತ್ತು ಭೂ ಒಡೆಯರು ಇವರೇ ಗ್ರಾಮಗಳಲ್ಲಿ ಸಾಲ ಕೊಡುವವರು ಆಗಿದ್ದರು. ಋಣಪರಿಹಾರ ಕಾನೂನಿನಿಂದ ಈ ಜನರ ಚಟುವಟಿಕೆಗಳು ಮರ್ಯಾದಿತಗೊಳಿಸಲ್ಪಟ್ಟಿವೆ. ಆದುದರಿಂದ ಸಾಂಘಿಕ ರೀತಿಯಲ್ಲಿ ಸಾಲ ದೊರೆಯುವ ಉಪಾಯುಗಳು ಬೆಳೆಯಬೇಕಾಗಿದೆ. ಸರಕಾರವು ಇದುವರೆಗೆ ಸಂತ್ರಸ್ತರಿಗಾಗಿ ಮಾತ್ರ ಪರಿಹಾರ ಒದವಿಸುತ್ತಿತ್ತು. ಈಗ ಒಕ್ಕಲುತನ ಅಭಿವೃದ್ಧಿಗಾಗಿ ಸಾಮಾನ್ಯ ರಿಗೂ ಸಾಲ ಕೊಡುವುದಕ್ಕೆ ಮುಂದಾಗಿದೆ. ೧೯೩೮–೩೯ರಲ್ಲಿ ಸರಕಾರವು ಒಂದು ಕೋಟಿ ರೂಪಾಯಿ ಸಾಲ ಕೊಟ್ಟಿದ್ದರೆ ೧೯೪೯–೫೦ರಲ್ಲಿ ತಗಾವಿ ಸಾಲವೆಂದು ೧.೫ ಕೋಟಿ ರೂಪಾಯಿ ಕೊಟ್ಟಿದೆ.

ಸಹಕಾರಿ ಸಂಘಗಳು ಹಳ್ಳಿಗರಿಗೆ ಸಾಲ ಕೊಡುತ್ತವೆ. ೧೪೨೦೦೦ ಒಕ್ಕಲುತನ ಸಹಕಾರಿ ಸಂಘಗಳಿದ್ದು ೧೯೪೯–೫೦ರಲ್ಲಿ ೨೮ ಕೋಟಿ ರೂಪಾಯಿ ಸಾಲ ಕೊಟ್ಟವೆ. ಇದರಲ್ಲಿ ಸುಮಾರು ೨/೩ ದಷ್ಟು ಮುಂಬಯಿ ಮದ್ರಾಸ ಪ್ರಾಂತಗಳಲ್ಲಿ, ಸುಮಾರು ೧/೫ ಉತ್ತರಪ್ರದೇಶ, ಮಧ್ಯಪ್ರದೇಶ ಮತ್ತು

ಪಂಜಾಬದಲ್ಲಿ ವಿನಿಯೋಗವಾಗಿದೆ. ಉಳಿದ ಕಡೆ ಈ ಆಂದೋಲನ ಇನ್ನೂ ಬೆಳೆಯಬೇಕಾಗಿದೆ.

೧೯೦೪ರಲ್ಲಿ ಸಹಕಾರಿ ಸಂಘಗಳ ಕಾನೂನು ಪಾಸಾದನಂತರ ಈ ಸಾಮಾಜಿಕ ಸುಧಾರಣೆಯು ವಿಶಿಷ್ಟ ಮಹತ್ವದ ಸ್ಥಾನ ಪಡೆದಿದೆ. ವ್ಯಕ್ತಿ ವಿಷ್ಟ ಸಮಾಜದಲ್ಲಿ ಸಹಕಾರವು ಒಳ್ಳೇ ಬಂಧುರವಾದ ರಕ್ಷಣೆಯನ್ನು ಕೊಟ್ಟಿತು. ಒಕ್ಕಲುತನ ಸಹಕಾರಿ ಸಂಘಗಳಲ್ಲದೆ, ಮಾರ್ಕೆಟಿಂಗ ಸಂಘಗಳು, ಕನ್‌ಸ್ಯೂಮರ್ಸ ಸೊಸಾಯಿಟಿಗಳು, ಹೌಸಿಂಗ ಸೊಸಾಯಿಟಿಗಳು ಮುಂತಾದ ವಿವಿಧ ರೀತಿಯ ಸಹಕಾರಿ ಸಂಘಗಳು ಉದಯವಾಗಿವೆ. ಈ ಸಂಘಗಳಲ್ಲಿ ೮೦ ಶತಾಂಶ ಒಕ್ಕಲುತನ ಸಂಘಗಳೇ ಇವೆ. ಈ ಕ್ಷೇತ್ರಗಳಲ್ಲಿಯ ಅನುಭವದ ಲಾಭದಿಂದ, ಉದ್ಯೋಗ, ವ್ಯಾಪಾರ, ಸಾರಿಗೆ, ವಿತರಣ ಮುಂತಾದ ಕ್ಷೇತ್ರಗಳಲ್ಲಿಯೂ ಸಹಕಾರಿ ಪದ್ಧತಿಯನ್ನು ಅನುಕರಿಸಲಾಗಿದೆ. ಮುಖ್ಯವಾಗಿ ಗ್ರಾಮಾಂತರಗಳಲ್ಲಿ ಕಾರ್ಯ ಮಾಡುತ್ತಿರುವ ಸಹಕಾರಿ ಸಂಘಗಳಲ್ಲಿ ವಿವಿಧೋದ್ದೇಶ ಸಹಕಾರಿ ಸಂಘಗಳು ಮಹತ್ವದ ಸ್ಥಾನವನ್ನು ಪಡೆದಿವೆ, ಮತ್ತು ಅನೇಕ ಸಹಕಾರಿ ಸಂಘಗಳು ವಿವಿಧೋದ್ದೇಶ ಸಂಘಗಳಾಗಿ ಪರಿವರ್ತಿತವಾಗುತ್ತಲಿವೆ.

ಮುಂಬಯಿ ಮತ್ತು ಮದ್ರಾಸ ರಾಜ್ಯಗಳಲ್ಲಿಯ ಅನುಭವವು ಸಾಂಘಿಕ ಸಾಲ ಕೊಡುವ ವ್ಯವಸ್ಥೆಯಲ್ಲಿ ಸಹಕಾರಿ ಸಂಘಗಳು ಪರಿಣಾಮಕಾರಿಯಾಗಿವೆಯೆಂದು ಸಿದ್ಧ ಮಾಡಿದೆ. ಜನರಿಂದಲೆ ಸಂಘಟಿಸಲ್ಪಟ್ಟ ಸಹಕಾರಿ ಸಂಘವು ಅವರ ಆರ್ಥಿಕ ಮತ್ತು ಸಾಮಾಜಿಕ ಕಲ್ಯಾಣದ ಕಡೆಗೆ ಲಕ್ಷ್ಯ ಪೂರೈಸುತ್ತಿರುವುದು ಸ್ವಾಭಾವಿಕ. ಆದುದರಿಂದ ಕೊಟ್ಟ ಸಾಲಕ್ಕಾಗಿ ಸಾಕಷ್ಟು ಭದ್ರತೆ ಮಾಡಿಕೊಳ್ಳುವುದಕ್ಕೆ ಮತ್ತು ಹಣದ ಸದ್ವಿನಿಯೋಗವಾಗುವುದರ ಕಡೆಗೆ ಗಮನವೀಯುವುದು ವಾಡಿಕೆಯಾಗಿದೆ. ಸ್ಥಾನಿಕ ಉಳಿಕೆಗಳನ್ನು ಸಂಗ್ರಹಿಸಲು ಇವು ಒಳ್ಳೆಯ ಸಾಧನಗಳಾಗಿವೆ.

ಸಹಕಾರಿ ಸಂಘಗಳು ತಮ್ಮ ಕಾರ್ಯವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳಬೇಕಾದರೆ, ಅವುಗಳ ಸಂಖ್ಯೆ ಮತ್ತು ಸದಸ್ಯತ್ವವು ಹೆಚ್ಚಾಗಬೇಕು, ಮತ್ತು ಕಾರ್ಯಪದ್ಧತಿಯು ಸುಧಾರಿಸಬೇಕು. ಸಹಕಾರಿ ಸಂಘಗಳ ಯಶಸ್ಸು ಅಲ್ಲಿ

ಕೆಲಸ ಮಾಡುವ ಕಾರ್ಯಕರ್ತರ ಮೇಲೆ ಅವಲಂಬಿಸಿರುತ್ತದೆ. ಮೊನ್ನೆ ಮೊನ್ನೆ ರಿಜರ್ವ ಬ್ಯಾಂಕದವರು ಪುಣೆಯಲ್ಲಿ ತರಬೇತಿ ವರ್ಗವನ್ನು ನಡಸಿದರು. ಇಂತಹ ಸೌಕರ್ಯವನ್ನು ದೇಶದ ಉಳಿದೆಡೆಯಲ್ಲಿಯೂ ಒದವಿಸಬೇಕು. ಇಂತಹ ತರಬೇತಿವರ್ಗಗಳಿಗಾಗಿಯೊಂದು ಯೋಜನೆಯು ೧೦ ಲಕ್ಷ ರೂ. ಗಳನ್ನು ತೆಗೆದಿಟ್ಟಿದೆ.

ಅಲ್ಪಾವಧಿ ಸಾಲದಿಂದ ಒಕ್ಕಲಿಗನು ತಾತ್ಪೂರ್ತಿಕ ಬೇಡಿಕೆಗಳನ್ನು ಪೂರೈಸಿಕೊಳ್ಳುವನು. ಒಕ್ಕಲುತನದ ಮಟ್ಟದಲ್ಲಿ ಹೆಚ್ಚಿನ ಸುಧಾರಣೆ ಯಾಗಬೇಕಾದರೆ ಮಧ್ಯಮಾವಧಿಯ ಮತ್ತು ದೀರ್ಘಾವಧಿಯ ಸಾಲಗಳ ವ್ಯವಸ್ಥೆಯಾಗಬೇಕು. ಸಹಕಾರಿ ಸಂಘಗಳಿಗೆ ರಿಜರ್ವ ಬ್ಯಾಂಕಿನಿಂದ ಈ ಮಧ್ಯಮಾವಧಿ ಸಾಲಗಳನ್ನು ಕೊಡುವುದಕ್ಕೆಂದು ಸಹಾಯ ದೊರೆಯುತ್ತಿಲ್ಲ. ಆದರೂ ರಿಜರ್ವ ಬ್ಯಾಂಕು ೫ ಕೋಟಿ ರೂಪಾಯಿಗಳನ್ನು ಈ ಸಂಬಂಧದಲ್ಲಿ ಕೊಡಲೊಪ್ಪಿದೆ ಮತ್ತು ಅದಕ್ಕೆ ತಕ್ಕ ರೀತಿಯಲ್ಲಿ ರಿಜರ್ವ ಬ್ಯಾಂಕ ಆ್ಯಕ್ಟ ತಿದ್ದುಪಡಿ ಮಾಡಲ್ಪಟ್ಟಿದೆ. ಒಕ್ಕಲುತನ ಉತ್ಪಾದನೆಯಲ್ಲಿ ಹೆಚ್ಚು ಹೆಚ್ಚು ಹಣ ತೊಡಗಬೇಕಾಗಿರುವುದರಿಂದ ರಿಜರ್ವ ಬ್ಯಾಂಕು ತೆಗೆದಿಟ್ಟ ೫ ಕೋಟಿ ರೂಪಾಯಿ ಸಾಲದು. ಆದಕ್ಕೆ ಯೋಜನೆಯು ಪ್ರತ್ಯೇಕವಾಗಿ ೫ ಕೋಟಿ ರೂಪಾಯಿಗಳ ವ್ಯವಸ್ಥೆ ಮಾಡಿದೆ. ಇದನ್ನು ಮುಂದಿನ ಮೂರು ವರ್ಷ ಗಳಲ್ಲಿ ಕೊಡಲಾಗುವುದು. ರಿಜರ್ವ ಬ್ಯಾಂಕು ಮತ್ತು ಸಹಕಾರಿ ಸಂಘ ಗಳು ಕೂಡಿ ಯೋಜನೆಯ ಕಾಲಾವಧಿಯು ಮುಗಿಯುವ ಹೊತ್ತಿಗೆ ಮಧ್ಯ-ಮಾವಧಿಯ ಸಾಲಕ್ಕಾಗಿ ೨೫ ಕೋಟಿ ರೂಪಾಯಿ ಕೊಡುವ ಸ್ಥಿತಿಯಲ್ಲಿ ಬರಬಹುದೆಂದು ಎಣಿಸಲಾಗಿದೆ.

ದೀರ್ಘಾವಧಿ ಸಾಲವನ್ನು ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ಕೊಡು ತ್ತಿವೆ. ೧೯೪೯-೫೦ರಲ್ಲಿ ಆವು ಒಂದು ಕೋಟಿ ರೂಪಾಯಿ ಸಾಲ ಕೊಟ್ಟಿವೆ. ಈ ಮಾದರಿಯ ಬ್ಯಾಂಕುಗಳು ಮದ್ರಾಸ, ಮುಂಬಯಿ, ಮೈಸೂರು, ಮಧ್ಯ ಪ್ರದೇಶಗಳಲ್ಲಿ ಮಾತ್ರ ಇವೆ. ಉಳಿದ ರಾಜ್ಯಗಳಲ್ಲಿ ಸ್ಥಾಪಿಸುವ ಯೋಜನೆ ನಡೆದಿದೆ. ಇದುವರೆಗೆ ಈ ಬ್ಯಾಂಕುಗಳು ಸಾಲವನ್ನು ಹಳೆಯ ಸಾಲ ತೀರಿಸಲಿಕ್ಕೆಂದು ಕೊಟ್ಟಿವೆ. ಇನ್ನು ಮುಂದೆ ಉತ್ಪಾದನೆ ಹೆಚ್ಚಿಸಲಿಕ್ಕೆಂದು

ಸಾಲ ಕೊಡಬೇಕು. ಅದರಿಂದ ಉಳಿತಾಯ ಹೆಚ್ಚಾಗಿ ಹಳೆಯ ಸಾಲ ತೀರಿಸಲು ಅನುಕೂಲವಾಗುವುದು. ಆದುದರಿಂದ ಉತ್ಪಾದನೆ ಹೆಚ್ಚಿಸುವ ಕಾರಣಕ್ಕಾಗಿ ಬೇಡಿದ ಸಾಲಗಳಿಗೆ ಪ್ರಾಥಮಿಕತೆ ಕೊಡಬೇಕು.

## ಒಕ್ಕಲುತನ ಹುಟ್ಟುವಳಿಯನ್ನು ಮಾರುವ ವ್ಯವಸ್ಥೆ

ಒಕ್ಕಲಿಗನು ತಾನು ಬೆಳೆಯುವ ಬೆಳೆಗೆ ಬೆಲೆ ಎಷ್ಟು ಬರುವುದು ಇದರ ಮೇಲಿಂದ ಅವನು ಹುಟ್ಟುವಳಿಗಾಗಿ ಮಾಡುವ ಪ್ರಯತ್ನದ ಉತ್ಕಟತೆಯು ಅವಲಂಬಿಸಿದೆ. ಯೋಗ್ಯ ಬೆಲೆ ಪಡೆಯುವುದು ಅವನಿಗೆ ಸಾಮಾನ್ಯವಾಗಿ ಕಠಿಣವಾಗುವುದು. ಹತ್ತಿ ಮತ್ತು ಶೇಂಗಾದಂತಹ ಬೆಳೆಗೆ ವಿಶಾಲವಾದ ಸಂಗ್ರಹಸ್ಥಾನವು ಬೇಕಾಗುವುದು. ಇದು ಸಾಮಾನ್ಯ ಒಕ್ಕಲಿಗನಿಗೆ ಅನುಕೂಲವಿರುವುದಿಲ್ಲ. ಹಣ್ಣು, ಪಲ್ಲೆಕಾಯಿ, ಕಬ್ಬುಗಳಂತಹವು ಬೇಗನೆ ಕೊಳೆತುಹೋಗುವುವು. ಕೂಡಿಟ್ಟುಕೊಳ್ಳುವ ಅನುಕೂಲತೆ ಇರದ ಮೂಲಕ ನಾ ಮುಂದೆ ನೀ ಮುಂದೆಯೆಂದು ಬೇಗನೆ ಅವುಗಳನ್ನು ಮಾರಬೇಕಾಗುವುದು. ಒಕ್ಕಲುತನ ಹುಟ್ಟುವಳಿಯನ್ನು ವ್ಯವಸ್ಥಿತವಾಗಿ ಮಾರಬೇಕಾದರೆ ಅನೇಕ ಕ್ರಿಯೆಗಳನ್ನು ಮಾಡಬೇಕಾಗುವುದು. ಉತ್ಪಾದನೆಯನ್ನು ಒತ್ತಟ್ಟಿಗೆ ಸೇರಿಸಬೇಕು, ಕಾದಿಡಬೇಕು, ವರ್ಗೀಕರಿಸಬೇಕು, ಪ್ರಮಾಣೀಕರಿಸಬೇಕು, ಸ್ಥಾನಾಂತರಿಸಬೇಕು ಮತ್ತು ಮಾರಾಟದ ವ್ಯವಹಾರ ಮಾಡಬೇಕು. ಕೆಲವೊಂದು ಕ್ರಿಯೆಗಳನ್ನು ಸಾಮಾನ್ಯ ಒಕ್ಕಲಿಗನೂ ಮಾಡಬಹುದು; ಆದರೆ ಸಂಗ್ರಹ ಮತ್ತು ಮಾರಾಟ ಇವು ವಿಶಿಷ್ಟಜ್ಞಾನ ಮತ್ತು ತಕ್ಕ ಅನುಕೂಲತೆಗಳನ್ನು ಅವಲಂಬಿಸಿವೆ. ಆದ್ದರಿಂದ ಈ ದೃಷ್ಟಿಯಿಂದ ಸೇವೆ ಸಲ್ಲಿಸುವವರು ಯೋಗ್ಯವೇತನ ಪಡೆಯಲು ಅರ್ಹರಾಗುತ್ತಾರೆ.

ಆದರೆ ಹಳ್ಳಿಯ ಸಾಹುಕಾರನು ಸಾಲವನ್ನು ಕೊಡುವಾಗ ಒಕ್ಕಲಿಗನು ಹುಟ್ಟುವಳಿಯನ್ನು ತನ್ನ ಮುಖಾಂತರವೇ ಮಾರಬೇಕೆಂದು ಕರಾರು ಹಾಕುತ್ತಾನೆ. ಸಾಹುಕಾರನು ವಿಶಿಷ್ಟ ಸ್ಥಾನಮಾನದ ಮೂಲಕ ದುರ್ಲಾಭ ಪಡೆಯುತ್ತಾನೆ. ದಲಾಲನಾಗಿದ್ದವನೂ ಸುಲಿಗೆಕೊಳ್ಳುವುದರಲ್ಲಿ ಕಡಿಮೆಯಾಗಿರುವುದಿಲ್ಲ. ಈ ಬಿಕ್ಕಟ್ಟನ್ನು ತಪ್ಪಿಸಿ ಒಕ್ಕಲಿಗನಿಗೆ ಅವನ ಹುಟ್ಟುವಳಿಗೆ ಯೋಗ್ಯಬೆಲೆ ಬರುವಂತೆ ಮಾಡಲು ಮುಂಬಯಿ, ಮದ್ರಾಸ,

ಹೈದರಾಬಾದ ಮತ್ತು ಮಧ್ಯಪ್ರದೇಶ ರಾಜ್ಯಗಳಲ್ಲಿ ಕ್ರಮಬದ್ಧ ಮಾರ್ಕೆಟುಗಳ ವ್ಯವಸ್ಥೆ ಮಾಡಲಾಗಿದೆ. ಮಾರಾಟವಲ್ಲಿಯು ಅನಧಿಕೃತ ಕಡಿತಗಳನ್ನು ಪ್ರತಿಬಂಧಿಸಲಾಗಿದೆಯಲ್ಲದೆ ದಲಾಲರು ಮತ್ತು ತೂಗುವವರು ಇವರ ಫೀ ನಿಶ್ಚಿತಗೊಳಿಸಲಾಗಿವೆ. ಈ ಸುಧಾರಣೆಗಳು ಒಕ್ಕಲಿಗರಿಗೆ ಲಾಭದಾಯಕವಾಗಿವೆ. ೧೯೫೫-೫೬ರ ಹೊತ್ತಿಗೆ ಈ ಮಾದರಿಯ ಉಪಾಯಗಳನ್ನು ಉಳಿದ ರಾಜ್ಯಗಳಲ್ಲಿಯೂ ಕೈಕೊಳ್ಳುವಂತೆ ಮಾಡಬೇಕು.

ಆದರೆ ಈ ಕ್ರಮಬದ್ಧ ಮಾರ್ಕೆಟುಗಳಿಂದ ಉಂಟಾಗುವ ಹಿತವು ಪರಿಮಿತವಾಗಿದೆ. ಮಾರಾಟದ ಪದ್ಧತಿಯನ್ನು ಮಾರ್ಪಾಟುಮಾಡಿದ ಹೊರತು, ದಲಾಲಿಗಳು ಮತ್ತು ಅವರ ವೆಚ್ಚವನ್ನು ಕಡಿಮೆ ಮಾಡುವುದು ಕಠಿನವಾಗುವುದು. ಆದುದರಿಂದ ಸಹಕಾರೀ ಪದ್ಧತಿಯ ಮೇಲೆ ಮಾರಾಟದ ಸಂಸ್ಥೆಗಳನ್ನು ಸ್ಥಾಪಿಸಬೇಕೆಂಬ ಪ್ರಯತ್ನಗಳು ನಡೆದಿವೆ. ಉತ್ತರ ಪ್ರದೇಶ ರಾಜ್ಯದಲ್ಲಿ ಕಳೆದ ಹತ್ತು ವರುಷಗಳಲ್ಲಿ ೧೬೦೦ ಕಬ್ಬಿನ ಸಹಕಾರೀ ಸಂಘಗಳು ರಚಿತವಾಗಿವೆ. ಅವು ಸುಮಾರು ೮೫ ರಿಂದ ೯೦ ಶತಾಂಶ ಹುಟ್ಟುವಳಿಯನ್ನು ಸಕ್ಕರೆ ಕಾರಖಾನೆದಾರರಿಗೆ ಮಾರುತ್ತವೆ. ವಾರ್ಷಿಕ ಮಾರಾಟದಿಂದ ಸುಮಾರು ೨೫ ಕೋಟಿ ರೂಪಾಯಿಗಳ ವ್ಯವಹಾರವಾಗುತ್ತದೆ. ಮಾರಾಟದ ವ್ಯವಸ್ಥೆ ಮಾಡುವುದರ ಜತೆಗೆ ಈ ಸಂಘಗಳು ಸಾಲದ ವ್ಯವಸ್ಥೆಯನ್ನು ಜೋಡಿಸಿಕೊಂಡಿವೆ. ಅವು ಬೀಜ, ಗೊಬ್ಬರ ಮುಂತಾದವುಗಳನ್ನು ಒಕ್ಕಲಿಗನಿಗೆ ಸಾಲವಾಗಿ ಕೊಡುವುವು.

ಮುಂಬಯಿ ರಾಜ್ಯದಲ್ಲಿ ಹತ್ತಿಯ ಸಹಕಾರಿ ಮಾರಾಟದ ವ್ಯವಸ್ಥೆ ಮಾಡಲಾಗಿದೆ. ಕರ್ನಾಟಕದಲ್ಲಿ ಸಹಕಾರಿ ಸಂಘಗಳು ತಮ್ಮ ಸದಸ್ಯರ ಹುಟ್ಟುವಳಿಯನ್ನು ಪ್ರತ್ಯೇಕ ಗಂಟುಗಳಲ್ಲಿ ಮಾರಾಟ ಮಾಡುವುವು. ಆದರೆ ಗುಜರಾತದಲ್ಲಿ ಹತ್ತಿಬೆಳೆಯುವವರು ಒಟ್ಟಾಗಿ ಸಂಗ್ರಹಿಸಿ ಮಾರುವರು.

ಸಹಕಾರಿ ಮಾರಾಟದ ಸಂಘಗಳ ಪ್ರಗತಿಯು ಇದುವರೆಗೆ ಮಂದವಾಗಿದೆ. ವ್ಯಾಪಾರಿಗಳು ಅದನ್ನು ಅನುಕೂಲದೃಷ್ಟಿಯಿಂದ ನೋಡುವುದಿಲ್ಲ. ಕೊಳ್ಳುವವರು ಹಣ ಸಲ್ಲಿಸಲು ವಿಲಂಬ ಮಾಡುತ್ತಾರೆ. ೧೯೫೦ರ ಕೊನೆಯ ಸುಮಾರಿಗೆ ಸಕ್ಕರೆ ಗಿರಣಿಗಳಿಂದ ಉತ್ತರ ಪ್ರದೇಶ ರಾಜ್ಯದಲ್ಲಿ ಕಬ್ಬಿನ

ಸಹಕಾರಿ ಸಂಘಗಳಿಗೆ ೨ ಕೋಟಿ ರೂಪಾಯಿ ಇನ್ನೂ ಬರಬೇಕಾಗಿತ್ತು. ಇದರ ಪರಿಣಾಮವಾಗಿ ಕೆಲ ಸಹಕಾರಿ ಸಂಘಗಳು ಕಂತ್ರಾಟದಾರರನ್ನು ಹಿಡಿದು ಹಣ ಪಡೆಯಬೇಕಾಯಿತು. ಕಂತ್ರಾಟದಾರರು ಹೆಚ್ಚಿನ ಧಾರಣೆ ಹಾಕಿದರು. ಈ ವ್ಯವಸ್ಥೆಯು ಅಸಮಾಧಾನಕಾರಕವೆಂದು ಕಂಡುಬಂದಿತು.

ಈ ಪರಿಸ್ಥಿತಿ ಸುಧಾರಿಸಬೇಕಾದರೆ ಮಾರಾಟದ ಸಹಕಾರಿ ಸಂಘಗಳು ಸಾಲಕೊಡುವ ಸಂಘಗಳೂ ಆಗಬೇಕು. ಅವು ನೇರವಾಗಿ ಕನ್ಸ್ಯೂಮರ ಸಹಕಾರಿ ಸಂಘಗಳೊಡನೆ ಸಂಬಂಧ ಬೆಳೆಸಿಕೊಳ್ಳಬೇಕು. ಉಳಿದ ರಾಜ್ಯಗಳಲ್ಲಿಯ ಸಹಕಾರಿ ಸಂಘಗಳೊಡನೆ ಸಂಬಂಧವಿಟ್ಟುಕೊಂಡು ಆಯಾತ ನಿರ್ಯಾದ ಅನುಕೂಲತೆಗಳನ್ನು ಮಾಡಿಕೊಳ್ಳಬಹುದಾಗಿದೆ. ಇಂತಹ ವ್ಯಾಪಕವಾದ ಕಾರ್ಯಕ್ಕೆ ಬೇಕಾಗುವ ಹಣವನ್ನು ಸದಸ್ಯಸಂಘಗಳಿಂದ ಪಡೆಯಬೇಕು. ಮೂಲ ಬಂಡವಲು ಹೆಚ್ಚಾದಹಾಗೆ ರಿಜರ್ವ ಬ್ಯಾಂಕಿನಿಂದ ಹೆಚ್ಚಾಗಿ ನೆರವು ಸಿಕ್ಕುತ್ತಹೋಗುವುದು.

ಈ ಸಂಘಗಳ ತಾಂತ್ರಿಕ ಮತ್ತು ಆರ್ಥಿಕ ಮತ್ತು ಆಡಳಿತದ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ಅಭ್ಯಾಸಮಾಡುವುದು ಅವಶ್ಯವಿದೆ. ಕೇಂದ್ರದಲ್ಲಿ ರಾಜ್ಯಗಳಲ್ಲಿ ಪ್ರವೀಣರ ಸಮಿತಿಗಳನ್ನು ಏರ್ಪಡಿಸಿ ಅವರ ಸಲಹೆಗಳು ಈ ಸಂಘಗಳಿಗೆ ದೊರೆಯುವಂತೆ ಮಾಡಬೇಕು. ಆಗ ಈ ಸಂಘಗಳು ಎಲ್ಲ ಆಧುನಿಕ ಉಪಕರಣ, ಸಾಧನಗಳಿಂದ ಕೂಡಿಕೊಂಡು ದೇಶದಲ್ಲಿಯ ವ್ಯವಹಾರವನ್ನು, ಪರದೇಶದ ವ್ಯವಹಾರವನ್ನು ನೋಡಿಕೊಂಡು ಒಕ್ಕಲಿಗನ ಹಿತವನ್ನು ಸಾಧಿಸುವುವು, ರಾಷ್ಟ್ರದ ಉನ್ನತಿಯನ್ನು ಸಾಧಿಸುವುವು.

## ಕೃಷಿ ಅಭಿವೃದ್ಧಿಯ ಕೆಲ ಸಮಸ್ಯೆಗಳು

ಈ ಸಮಸ್ಯೆಗಳ ಪರಿಹಾರಕ್ಕೆ ವೈಜ್ಞಾನಿಕ ಸಂಶೋಧನೆಯು ಅಗತ್ಯ.

ಭಾರತದಲ್ಲಿಯ ೪-೫ ದಷ್ಟು ಸಾಗುವಳಿಯಾದ ಭೂಮಿಯು ಮಳೆಯ ಅನಿಶ್ಚಿತತೆಯ ಮೇಲೆ ಅವಲಂಬಿಸಿದೆ. ಮಳೆಯಿಲ್ಲದ ಮೂಲಕ, ಮಳೆಯು ಕಡಿಮೆಯಾದ ಮೂಲಕ ಬೆಳೆಯು ಬರಲಿಲ್ಲ, ಸಾಕಷ್ಟು ಬರಲಿಲ್ಲವೆಂಬುದು ಭಾರತದ ಒಕ್ಕಲುತನದ ಲಕ್ಷಣವಾಗಿದೆ. ಇಂತಹ ಸ್ಥಿತಿಯನ್ನು ಪರಿಣಾಮ

ಕಾರಿಯಾಗಿ ಎದುರಿಸಬೇಕಾದರೆ ನೀರಾವರಿ ಯೋಜನೆಯೊಂದೆ ತರಣೋಪಾಯ. ನೀರಾವರಿಗಳಲ್ಲಿ ಹಿರಿ–ಕಿರಿ ಎಂದು ವರ್ಗೀಕರಿಸಲಾಗಿದೆ. ಅವು ಅನುಕ್ರಮವಾಗಿ ೨೦೬ ಲಕ್ಷ ಎಕರೆ, ೩೬೪ ಲಕ್ಷ ಎಕರೆ ಭೂಮಿಗೆ ನೀರುಣ್ಣಿಸುವುವು. ಈ ನೀರಾವರಿಗಳು ಯಾರ ಒಡೆತನದಲ್ಲಿರುವುವು ಎಂಬ ದೃಷ್ಟಿಯಿಂದಲೂ ವರ್ಗೀಕರಿಸಲ್ಪಟ್ಟಿವೆ. ಕಾಲುವೆಗಳು ಸರಕಾರದ ಒಡೆತನಗಳಲ್ಲಿವೆ; ಆದರೆ ಬಾವಿಗಳು ಮತ್ತು ಕೆರೆಗಳು ಸಾಮಾನ್ಯವಾಗಿ ಖಾಸಗಿ ಒಡೆತನದಲ್ಲಿವೆ. ಕಳೆದ ೨೫ ವರುಷಗಳಲ್ಲಿ ಸುದ್ದಿಸಂಗತಿಗಳ ಮೇಲಿಂದ ನೋಡಿದರೆ ಸರಕಾರದ ಒಡೆತನದಲ್ಲಿನ ನೀರಾವರಿಯ ವ್ಯಾಪ್ತಿಯು ಬೆಳೆದಿದೆ; ಆದರೆ ಖಾಸಗಿ ಒಡೆತನದಲ್ಲಿದ್ದವು ವಿಕಾಸವಾಗಿಲ್ಲ, ಎಂದು ಕಂಡುಬಂದಿದೆ ಇದರಿಂದ ಖಾಸಗಿ ಒಡೆತನದಲ್ಲಿದ್ದ ನೀರಾವರಿಗಳಿಗೆ ಸಾಕಷ್ಟು ಹಣ ತೊಡಗಿಸುವುದು ವೈಯಕ್ತಿಕ ಪ್ರಯತ್ನಗಳಿಂದ ಸಾಧ್ಯವಾಗಲಿಲ್ಲ ಎಂದು ಸ್ಪಷ್ಟವಾಗುವುದು. ಭೂಸುಧಾರಣೆಯ ಕಾರ್ಯಕ್ರಮದ ಮೂಲಕ ಭೂಒಡೆಯರ ಹೊಲಗಳ ವ್ಯಾಪ್ತಿಯು ಮೇಲ್ಮಿತಿಯ ಪ್ರಮಾಣಗಳಿಂದ ಪರಿಮಿತವಾಗುವ ಮೂಲಕ ಈ ಕ್ಷೇತ್ರಗಳಲ್ಲಿಯ ನೀರಾವರಿಗೆ ಇನ್ನು ಪೋಷಣೆ ಕಡಿಮೆಯಾಗುವ ಸಂಭವವೇ ಹೆಚ್ಚಾಗಿದೆ. ಆದುದರಿಂದ ಇನ್ನುಮುಂದೆ ನೀರಾವರಿ ಕಾರ್ಯಗಳೆಲ್ಲ ಸಾಮಾಜಿಕ ಸಂಘಟನೆಯಿಂದಾಗಲಿ, ಸರಕಾರದ ಸಹಾಯದಿಂದಾಗಲಿ ಕೈಕೊಳ್ಳಲ್ಪಡಬೇಕಾಗುವುದು.

ಕಿರಿ ಮತ್ತು ಮಧ್ಯಮ ತರಗತಿಯ ನೀರಾವರಿಗಳಿಗೆ ಅನೇಕ ಅನುಕೂಲತೆಗಳಿರುವುವು. ಅವು ದೊಡ್ಡ ಪ್ರಮಾಣದಲ್ಲಿ ವಿವಿಧ ಉದ್ಯೋಗಗಳನ್ನು ಕಲ್ಪಿಸಿಕೊಡುತ್ತವೆ. ಆದೂ ತೊಡಗಿಸಬೇಕಾದ ಹಣವು ಕಡಿಮೆ ಪ್ರಮಾಣದಲ್ಲಿ ಬೇಕಾಗುವುದು. ಅವುಗಳ ಕಾರ್ಯವಾದರೂ ಅಲ್ಪಾವಧಿಯಲ್ಲಿ ಪೂರ್ತಿಯಾಗುವುದು. ಇವುಗಳ ರಚನೆಯ ಕಾರ್ಯದಲ್ಲಿ ಸಾರ್ವಜನಿಕರ ಸಹಕಾರವನ್ನು ಸಂಘಟಿಸುವುದೂ ಸುಲಭವಾಗುವುದು. ಈ ಬಗೆಯ ಅನುಕೂಲತೆಗಳನ್ನು ಅನುಲಕ್ಷಿಸಿ ಮತ್ತು ಇಂತಹ ನೀರಾವರಿಗಳಿಂದ ಉತ್ಪಾದನೆಯು ಹೆಚ್ಚುವುದೆಂದು ಮನದಂದು ಪಂಚವಾರ್ಷಿಕ ಯೋಜನೆಯಲ್ಲಿ ಅವುಗಳಿಗಾಗಿ ೩೦ ಕೋಟಿ ರೂಪಾಯಿ ತೆಗೆದಿಡಲಾಗಿದೆ. ಈ ನೀರಾವರಿಗಳ ರಚನೆಗಳನ್ನು ಸುಸ್ಥಿತಿಯಲ್ಲಿ ಇಡುವುದು ಬಹು ಮಹತ್ವದ ವಿಷಯವಾಗಿದೆ. ಇವುಗಳಿಂದ

ಲಾಭ ಪಡೆಯುವವರು ಸಾಮಾನ್ಯವಾಗಿ ನೀರಿನ ಬೆಲೆ ಕೊಡುತ್ತಿರುವುದಿಲ್ಲ. ಅವುಗಳ ದುರಸ್ತಿಯು ವೆಚ್ಚವನ್ನು ಯಾರು ಕೊಡಬೇಕೆಂದು ದುರಸ್ತಿಕಾರ್ಯವು ಅಲಕ್ಷಿತವಾಗುವುದು. ಆದುದರಿಂದ ರಾಜ್ಯಗಳ ನೀರಾವರಿ ಕಾರ್ಯ ವಿಭಾಗದವರೇ ಈ ನೀರಾವರಿಗಳ ದುರಸ್ತಿ, ಸುಸ್ಥಿತಿ, ಸಂಚಾಲನಗಳ ಕಡೆಗೆ ಲಕ್ಷ್ಯ ಹಾಕಬೇಕೆಂದೂ, ಎಲ್ಲಿ ಗ್ರಾಮಪಂಚಾಯತಿಗಳು, ಸಹಕಾರಿ ಸಂಘಗಳು ಇವೆಯೊ ಅಲ್ಲಿ ಅವುಗಳ ಸಹಾಯವನ್ನು ಪಡೆಯಬೇಕೆಂದೂ ಯೋಜನಾ ಸಮಿತಿಯು ಸೂಚಿಸಿದೆ. ಈ ನೀರಾವರಿಗಳಿಂದ ಲಾಭ ಪಡೆಯು ವವರೆಲ್ಲ ನಿರ್ದಿಷ್ಟವಾಗಿ ನೀರಿನ ಬೆಲೆಯನ್ನು ಕರರೂಪವಾಗಿ ಕೊಡುವಂತೆ ಮಾಡಬೇಕು.

ಇಷ್ಟಾದರೂ ಎಷ್ಟೋ ಭೂಮಿಯಲ್ಲಿಯ ಬೆಳೆಗೆ ಮಳೆಯನ್ನೇ ಅವಲಂಬಿಸಬೇಕಾಗುವುದು. ಅಂಥಲ್ಲಿ ಡ್ರಾಯಫಾರ್ಮಿಂಗದ ಬಗ್ಗೆ ಲಕ್ಷ್ಯ ಪೂರೈಸಬೇಕು. ಮಳೆಯ ನೀರು ಹೊಲಗಳಿಂದ ಹರಿದುಹೋಗದಂತೆ ಮಾಡುವುದು, ನೆಲಪಾತಳಿಯಲ್ಲಿಂದ ನೀರು ಆರಿಹೋಗುವುದನ್ನು ತಡೆಯುವುದು, ಇಂತಹ ಉಪಾಯಗಳಿಂದ ಭೂಮಿಯಲ್ಲಿಯ ಹಸಿಯನ್ನು ಕಾದಿಟ್ಟುಕೊಂಡು ಯಶಸ್ವಿಯಾಗಿ ಬೆಳೆಯನ್ನು ಪಡೆಯುವ ಯೋಜನೆ ಮಾಡಬೇಕು. ಈ ದಿಕ್ಕಿನಲ್ಲಿ ಸಂಶೋಧನೆ–ಪ್ರಯೋಗಗಳು ಮುಂಬಯಿ ರಾಜ್ಯದಲ್ಲಿಯ ಸೊಲ್ಲಾಪುರ–ವಿಜಾಪೂರ ಜಿಲ್ಲೆಗಳಲ್ಲಿ ಪಂಜಾಬ ರಾಜ್ಯದಲ್ಲಿಯ ರೋಹತಕ ಜಿಲ್ಲೆಯಲ್ಲಿ ಮಾಡಲ್ಪಟ್ಟಿವೆ. ಇದರಿಂದ ಸಾಮಾನ್ಯ ಮಳೆಯಾದ ವರುಷಗಳಲ್ಲಿ ಸಾಕಷ್ಟು ಬೆಳೆಯೂ ಒಳ್ಳೆಯ ಮಳೆಯಾದ ವರುಷಗಳಲ್ಲಿ ವಿಪುಲ ಬೆಳೆಯೂ ಬಂದದ್ದುಂಟು. ಹೊಲಗಳಲ್ಲಿ ಬಂಡುಹಾಕಿ, ಕಟ್ಟೆಗಳನ್ನು ಕಟ್ಟಿ, ನೆಟ್ಟುತೆಗೆದು, ಮತ್ತು ಒಣಹವೆಗೆ ಯೋಗ್ಯವಾದ ಬೀಜಗಳನ್ನುಪಯೋಗಿಸಿ ಪರಿಸ್ಥಿತಿಯನ್ನು ಎದುರಿಸಲಾಗಿದೆ.

ಆಧುನಿಕ ಒಕ್ಕಲುತನದ ಮಹತ್ವದ ಸಾಧನದೆಂದರೆ ಸುಧಾರಿಸಿದ ತರಗತಿಯ ಬೀಜಗಳು. ಈ ಬೀಜಗಳ ಗುಣಗಳ ಬಗ್ಗೆ ಸಾಗುವಳಿ ಮಾಡುವವನಿಗೆ ಅರಿವುಂಟಾಗಿದೆ. ಆದರಿಂದ ಹೆಚ್ಚಿನ ಉತ್ಪಾದನೆಯೂ ಆಗುವುದೆಂದು ಕಂಡುಬಂದಿದೆ. ಆದರೆ ಇಂತಹ ಬೀಜಗಳನ್ನು ದೊಡ್ಡ ಪ್ರಮಾಣದಲ್ಲಿ

ತಯಾರಿಸುವುದು, ಯೋಗ್ಯರೀತಿಯಲ್ಲಿ ವಿತರಣ ಮಾಡುವುದು, ಸಕಾಲದಲ್ಲಿ ಒಕ್ಕಲಿಗನಿಗೆ ಮುಟ್ಟುವಂತೆ ಮಾಡುವುದು ಮಾತ್ರ ಇನ್ನೂ ವ್ಯವಸ್ಥಿತವಾಗಿಲ್ಲ. ಇತ್ತ ಲಕ್ಷ್ಯ ಹಾಕುವುದು ಅಗತ್ಯವಿದೆ. ಸುಧಾರಿಸಿದ ಬೀಜಗಳನ್ನು ತಯಾರಿಸುವ ಕೇಂದ್ರಗಳು ದೇಶದಾದ್ಯಂತ ಹಬ್ಬಬೇಕು. ಒಕ್ಕಲುತನ ಖಾತೆಯ ನೇತೃತ್ವದಲ್ಲಿ ಅವು ಸ್ಥಾಪಿತವಾಗಬೇಕು. ಕನಿಷ್ಠ ನೂರು ಹಳ್ಳಿಗಳಿಗೊಂದರಂತೆ ಪ್ರಯೋಗದ ಫಾರ್ಮು (ಒಕ್ಕಲುತನ ಕೇಂದ್ರ) ಇರಬೇಕೆಂದು ಯೋಜನಾ ಸಮಿತಿಯು ಶಿಫಾರಸು ಮಾಡಿದೆ. ಬೀಜಗಳನ್ನು ಹಂಚುವಾಗ ಅವುಗಳ ಗುಣದ ಬಗ್ಗೆ ಖಾತ್ರಿ ಮಾಡಿಕೊಂಡು ಹಂಚಬೇಕು. ಇಲ್ಲದಿದ್ದರೆ ಸುಧಾರಿಸಿದ ಬೀಜಗಳಲ್ಲಿ ಒಕ್ಕಲಿಗನ ವಿಶ್ವಾಸವೇ ಹಾರಿಹೋಗುವುದು. ವಾರ್ಷಿಕವಾಗಿ ಪರಿಸ್ಥಿತಿಯನ್ನು ಪರಿಶೀಲನೆ ವಿಮರ್ಶೆ ಮಾಡಿ ಸಲಹೆ ಕೊಡಲು ಭಾರತದ ಒಕ್ಕಲುತನ ಸಂಶೋಧನೆಯ ಕೇಂದ್ರದವರು ಒಂದು ಪ್ರವೀಣ ಸಮಿತಿಯ ಸಹಾಯವನ್ನು ಪಡೆಯಬೇಕು.

ಭಾರತದಂತಹ ವಿಶಾಲವಾದ ದೇಶದಲ್ಲಿ ಭೂಮಿಯ ಗುಣವು ಪ್ರಾದೇಶಿಕವಾಗಿ ಬೇರೆ ಬೇರೆಯ ಆಗಿರುವುದು ಸ್ವಾಭಾವಿಕ. ಭೂಮಿಯ ಗುಣದ ಬಗ್ಗೆ ಪರಿಶೀಲನೆ ನಡೆಯಬೇಕಾಗಿದೆ. ಆದರೂ ಸಾಮಾನ್ಯವಾಗಿ ಎಲ್ಲ ಭೂಮಿಗೆ ಸಜೀವ ವಸ್ತು, ನಾಯಿಟ್ರೋಜನ, ಫಾಸ್ಫೇಟ ಮತ್ತು ಪೊಟ್ಯಾಶ ಇವುಗಳ ಅಗತ್ಯವಿರುತ್ತದೆ. ಭಾರತದ ಭೂಮಿಯಲ್ಲಿ ಮೊದಲನೆಯ ಮೂರು ವಸ್ತುಗಳ ಕೊರತೆಯಿದ್ದು ಕೊನೆಯದು ವಿಪುಲವಾಗಿದೆ. ಈ ಕೊರತೆಯನ್ನು ಗೊಬ್ಬರದ ಮುಖಾಂತರ ತುಂಬಬೇಕಾಗುವುದು. ಗೊಬ್ಬರಗಳಲ್ಲಿ ಸಜೀವ, ನಿರ್ಜೀವ ಎಂದು ಎರಡು ಭಾಗ. ಸಜೀವದಲ್ಲಿ ಗಾತ್ರದ ಗೊಬ್ಬರ, ತೀಕ್ಷ್ಣಗೊಬ್ಬರವೆಂದು ಮತ್ತೆ ಎರಡು ವಿಧ. ಮೊದಲನೆಯದು ಹೊಲದಲ್ಲಿಯ ಕಸ, ಕಂಪೋಸ್ಟು, ಮಲ ಮತ್ತು ಹಸಿರುಗೊಬ್ಬರ ಇವುಗಳಿಂದ ದೊರೆಯುತ್ತದೆ. ಎರಡನೆಯದು ಹಿಂಡಿ, ಎಲುಬು ಮುಂತಾದವುಗಳಲ್ಲಿ ದೊರೆವುದು. ಭಾರತದಲ್ಲಿ ಸಗಣಿಯು ೮೦೦೦ ಟನ್ನುಗಳಷ್ಟು ದೊರೆವುದೆಂದು ಅಂದಾಜು ಮಾಡಲಾಗಿದೆ. ಆದರೆ ಇದರಲ್ಲಿಯ ಬಹುಭಾಗವು ಉರುವಲಕ್ಕೆ ಉಪಯೋಗವಾಗುತ್ತದೆ. ಉರುವಲಕ್ಕೆ ಇದ್ದಲಿಯನ್ನು

ಪೂರೈಸುವಂತಾದರೆ ಈ ಸಗಣಿಯು ಗೊಬ್ಬರಕ್ಕೆ ಉಪಯೋಗವಾಗುವುದು. ಆ ಬಗ್ಗೆ ಯೋಜನೆ ನಡೆದಿದೆ.

ಮಾನವಮಲವು ನಾಯಿಟ್ರೋಜನ, ಫಾಸ್ಫರಸ ಮತ್ತು ಸಜೀವ ವಸ್ತು ಇವುಗಳನ್ನು ಒದವಿಸುವ ಉತ್ತಮ ಸಾಧನವಾಗಿದೆ. ಪಟ್ಟಣಗಳಲ್ಲಿ ಅದನ್ನು ಕಂಪೋಸ್ಟಕ್ಕೆ ಉಪಯೋಗಮಾಡಿ ಗೊಬ್ಬರ ತಯಾರಿಸಿ ಒಕ್ಕಲಿಗರಿಗೆ ಮಾರುವ ವ್ಯವಸ್ಥೆಯಾಗುತ್ತಲಿದೆ. ಮುನಿಸಿಪಾಲಿಟಿಗಳು ಈ ಕಾರ್ಯವನ್ನು ಮಾಡಲೆಬೇಕೆಂದು ಸಾಮಾನ್ಯವಾಗಿ ಎಲ್ಲ ರಾಜ್ಯಗಳಲ್ಲಿ ಶಾಸನ ಮಾಡಲಾಗಿದೆ. ಭಾರತದಲ್ಲಿರುವ ೩೦೦೦ ಮುನಿಸಿಪಾಲಿಟಿಗಳಲ್ಲಿ ಈಗಾಗಲೆ ೧೭೮೮ ಮುನಿಸಿ ಪಾಲಿಟಿಗಳು ಈ ಕಾರ್ಯ ಮಾಡುತ್ತಿವೆ. ಇದರಿಂದ ವಾರ್ಷಿಕವಾಗಿ ಸುಮಾರು ೧೭ ಲಕ್ಷ ಟನ್ನುಗಳಷ್ಟು ಈ ಮಾದರಿಯ ಗೊಬ್ಬರ ದೊರೆಯು ತ್ತದೆ. ದೇಶದಲ್ಲಿಯ ಉಳಿದ ಮುನಿಸಿಪಾಲಿಟಿಗಳು ಕಾರ್ಯಪ್ರವೃತ್ತ ವಾದರೆ, ಯೋಜನೆಯ ಕಾಲಾವಧಿಯಲ್ಲಿ ಒಟ್ಟು ಇಂತಹ ಗೊಬ್ಬರವು ೩೦ ಲಕ್ಷ ಟನ್ನುಗಳಷ್ಟು ದೊರೆಯಬಹುದಾಗಿದೆ. ಮಾನವ ಮತ್ತು ಪಶುಗಳ ಮೂತ್ರವು ಒಳ್ಳೆಯ ಗೊಬ್ಬರವನ್ನು ಒದವಿಸುವುದೆಂದು ಕಂಡುಹಿಡಿಯ ಲಾದರೂ ಅವುಗಳನ್ನು ಸಂಗ್ರಹಿಸುವುದು ಕಷ್ಟತರವಾದ ಸಮಸ್ಯೆಯಾಗಿದೆ. ಆ ಬಗ್ಗೆ ವಿಚಾರ ನಡೆದಿದೆ.

ದ್ವಿದಳ ಧಾನ್ಯದ ಜಾತಿಯ ಬೆಳೆಯನ್ನು ಬೆಳೆದು ಅದನ್ನು ಭೂಮಿಯಲ್ಲಿ ಮರಳಿ ಹುಗಿದರೆ ಆ ಭೂಮಿಯಲ್ಲಿಯ ನಾಯಿಟ್ರೋಜನ ಕೊರತೆಯನ್ನು ಹೋಗಲಾಡಿಸಲು ಸಹಾಯವಾಗುವುದೆಂಬುದು ಸುಪ್ರಸಿದ್ಧವಾದ ಪದ್ಧತಿ ಯಾಗಿದೆ. ಇದಕ್ಕೆ ಹಸಿರುಗೊಬ್ಬರವೆಂದೂ ಹೇಳಲಾಗುತ್ತಿದೆ. ಎಣ್ಣೆ ಹಿಂಡಿಯನ್ನು ಗೊಬ್ಬರವೆಂದು ಉಪಯೋಗಿಸಿದರೂ ನಾಯಿಟ್ರೋಜನದ ಕೊರತೆ ಕಡಿಮೆಯಾಗುವುದು. ಆದರೆ ಆಹಾರಕ್ಕಾಗಿ ಉಪಯೋಗಿಸುವ ಎಣ್ಣೆಯ ಹಿಂಡಿಯು ದನಗಳಿಗೆ ಆಹಾರವಾಗಿರುವುದರಿಂದ ದನಗಳ ಆಹಾರದ ಕೊರತೆಯಿರುವ ಈ ಕಾಲದಲ್ಲಿ ಅಂತಹದನ್ನು ಗೊಬ್ಬರಕ್ಕಾಗಿ ಉಪ ಯೋಗಿಸುವುದು ಸಾಧ್ಯವಿಲ್ಲದ ಮಾತು. ಆಹಾರೋಪಯೋಗಿಯಾಗಿರದ ಎಣ್ಣೆಯ ಹಿಂಡಿಯನ್ನು ಗೊಬ್ಬರವೆಂದು ಉಪಯೋಗಿಸಬಹುದು. ಇವುಗಳ

ಜತೆಗೆ ರಾಸಾಯನಿಕ ಗೊಬ್ಬರವನ್ನು ಉಪಯೋಗಿಸಿದರೆ ಉತ್ತಮ ಫಲ ಬರುವುದು.

ಕಸಾಯಿಖಾನೆ (ಪ್ರಾಣಿಗಳ ವಧಸ್ಥಳ) ಯಲ್ಲಿ ದೊರೆವ ರಕ್ತಮಿಶ್ರಿತ ಕೊಲಸು, ಮಾಂಸ, ಎಲುಬು, ಕೋಡು ಮುಂತಾದವುಗಳು ಗೊಬ್ಬರವೆಂದು ಉಪಯೋಗಿಸಲ್ಪಟ್ಟರೆ ಭೂಮಿಯ ಫಲವತ್ತತೆಯನ್ನು ಅದು ಹೆಚ್ಚಿಸುವುದು. ದೇಶದಲ್ಲಿನ ಕಸಾಯಿಖಾನೆಗಳಿಂದ ೧೦,೦೦೦ ಟನ್ನುಗಳಷ್ಟು ರಕ್ತಮಿಶ್ರಿತ ಕೊಲಸು ದೊರೆವುದೆಂದು ಅಂದಾಜು ಮಾಡಲಾಗಿದೆ. ಉಳಿದ ಮಾಂಸ-ತೊಗಲು ಮುಂತಾದವುಗಳನ್ನು ಮಿಶ್ರಣಮಾಡಿ ಈಗ ಟ್ಯಾಂಕೇಜ ಎಂಬ ವ್ಯಾಪಾರಿ ಹೆಸರಿನಲ್ಲಿ ಮಾರಲಾಗುತ್ತದೆ. ಇದರಲ್ಲಿ ೧೦ ಶತಾಂಶದವರೆಗೆ ನಾಯಿಟ್ರೋಜನ್ನು ೭ ರಿಂದ ೨೦ ಶತಾಂಶದವರೆಗೆ ಫಾಸ್ಫರಿಕ್ ಆ್ಯಸಿಡು ದೊರೆಯುವುದೆಂದು ಕಂಡುಕೊಳ್ಳಲಾಗಿದೆ. ಸರಿಯಾದ ಪದ್ಧತಿಪ್ರಕಾರ ಕಸಾಯಿಖಾನೆಯ ಹೊಲಸನ್ನು ಮುನಿಸಿಪಾಲಿಟಿಯವರು ಗೊಬ್ಬರ ಮಾಡಿದರೆ ಅದೊಂದು ಧನೋತ್ಪಾದನದ ಕಾರ್ಯವೂ ಭೂಮಿಗೆ ಒಳ್ಳೆ ಗೊಬ್ಬರ ಒದಗಿಸಿದ ಕಾರ್ಯವೂ ಆಗುವುದು.

ಎಲುಬುಗಳ ಗೊಬ್ಬರವು ಫಾಸ್ಫೇಟುಳ್ಳದ್ದು. ಅದು ಎಲ್ಲ ಬಗೆಯ ಭೂಮಿಗೆ ಉಪಯೋಗವಾಗುವುದು. ಮುಖ್ಯವಾಗಿ ಆಮ್ಲಯುಕ್ತ ಭೂಮಿಗಳಿಗೆ ಒಳ್ಳೆಯ ಉಪಯೋಗವಾಗುವುದು. ವರುಷಕ್ಕೆ ೧,೫೦,೦೦೦ ಟನ್ನುಗಳಷ್ಟು ಎಲುಬಿನ ಸಂಗ್ರಹವಾಗುವುದು; ಆದರೆ ಇದು ನಿಜವಾದ ಪ್ರಮಾಣದ ೧/೪ ಎಂದು ಹೇಳುತ್ತಾರೆ. ದೊರೆತ ಪರಿಮಾಣದಲ್ಲಿಯ ೧/೪ ಮಾತ್ರ ಗೊಬ್ಬರಕ್ಕಾಗಿ ಉಪಯೋಗವಾಗುತ್ತಿದೆ. ಉಳಿದುದು ಪರದೇಶಕ್ಕೆ ನಿರ್ಯಾತವಾಗುತ್ತದೆ. ಅಲ್ಲಿ ಅದು ಅಂಟು ಜಿಲೆಟಿನ ಎಂಬ ಪದಾರ್ಥಗಳ ತಯಾರಿಕೆಗಾಗಿ ಉಪಯೋಗವಾಗುತ್ತದೆ. ಪರದೇಶಕ್ಕೆ ಇದನ್ನು ಕಳಿಸುವುದರಿಂದ ನಮ್ಮ ಭೂಮಿಯು ಬಡವಾಗುವುದು, ನಮ್ಮ ಉದ್ಯೋಗಗಳೂ ಕುದುರುವುದಿಲ್ಲ. ಅಂಟು ಜಿಲೆಟಿನಗಳನ್ನು ನಮ್ಮಲ್ಲಿಯೆ ತಯಾರಿಸಿದರೂ ಲಾಭವಾಗುತ್ತದೆ. ರೈಲುಮಾರ್ಗದಿಂದ ದೂರವಲ್ಲಿ ಸಂಗ್ರಹವಾದ ಎಲುಬುಗಳನ್ನು ತರುವುದು ಒಂದು ತೊಡಕೆನ್ನಿಸಬಹುದು. ಆದರೆ ಅದನ್ನು

ಹೇಗಾದರೂ ಮಾಡಿ ತಂದರೆ, ನಮ್ಮಲ್ಲಿಯ ಉದ್ಯಮಗಳಿಗೆ ಜೀವ ಕೊಟ್ಟಂತಾಗುವುದು.

ನಿರ್ಜೀವ ಇಲ್ಲವೆ ರಾಸಾಯನಿಕ ಗೊಬ್ಬರವೆಂದು ಕರೆಯಲಾಗುವವು ಅಮೋನಿಯಂ ಸಲ್ಫೇಟ ಮತ್ತು ಸುಪರಫಾಸ್ಫೇಟುಗಳು. ಮೊದಲನೆಯದು ನಾಯಿಟ್ರೋಜನವುಳ್ಳದ್ದು, ಎರಡನೆಯದು ಫಾಸ್ಫರಸ ಉಳ್ಳದ್ದು. ಈಗ ಇವು ನಮ್ಮ ದೇಶದಲ್ಲಿ ಸಿದ್ಧವಾಗುತ್ತಲಿವೆ. ಸಜೀವ ಗೊಬ್ಬರದ ಸಂಪತ್ತಿಯನ್ನು ಸಂಪೂರ್ಣವಾಗಿ ಬಳಸಿಕೊಳ್ಳದೆ, ರಾಸಾಯನಿಕ ಗೊಬ್ಬರಕ್ಕಾಗಿ ಪ್ರಯತ್ನಿಸಲಾಗುತ್ತಿದೆ ಎಂಬ ಟೀಕೆ ಅಲ್ಲಲ್ಲಿ ಕೇಳಿಬರುತ್ತಿದೆ. ಸಜೀವ ಗೊಬ್ಬರದ ಸಂಪತ್ತಿಯನ್ನು ಸಂಪೂರ್ಣ ಬಳಸಿಕೊಳ್ಳುವ ಪ್ರಯತ್ನವು ನಡೆಯಬೇಕಾದದ್ದೆ; ಆದರೆ ಅದುವರೆಗೆ ರಾಸಾಯನಿಕ ಗೊಬ್ಬರದ ತಯಾರಿಕೆಯ ಕಾರ್ಯವು ತಡೆಯಬೇಕಿಲ್ಲ. ಎರಡೂ ಕಾರ್ಯಗಳು ಏಕಕಾಲಕ್ಕೆ ನಡೆಯುವ ಅನುಕೂಲತೆ ಇದೆ. ಕೇವಲ ರಾಸಾಯನಿಕ ಗೊಬ್ಬರವನ್ನು ಉಪಯೋಗಿಸಿದರೆ ಭೂಮಿಯ ಗುಣವೂ ಕಡಿಮೆಯಾಗುವುದೆಂದು ಅಭಿಪ್ರಾಯವೂ ಇದೆ. ಆದುದರಿಂದ ಸಜೀವ ಗೊಬ್ಬರದ ಜತೆಯಾಗಿ ಈ ರಾಸಾಯನಿಕ ಗೊಬ್ಬರವನ್ನು ಉಪಯೋಗಿಸುತ್ತ ಹೋಗುವುದು ಹಿತಕರ.

ಸುಧಾರಿಸಿದ ಒಕ್ಕಲುತನ ಉಪಕರಣಗಳು ವೇಳೆ ಮತ್ತು ಹಣವನ್ನು ಮತ್ತು ಉತ್ಸಾಹವನ್ನು ಉಳಿಸುವುವಲ್ಲದೆ ಹೆಚ್ಚಿನ ಉತ್ಪಾದನೆಗೂ ನೆರವಾಗುವುವು. ನಮ್ಮ ದೇಶದಲ್ಲಿಯ ಉಪಕರಣಗಳನ್ನು ಹೇಗೆ ಸುಧಾರಿಸಬೇಕೆಂಬುದಕ್ಕಾಗಿ ಒಬ್ಬ ವಿಶೇಷ ಯಂತ್ರವಿಶಾರದನನ್ನು ನಿಯಮಿಸಬೇಕು. ದೇಶೀಯ ಉಪಕರಣಗಳಲ್ಲಿ ಸುಧಾರಣೆ ಮಾಡಿ ಅವುಗಳ ಪ್ರಯೋಗ ನಡೆಯುತ್ತಿರಬೇಕಲ್ಲದೆ ಆಯಾತ ಮಾಡಲ್ಪಟ್ಟ ಉಪಕರಣಗಳ ಗುಣದೋಷಗಳ ಬಗ್ಗೆಯೂ ಪ್ರಯೋಗ ನಡೆಸುತ್ತಲೆ ಇರಬೇಕು. ದೇಶದ ಬೇರೆ ಬೇರೆ ಭಾಗಗಳಲ್ಲಿ ಬಳಸಲಾಗುತ್ತಿರುವ ಉಪಕರಣಗಳ ಬಗ್ಗೆಯೂ ಲಕ್ಷ್ಯ ಪೂರೈಸಬೇಕು. ಈ ಎಲ್ಲ ಪ್ರಯೋಗಗಳ ಪರಿಣಾಮ ಫಲವನ್ನು ತಯಾರಕರಿಗೆ ಒದಗಿಸುವ ಏರ್ಪಾಡು ಆಗಬೇಕು. ಉಪಕರಣಗಳು ಬೆಳೆ, ಭೂಮಿ ಮತ್ತು ಹವಾಮಾನ ಇವುಗಳನ್ನು ಅನುಲಕ್ಷಿಸಿ ಸಿದ್ಧಮಾಡಲ್ಪಡಬೇಕು.

ತಾಂತ್ರಿಕ ಪ್ರವೀಣರ ಸಮಿತಿಗಳು ಪ್ರಾದೇಶಿಕವಾಗಿ ನಿಯಮಿಸಲ್ಪಡಬೇಕು. ಸರಕಾರದವರು, ಇತರರು, ಮಾಡಿದ ಸಂಶೋಧನೆ–ಪ್ರಯೋಗಗಳನ್ನು ಇವರು ಪರಿಶೀಲಿಸಿ ಮಾರ್ಗದರ್ಶನ ಮಾಡಬೇಕು. ಇಷ್ಟೆಲ್ಲ ಆದಮೇಲೆ ಸಿದ್ಧವಾಗುವ ಸುಧಾರಿಸಿದ ಉಪಕರಣಗಳು ಜನಪ್ರಿಯವಾಗುವಂತೆ ಮಾಡಬೇಕು. ಒಕ್ಕಲಿಗರಿಗೆ ಪ್ರಾತ್ಯಕ್ಷಿಕೆಗಳನ್ನು ಮಾಡಿ ತೋರಿಸಿ ಅವುಗಳ ಗುಣಗಳ ಬಗ್ಗೆ ಮನವರಿಕೆಯಾಗುವಂತೆ ಮಾಡಬೇಕು. ಈ ಉಪಕರಣಗಳನ್ನು ಒಂದೆಡೆಯಲ್ಲಿ ದೊಡ್ಡ ಕಾರಖಾನೆಯಲ್ಲಿ ಸಿದ್ಧಪಡಿಸುವುದರಕಿಂತ ಕಿರುಉದ್ಯಮವೆಂದು ಬೆಳೆಸಿದರೆ ಹೆಚ್ಚು ಜನರಿಗೆ ಉದ್ಯೋಗ ಕಲ್ಪಿಸಿಕೊಟ್ಟಂತೆಯೂ ಆಗುವುದು.

ಒಕ್ಕಲುತನದ ಕಾರ್ಯಗಳ ಯಂತ್ರಗಳ ಉಪಯೋಗಕ್ಕೆ ಎರಡನೆಯ ಮಹಾಯುದ್ಧದ ಅನಂತರ ನಮ್ಮ ದೇಶದಲ್ಲಿ ಪುಷ್ಟಿ ದೊರೆಯಿತು. 'ಹೆಚ್ಚು ಆಹಾರ ಬೆಳೆಯಿರಿ' ಆಂದೋಲನದ ಮೂಲಕ ಟ್ರಾಕ್ಟರು, ಡಿಸೆಲ್ ಇಂಜಿನುಗಳು, ವಿದ್ಯುತ್ ಮೋಟರುಗಳು ಇವುಗಳನ್ನು ಕೊಂಡುಕೊಳ್ಳಲು ಧನ ಸಹಾಯವು ಸಿಕ್ಕತೊಡಗಿತು. ಕಳೆದ ಮೂರು ವರುಷಗಳಲ್ಲಿ ನಮ್ಮ ದೇಶಕ್ಕೆ ಈ ಕೆಳಗಿನಂತೆ ಟ್ರಾಕ್ಟರುಗಳು ಆಯಾತ ಮಾಡಲ್ಪಟ್ಟವೆ. ೧೯೪೯–೫೦ ರಲ್ಲಿ ೩೩೧೮; ೧೯೫೦–೫೧ ರಲ್ಲಿ ೪೯೩೦; ೧೯೫೧–೫೨ ರಲ್ಲಿ ೭೪೦೦. ಬೀಳುಭೂಮಿಯನ್ನು ಸಾಗುವಳಿಗಾಗಿ ಮರಳಿ ಪಡೆಯಲು ಮತ್ತು ನೆಟ್ಟು ಬೆಳೆದ ಭೂಮಿಯನ್ನು ಹಸನ ಮಾಡಲು ಟ್ರಾಕ್ಟರುಗಳು ಹೆಚ್ಚು ಉಪಯೋಗಕಾರಿಯಾಗಿವೆ. ಶ್ರಮಿಕರ ಕೊರತೆಯಿರುವ ವಿರಲ ಜನಸಂಖ್ಯೆಯ ಪ್ರದೇಶಗಳಲ್ಲಿಯೂ ಭೂಸವಕಳಿ ತಡೆಯಲು, ಕಾಲುವೆಗಳನ್ನು ಕಡಿಯಲು, ಬಂಡಿಂಗ, ಮತ್ತು ಗದ್ದೆಗಳನ್ನು ಮಾಡಲು ಮುಂತಾದ ಕಾರ್ಯಗಳಿಗೂ ಟ್ರಾಕ್ಟರು ಸಹಾಯಕಾರಿಯಾಗಿದೆ. ಆದರೆ ಅದರ ಉಪಯೋಗದತ್ತ ಅನಾವಶ್ಯಕವಾದ ಉತ್ಸಾಹ ತೋರಿ ಸಾಮಾನ್ಯ ಸಾಗುವಳಿ ಕಾರ್ಯದಲ್ಲಿ ಅವುಗಳನ್ನು ಉಪಯೋಗಿಸಿ ನಿರುದ್ಯೋಗಿತೆಯು ಹೆಚ್ಚುವಂತೆ ಮಾಡದಿರಲು ಲಕ್ಷ್ಯ ಪೂರೈಸಬೇಕು. ಇವರಿಂದ ಪಶುಸಂಗೋಪನ ಕಾರ್ಯಕ್ಕೂ ಕೊಡೆತ ಬೀಳದಂತೆ ನೋಡುವುದು ಅಗತ್ಯವಾಗಿದೆ.

ಉತ್ತಮ ಬೆಳೆ ಬಂದರೂ ಅವುಗಳನ್ನು ಕ್ರಿಮಿಕೀಟಕ ಬೇನೆ ಉಪದ್ರವ ಗಳಿಂದ ಕಾಯಿದುಕೊಳ್ಳುವುದೂ ಮಹತ್ವದ ಮಾತಾಗಿದೆ. ಸಂಗ್ರಹದಲ್ಲಿಟ್ಟ ಕಾಳು ೧೦ ಶತಾಂಶದಷ್ಟು ನಾಶವಾಗುತ್ತಿದೆಯೆಂದು ಅಂದಾಜು ಮಾಡ ಲಾಗಿದೆ. ಇದು ದೊಡ್ಡ ಪ್ರಮಾಣದ ಹಾನಿ; ಇದು ತಪ್ಪಿದರೆ, ಅಷ್ಟು ಪಟ್ಟಿಗೆ ಉತ್ಪಾದನ ಹೆಚ್ಚಿದಂತೆಯೆ. ಸಸ್ಯಾದಿಗಳಿಗೆ ಬೇನೆ ತಗಲದಂತೆ ಪ್ರತಿಬಂಧಕೋಪಾಯಗಳನ್ನು ಸಕಾಲದಲ್ಲಿ ಕೈಕೊಳ್ಳುವುದೂ ಅಷ್ಟೇ ಮಹತ್ವದ್ದಾಗಿದೆ. ಸಾಂಕ್ರಾಮಿಕ ರೋಗಗಳನ್ನು ತಡೆಯುವುದಕ್ಕೆ ಅವುಗ ಳನ್ನು ಪ್ರತ್ಯೇಕಿಸುವುದು, ಜೀವಶಾಸ್ತ್ರೀಯ ನಿಯಂತ್ರಣ, ಸಂಸ್ಕಾರ ಪದ್ಧತಿ, ರಾಸಾಯನಿಕ ಚಿಕಿತ್ಸೆ ಮುಂತಾದ ಪದ್ಧತಿಗಳು ಜಾರಿಯಲ್ಲಿಡುವುವು.

ವಿಸ್ತರಣಸೇವೆ ಸಲ್ಲಿಸುವ ಕಾರ್ಯಕರ್ತರ ದಕ್ಷತೆಯಮೇಲೆ ಕೃಷಿ ಕಾರ್ಯಕ್ರಮದ ಯಶಸ್ಸು ಅವಲಂಬಿಸಿದೆ. ಇದುವರೆಗೆ ಪ್ರಯೋಗ ಮಾಡಿ ತೋರಿಸುವ ಬದಲು ಪ್ರಚಾರದ ಮೇಲೆ ಕೈಯೂರಲಾಗಿತ್ತು. ಈ ಕೊರತೆ ಯನ್ನು ಹೋಗಲಾಡಿಸಲು ವಿಸ್ತರಣಸೇವೆ ಸಲ್ಲಿಸುವ ಕಾರ್ಯಕರ್ತರಿಗೆ ತರಬೇತಿ ಕೊಡುವುದು ಅಗತ್ಯವೆಂದು ಕಂಡುಬಂದಿದೆ. ಒಕ್ಕಲುತನ ಶಾಲೆ ಗಳಿಗೆ ಮುಂಬಯಿ ರಾಜ್ಯದಲ್ಲಿಯ ಮಂಜರಿಯಲ್ಲಿಯ ಎರಡು ವರುಷದ ಶಿಕ್ಷಣಪದ್ಧತಿಯನ್ನು ಮಾದರಿಯೆಂದು ಸೂಚಿಸಲಾಗಿದೆ. ಈ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳೆ ಒಕ್ಕಲುತನ ಕೆಲಸ ಮಾಡುವರು. ಈಗಿದ್ದ ಒಕ್ಕಲುತನ ಶಾಲೆಗಳಿಂದ ಅಭಿವೃದ್ಧಿ ಕಾರ್ಯಕ್ರಮವು ಪ್ರಗತಿ ಹೊಂದುವುದು ಸಾಧ್ಯ ವಿಲ್ಲದ್ದರಿಂದ ಫೋರ್ಡ ಫಾವುಂಡೇಶನದವರ ಸಹಾಯದಿಂದ ೩೦ ತರಬೇತಿ ಕೇಂದ್ರಗಳನ್ನು ಸಂಘಟಿಸಲಾಗಿದೆ. ಯೋಜನೆಯ ಕಾಲಾವಧಿಯಲ್ಲಿ ಅನೇಕ ಕ್ರಮಬದ್ಧ ಶಾಲೆಗಳನ್ನು ಸ್ಥಾಪಿಸುವ ವಿಚಾರ ಕಾರ್ಯಕಾರಿಯಾಗುತ್ತಲಿದೆ.

ದೇಶದಲ್ಲಿರುವ ೨೨ ಒಕ್ಕಲುತನ ಕಾಲೇಜುಗಳು ವರುಷಕ್ಕೆ ೧೧೦೦ ಪದವೀಧರರನ್ನು ಸಿದ್ಧಗೊಳಿಸುವುವು. ಪ್ರಾಯೋಗಿಕ ಕಾರ್ಯಕ್ಕಾಗಿ ತಕ್ಕಷ್ಟು ಸೌಕರ್ಯವಿಲ್ಲದ್ದಕ್ಕಾಗಿ ವರುಷಕ್ಕೆ ಎರಡು ತಿಂಗಳು ಈ ವಿದ್ಯಾರ್ಥಿ ಗಳನ್ನು ಗ್ರಾಮವಾತಾವರಣದಲ್ಲಿ ಉತ್ಕಟ ವ್ಯಾವಹಾರಿಕ ತರಬೇತುಗೊಳಿಸ ಬೇಕೆಂದು ಸೂಚಿಸಲಾಗಿದೆ.

ಒಕ್ಕಲುತನ ಸಂಶೋಧನೆಯಿಂದ ಅನೇಕ ವಿಷಯಗಳು ತಿಳಿದು ಬಂದಿವೆ. ಇವುಗಳಲ್ಲಿ ಕೆಲಮಟ್ಟಿಗೆ ಈಗಾಗಲೇ ಸುಸಂಸ್ಕೃತ ಕೃಷಿಕನ ಕಾರ್ಯಕ್ರಮದಲ್ಲಿ ಅಡಕವಾಗಿವೆ. ಮುಂದಿನ ಹತ್ತು ವರುಷಗಳಲ್ಲಿ ವಿಸ್ತರಣ ಸೇವೆಯನ್ನು ಸುಸಂಘಟಿತವಾಗಿ ಮಾಡಿ ಸಂಶೋಧನೆಯ ಫಲಗಳು ಗ್ರಾಮ ಗಳಿಗೂ ಮುಟ್ಟುವಂತೆ ಯೋಜಿಸಲಾಗಿದೆ. ಸಂಶೋಧನೆಯು ಒಂದು ನಿರಂತರವಾದ ಕ್ರಮವು. ಹೊಸ ಸಮಸ್ಯೆಗಳು ಉದಯವಾದಂತೆಲ್ಲ ಹೊಸ ಪರಿಹಾರಗಳು ಒದಗಿಬರಲೇಬೇಕಾಗುವುದು. ಬೇರೆ ಬೇರೆ ಬೆಳೆ-ಭೂಮಿಗಳ ಪ್ರದೇಶಕ್ಕೆ ಒಂದೊಂದು ಕೇಂದ್ರವು ಸ್ಥಾಪಿತವಾಗಬೇಕೆಂದು ಸೂಚಿಸ ಲ್ಪಟ್ಟಿದೆ. ಇದನ್ನು ಮಾಡದೆ ಹೋದರೆ ಸಮಸ್ಯೆಗಳು ಮತ್ತು ಪರಿಹಾರಗಳು ಕುದುರೆಯ ಜೀಕದಂತೆ ಆಗಿ ಒಂದು ಮತ್ತೊಂದನ್ನು ಮುಟ್ಟುವುದೇ ಇಲ್ಲ. ಈ ಬಗೆಯ ಪ್ರಾದೇಶಿಕ ಕೇಂದ್ರಗಳ ಪ್ರಯೋಗವು ಜಪಾನದಲ್ಲಿ ಯಶಸ್ವಿ ಯಾಗಿದೆ. ಈಗ ಭಾರತದಲ್ಲಿಯ ಒಕ್ಕಲುತನ ಸಂಶೋಧನೆಯು ದಿಲ್ಲಿಯ ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚದಲ್ಲಿಯೇ ಹೆಚ್ಚಾಗಿ ನಡೆ ಯುತ್ತದೆ. ೧೯೩೦ ರಲ್ಲಿ ಸ್ಥಾಪಿತವಾದ ಈ ಸಂಸ್ಥೆಯು ಬೆಳೆಯುತ್ತಬಂದಿದ್ದರೂ ದೇಶವ್ಯಾಪಿಯಾದ ಸಮಸ್ಯೆಗಳೆಲ್ಲವಕ್ಕೂ ಪರಿಹಾರ ಒದಗಿಸುವುದು ಕಠಿಣ ವಾಗಿದೆ. ಭಾರತವು ಈಗ ಒಕ್ಕಲುತನ ಅಭಿವೃದ್ಧಿಯ ಮಹತ್ಕಾರ್ಯವನ್ನು ಕೈಕೊಂಡಿದೆ. ಒಕ್ಕಲಿಗನ ವ್ಯಾವಹಾರಿಕ ತೊಡಕುಗಳು ಎಷ್ಟು ತೀವ್ರಗತಿ ಯಿಂದ ಪರಿಹಾರ ಪಡೆಯುವುವೊ ಅದರಮೇಲಿಂದ ಅಭಿವೃದ್ಧಿ ಕಾರ್ಯಕ್ರಮದ ಪ್ರಗತಿಯು ಅವಲಂಬಿಸಿದೆ. ಆದುದರಿಂದ ಎಲ್ಲ ಸಂಶೋಧನ ಕೇಂದ್ರಗಳು ಟೊಂಕಕಟ್ಟಿದುಡಿಯಬೇಕಾಗಿದೆ. ಅಲ್ಲಲ್ಲಿಯ ಸಂಶೋಧನೆಯ ಪರಿಣಾಮಗಳು ಸಂಬಂಧೀಕರಿಸಲ್ಪಟ್ಟು ಸಾಮಾನ್ಯ ಒಕ್ಕಲಿಗನಿಗೆ ಅವು ಮುಟ್ಟುವಂತೆಯಾಗ ಬೇಕಾಗಿದೆ. ಆದುದರಿಂದ ಒಕ್ಕಲುತನ ಸಂಶೋಧನೆಯ ಕೇಂದ್ರಗಳ ಸಂಖ್ಯೆಯೂ ಹೆಚ್ಚಬೇಕು; ಕಾರ್ಯವ್ಯಾಪ್ತಿಯೂ ಹೆಚ್ಚಬೇಕು; ಪರಿಣಾಮ ಫಲಗಳ ಸಂಬಂಧೀಕರಣವು ಬೇಗನೆ ಆಗಿ ಅವು ವ್ಯಾವಹಾರಿಕ ಸ್ವರೂಪದಲ್ಲಿ ಒಕ್ಕಲಿಗನಿಗೆ ಸಕಾಲದಲ್ಲಿ ಮುಟ್ಟುವ ವ್ಯವಸ್ಥೆಯೂ ಆಗಬೇಕು. ಆಗ ಅಭಿ ವೃದ್ಧಿಯ ಕಾರ್ಯವು ಗೆರೆಕೊರೆದಂತೆ ಅಂದಾಜಿನಂತೆ ಪ್ರಗತಿಯಾಗುವುದು.

———

ಪ್ರಕರಣ ಎಂಟು :

# ಅಭಿವೃದ್ಧಿ ಕಾರ್ಯಕ್ರಮಗಳು : ಕೃಷಿಪೋಷಕ ವ್ಯವಸಾಯಗಳು

## ಪಶುಸಂಗೋಪನ

ಭಾರತದ ಗ್ರಾಮಗಳ ಆರ್ಥಿಕ ವ್ಯವಸ್ಥೆಯಲ್ಲಿ ದನಗಳು ಮಹತ್ವದ ಸ್ಥಾನವನ್ನು ಪಡೆದಿವೆ. ಸ್ಥೂಲವಾದ ರಾಷ್ಟ್ರೀಯ ಆದಾಯಕ್ಕೆ ಅವುಗಳ ವಾರ್ಷಿಕ ಸಹಾಯವು ೧೦೦೦ ಕೋಟಿ ರೂಪಾಯಿಗಳಷ್ಟಾಗುವುದು. ಇದರಲ್ಲಿ ಅವುಗಳ ಚಾಲಕಶಕ್ತಿಯ ಬೆಲೆಯು ಸಮಾವೇಶವಾಗಿಲ್ಲ. ಭಾರತದಲ್ಲಿ ಶಾಕಾಹಾರಿಗಳು ಬಹುಸಂಖ್ಯಾಕರಾಗಿರುವುದರಿಂದ ಹಾಲು ಹೈನಗಳ ಆಹಾರದ ಸಾರಜನಕ ಪದಾರ್ಥಗಳನ್ನು ಒದಗಿಸುತ್ತವೆ. ೧೯೫೧ರ ಗಣತಿಯನುಸಾರವಾಗಿ ಭಾರತದಲ್ಲಿ ೧೫೫೦ ಲಕ್ಷ ದನಗಳೂ ೪೩೦ ಲಕ್ಷ ಎಮ್ಮೆಗಳೂ ಇವೆ (ಇವುಗಳಲ್ಲಿ ಕೋಣಗಳ ಸಂಖ್ಯೆಯೂ ಸೇರಿದೆ). ಇಷ್ಟು ದೊಡ್ಡ ಸಂಖ್ಯೆಯಲ್ಲಿ ಈ ಪಶುಗಳನ್ನು ಪೋಷಿಸುವುದಕ್ಕೆ ಮೇವು ಮುಂತಾದುವು ದುರ್ದೈವದಿಂದ ಸಾಕಷ್ಟಾಗುವುದಿಲ್ಲ; ಆವಶ್ಯಕತೆಯ ೭೮ ಶತಾಂಶದಷ್ಟು ಮಾತ್ರ ಮೇವು ದೊರೆಯುತ್ತದೆ. ಹಿಂಡಿ, ಗೊಳಲಿ ಮುಂತಾದುವು ಕೇವಲ ೨೮ ಶತಾಂಶದಷ್ಟು ಆಗುವುದು. ಹಿಂಡುವ ಆಕಳು ಮತ್ತು ದುಡಿಯುವ ಎತ್ತುಗಳು ಇವುಗಳ ಕೊರತೆ ಸಾಕಷ್ಟು ಇದೆ; ಉಪಯೋಗಕ್ಕೆ ಬಾರದ ದನಗಳ ಸಂಖ್ಯೆಯೂ ಮಿತಿಮೀರಿದೆ. ಇಂತಹ ದನಗಳ ಅಸ್ತಿತ್ವದಿಂದ ಮೇವಿನ ಸಂಗ್ರಹದ ಮೇಲೆ ಅನಾವಶ್ಯಕ ಭಾರ ಬೀಳುತ್ತದೆ. ಇದರಿಂದ ದ್ವಿಮುಖ ಸಮಸ್ಯೆ ಕಾಣುವುದು : ಇದ್ದ ದನಗಳ ತಳಿ ಸುಧಾರಿಸುವುದು ;

ನಿರುಪಯೋಗಿಯಾದ ದನಗಳ ನಿರ್ಮೂಲನ ಮಾಡುವುದು. ತಳಿ ಸುಧಾರಣೆಯ ಕಾರ್ಯವು ಸರಕಾರದ ನೇತೃತ್ವದಲ್ಲಿಯೂ ಖಾಸಗಿ ವ್ಯಕ್ತಿಗಳ ನೇತೃತ್ವದಲ್ಲಿಯೂ ನಡೆಯುತ್ತಲಿದೆ. ಸದ್ಯಕ್ಕೆ ರಾಜ್ಯ ಸರಕಾರಗಳಿಂದ ವರುಷಕ್ಕೆ ೭೫೦ ಜಾತಿಹೋರಿಗಳನ್ನು ಬೇರೆ ಬೇರೆ ಪ್ರದೇಶಗಳಿಗೆ ಹಂಚಲಾಗುತ್ತಿದೆ. ಖಾಸಗಿ ಒಡೆತನದಲ್ಲಿದ್ದ ಜಾತಿಹೋರಿಗಳೂ ಇಷ್ಟೂ ಕೂಡಿ ಕೇವಲ ೦·೫ ಶತಾಂಶದಷ್ಟು ಬೇಡಿಕೆಯನ್ನು ಪೂರೈಸುತ್ತವೆ. ಇದರಿಂದ ತಳಿ ಸುಧಾರಣೆಯು ಪ್ರಗತಿ ಹೊಂದಿಲ್ಲ.

ಈ ಉದ್ದೇಶಕ್ಕಾಗಿ ಅಲ್ಲಲ್ಲಿ ಕೇಂದ್ರಗಳನ್ನು ಮಾಡಬೇಕೆಂದು ಮಾಡಲಾಗಿದೆ. ಮೂರು ನಾಲ್ಕು ಹಳ್ಳಿಗಳಿಗೊಂದು ಕೇಂದ್ರ ಮಾಡಿದರೆ ಸುಮಾರು ಮೂರು ವರುಷಗಳ ವಯಸ್ಸಿನ ೫೦೦ ಆಕಳುಗಳಾಗುವುವು. ಒಳ್ಳೇ ಸುಸ್ಥಿತಿಯಲ್ಲಿದ್ದ ಜಾತಿಯ ಮೂರು ನಾಲ್ಕು ಹೋರಿಗಳು ಮಾತ್ರ ತಳಿ ಬೆಳೆಸಲಿಕ್ಕೆ ಉಪಯೋಗಿಸಲ್ಪಡಬೇಕು. ಉಳಿದವುಗಳನ್ನು ಬಂಜೆಮಾಡಬೇಕು, ಇಲ್ಲವೆ ನಿರ್ಮೂಲನ ಮಾಡಬೇಕು. ಅವಶ್ಯಕಂಡಲ್ಲಿ ಕೃತ್ರಿಮ ಗರ್ಭಾಧಾನ ವ್ಯವಸ್ಥೆ ಮಾಡಬೇಕು. ಯೋಜನೆಯಲ್ಲಿ ಇಂತಹ ೬೦೦ ಗ್ರಾಮಕೇಂದ್ರಗಳನ್ನು ಸ್ಥಾಪಿಸಬೇಕೆಂದು ಇದೆ. ಕೃತ್ರಿಮ ಗರ್ಭಾಧಾನದ ವ್ಯವಸ್ಥೆಯುಳ್ಳ ೧೫೦ ಕೇಂದ್ರಗಳು, ೨೫ ಹೋರಿ ಬೆಳೆಸುವ ಕೇಂದ್ರಗಳು ವ್ಯವಸ್ಥೆ ಮಾಡಲ್ಪಡುವ ಯೋಜನೆಯಿದೆ. ಈ ಯೋಜನೆಯು ಫಲಕಾರಿಯಾಗುವಾಗ ವರುಷಕ್ಕೆ ೬೦೦೦೦ ಹೋರಿಗಳ ಉತ್ಪಾದನೆಯಾಗುವುದೆಂದು ಅಂದಾಜು ಮಾಡಲಾಗಿದೆ. ಈಗಾಗಲೇ ೧೫೦ ಗ್ರಾಮಕೇಂದ್ರಗಳೂ ೬೦ ಕೃತ್ರಿಮ ಗರ್ಭಾಧಾನ ಕೇಂದ್ರಗಳೂ ಕಾರ್ಯ ಮಾಡುತ್ತಲಿವೆ.

ನಿರುಪಯೋಗಿಯಾಗಿರುವ ದನಗಳನ್ನು ಪ್ರತ್ಯೇಕಿಸಿ ಅರಣ್ಯದಲ್ಲಿ ಕಟ್ಟಲಾದ ಗೋಸದನಕ್ಕೆ ಕಳಿಸಲಾಗುವುದು; ಎತ್ತುಗಳನ್ನು ಬಂಜೆ ಮಾಡಲಾಗುವುದು. ಕಾಲಾಂತರದಲ್ಲಿ ಸತ್ತ ಪಶುಗಳ ಚರ್ಮ, ಕೋಡು ಮುಂತಾದವುಗಳನ್ನು ಹದಮಾಡಿ ಉಪಯೋಗಿಸಲಾಗುವುದು. ೯೭ ಲಕ್ಷ ರೂಪಾಯಿ ವೆಚ್ಚಮಾಡಿ ಇಂತಹ ೧೬೦ ಗೋಸದನಗಳನ್ನು ಅಲ್ಲಲ್ಲಿ ಸ್ಥಾಪಿಸುವ ಸೂಚನೆ ಮಾಡಲಾಗಿದೆ.

ತಳಿಗಳು ಸುಧಾರಿಸುತ್ತ ಹೋಗಬೇಕಾದರೆ ಅವುಗಳ ಆಹಾರವು ಸತ್ವಯುತವಾಗಬೇಕು. ಹಸಿರು ಬೆಳೆಯಿಸಿ ಅವುಗಳಿಗೆ ಮೇವು ಒದಗಿಸಬೇಕು. ವಿಪುಲವಾಗಿ ಬೆಳೆಯಬಹುದಾದ ಹುಲ್ಲುಗಳ ಮಾದರಿಗಳನ್ನು ಗುಡ್ಡದ ಓರೆಗಳಲ್ಲಿ ಬೆಳೆಯಿಸಬೇಕೆಂದಿದೆ. ಎಣ್ಣೆ ಹಿಂಡಿಯನ್ನು ಗೊಬ್ಬರವೆಂದು ಉಪಯೋಗಿಸುವುದನ್ನು ಬಿಟ್ಟು ದನಗಳಿಗೆ ಹಾಕುತ್ತ ಹೋಗುವ ಪರಿಪಾಠವೂ ಅನುಕೂಲತೆಯೂ ಆಗಬೇಕು. ಇದಲ್ಲದೆ, ದನಗಳಿಗೆ ರೋಗಗಳು ಅಂಟದಂತೆಯೂ ನೋಡಬೇಕು. ವರುಷಕ್ಕೆ ಸಾಯುವ ದನಗಳ ಸಂಖ್ಯೆಯಲ್ಲಿ ೬೦ ಶತಾಂಶ ದನಗಳು ದನಗಳ ಬೇನೆ (ರಿಂಡರ ಪೆಸ್ಟ)ಯಿಂದ ಸಾಯುವುವು. ಹೊಸದಾಗಿ ಶೋಧಿಸಲ್ಪಟ್ಟ ಲಾಪಿನಾಯಿಸ್ಡ ವ್ಯಾಕ್ಸೀನದ ಉಪಯೋಗದಿಂದ ಈ ರೋಗವನ್ನು ಪ್ರತಿಬಂಧಿಸಲು ೧೫·೭ ಲಕ್ಷ ರೂಪಾಯಿಗಳನ್ನು ಮೀಸಲಾಗಿಡಲಾಗಿದೆ. ಪಶುವೈದ್ಯಾಲಯಗಳನ್ನು ಹೆಚ್ಚಿಸಬೇಕೆಂದು ಮಾಡಿದ ಯೋಜನೆಯ ಕಾಲಾವಧಿಯಲ್ಲಿ ಹೆಚ್ಚಾಗುವ ೬೪೦ ಪಶುವೈದ್ಯಾಲಯಗಳನ್ನು ಹಿಡಿದರೆ ದೇಶದಲ್ಲಿ ಒಟ್ಟು ೨೬೪೨ ಪಶುವೈದ್ಯಾಲಯಗಳು ಆಗುವುವು.

ಗ್ರಾಮಗಳಲ್ಲಿಯ ಬಡವರ್ಗದವರು ಕೋಳಿಸಾಕುವ ಉದ್ಯೋಗವನ್ನು ಕೈಕೊಂಡರೆ, ಅದು ಉಪಯುಕ್ತವೂ ಧನದಾಯಿಯೂ ಆಗುವುದು. ತತ್ತಿಯು ಪೋಷಕ ಆಹಾರವೂ ಆಗುವುದು. ಸದ್ಯಕ್ಕೆ ಭಾರತದಲ್ಲಿಯ ಕೋಳಿ ಸಂಖ್ಯೆಯು ೭೦೦ ಲಕ್ಷ ಇದೆ. ಹಳ್ಳಿಯ ಸಾಮಾನ್ಯ ಸಣ್ಣ ಕೋಳಿಯು ವರುಷಕ್ಕೆ ಸುಮಾರು ಸಣ್ಣ ಆಕಾರದ ೫೦ ತತ್ತಿಗಳನ್ನು ಇಡುತ್ತದೆ. ಭಾರತದಲ್ಲಿ ನಡೆಸಲಾದ ಸಂಶೋಧನೆಯಿಂದ ಕಂಡ ಪದ್ಧತಿಯಿಂದ ಇವುಗಳ ಜಾತಿ ಸುಧಾರಿಸಿದರೆ ವರುಷಕ್ಕೆ ೧೦೨ ತತ್ತಿಗಳನ್ನು ಇಡಬಹುದು. ಕೋಳಿ ಸಾಕುವ ವ್ಯವಸಾಯಕ್ಕೆ ಉತ್ತೇಜನ ಕೊಡಲು ಯೋಜನೆಯಲ್ಲಿ ೨೫·೧೫ ಲಕ್ಷ ರೂಪಾಯಿಗಳನ್ನು ಮೀಸಲಾಗಿಟ್ಟಿದೆ.

ಕುರಿ ಸಾಕುವುದು ಒಳ್ಳೆಯ ಸಾಧನ—ಉಣ್ಣೆಗೂ ಮಾಂಸಕ್ಕೂ. ಭಾರತದಲ್ಲಿ ಈಗ ೩೯೦ ಲಕ್ಷ ಕುರಿಗಳಿವೆ. ಸರಾಸರಿ ೫೫೨ ಲಕ್ಷ ಪೌಂಡು

ಉಣ್ಣೆಯು ವಾರ್ಷಿಕವಾಗಿ ಉತ್ಪಾದನವಾಗುತ್ತದೆ. ಮತ್ತು ಇದರಲ್ಲಿ ಸುಮಾರು ೩೧೬ ಲಕ್ಷ ಪೌಂಡು ನಿರ್ಯಾತವಾಗುತ್ತದೆ. ಇದರ ಬೆಲೆ ಸುಮಾರು ೪·೩ ಕೋಟಿ ರೂಪಾಯಿ ಆಗುವುದು. ಭಾರತದಲ್ಲಿ ಕುರಿಯು ಸಾಮಾನ್ಯವಾಗಿ ಎರಡು ಪೌಂಡುಗಳಷ್ಟು ಉಣ್ಣೆ ಕೊಡುತ್ತದೆ. ಉಳಿದ ದೇಶಗಳ ಪ್ರಮಾಣ ನೋಡಿದರೆ ಇದು ತೀರ ಕೆಳಮಟ್ಟದ್ದು. ಕುರಿಗಳ ಜಾತಿ ಆರೈಕೆ ಸುಧಾರಿಸಿದರೆ ಉಣ್ಣೆಯ ಉತ್ಪಾದನವು ಸಾಕಷ್ಟು ಹೆಚ್ಚಾಗುವುದು. ಜಾತಿ ಸುಧಾರಿಸುವ ಕೇಂದ್ರಗಳನ್ನು ಉತ್ತರ ಪ್ರದೇಶ, ರಾಜಸ್ಥಾನ ಮತ್ತು ದಕ್ಷಿಣದ ತಪ್ಪಲು ಪ್ರದೇಶಗಳಲ್ಲಿ ತೆರೆಯುವ ವ್ಯವಸ್ಥೆ ಮಾಡಲಾಗಿದೆ.

ಈ ದೃಷ್ಟಿಯಿಂದ ಪಶುಸಂಗೋಪನದಲ್ಲಿ ಸುಧಾರಣೆಯಾಗಬೇಕಾದರೆ ಪಶುವೈದ್ಯಕದ ಶಿಕ್ಷಣ ಮತ್ತು ಸಂಶೋಧನೆಯು ಹೆಚ್ಚಾಗಬೇಕು. ಈಗ ಭಾರತದಲ್ಲಿ ಒಂಬತ್ತು ಪಶುವೈದ್ಯಕದ ಕಾಲೇಜುಗಳಿವೆ. ಅಲ್ಲಿ ವರುಷಕ್ಕೆ ೨೭೫ ವಿದ್ಯಾರ್ಥಿಗಳು ಪದವೀಧರರಾಗುತ್ತಾರೆ. ಇಜ್ಜತ ನಗರದಲ್ಲಿ ಸ್ನಾತಕೋತ್ತರ ಶಿಕ್ಷಣದ ವ್ಯವಸ್ಥೆಯೂ ಮುಕ್ತೇಶ್ವರದಲ್ಲಿ ಉಪಕೇಂದ್ರವೂ ಇದೆ. ಪಶುವೈದ್ಯಕದ ಶಿಕ್ಷಣದ ವಿಸ್ತರಣಕ್ಕೆ ಯೋಜನೆಯಲ್ಲಿ ೪೪·೫೩ ಲಕ್ಷ ರೂಪಾಯಿ ವ್ಯವಸ್ಥೆ ಮಾಡಲಾಗಿದೆ.

ಪಶುಸಂಗೋಪನದ ಯೋಜನೆಯಲ್ಲಿ ಒಟ್ಟು ೧,೪೭೨·೯೨ ಲಕ್ಷ ರೂಪಾಯಿಗಳ ವೆಚ್ಚ ಮಾಡಲಾಗುತ್ತಿದೆ. ಅದರ ವಿವರ ಹೀಗಿದೆ :

ಅ. ಕೇಂದ್ರ ಸರಕಾರ :

| | | | |
|---|---|---|---|
| (೧) | ಗ್ರಾಮಕೇಂದ್ರಗಳಲ್ಲಿ | ೨೯೩·೫೩ | ಲಕ್ಷ ರೂಪಾಯಿ |
| (೨) | ಗೋಸದನ | ೯೭·೧೫ | ,, |
| (೩) | ದನಗಳ ಬೇನೆ | ೧೫·೭೦ | ,, |
| (೪) | ಉಳಿದ ಯೋಜನೆಗಳು | ೫·೭೪ | ,, |
| | ಒಟ್ಟು | ೪೧೨·೦೨ | ,, |

ಬ ರಾಜ್ಯಸರಕಾರಗಳು :

| | | | |
|---|---|---|---|
| (೧) | 'ಅ' ರಾಜ್ಯಗಳು | ೭೯೪·೭೦ | ಲಕ್ಷ ರೂಪಾಯಿ |
| (೨) | 'ಬ' ರಾಜ್ಯಗಳು | ೧೯೪·೬೦ | ,, |
| (೩) | 'ಕ' ರಾಜ್ಯಗಳು | ೭೧·೬೦ | ,, |
| | ಒಟ್ಟು | ೧೦೬೦·೯೦ | ,, |

ಎರಡೂ ಸೇರಿ ೧೪೭೩·೯೨ ಲಕ್ಷ ರೂಪಾಯಿ

## ಹೈನ ಮತ್ತು ತೋಟಗಾರಿಕೆ

ಶಾಕಾಹಾರಿಗಳು ಬಹುಸಂಖ್ಯಾಕರಾಗಿರುವ ಭಾರತದಲ್ಲಿ ಹಾಲು ಆಹಾರದ ಮಹತ್ವದ ವಸ್ತುವಾಗುವುದು ಸ್ವಾಭಾವಿಕ. ಆದರೂ ಹೈನವು ಇಲ್ಲಿಯಷ್ಟು ಬೇರೆ ಎಲ್ಲಿಯೂ ಅಲಕ್ಷಿಸಲ್ಪಟ್ಟಿಲ್ಲ. ಪ್ರತಿಯೊಂದು ಆಕಳು ಸರಾಸರಿ ಸುಮಾರು ೪೧೩ ಪೌಂಡು ಹಾಲು ಕೊಡುತ್ತದೆ. ಈ ಪ್ರಮಾಣವು ಪ್ರಪಂಚದಲ್ಲಿಯೆ ತೀರ ಕೆಳಮಟ್ಟದ್ದು. ೧೯೫೧ರ ಗಣತಿಯ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಗೆ ಸರಾಸರಿ ೫·೫ ಔನ್ಸದಷ್ಟು ಹಾಲು ಇಲ್ಲವೆ ಹೈನದ ಪ್ರಮಾಣ ಬೀಳುತ್ತದೆಂದು ಕಂಡುಬಂದಿದೆ—ಅಂದರೆ ದಿನಕ್ಕೆ ೧/೬ ಸೇರಿನಷ್ಟು ಆಗುವುದು. ಆಹಾರವಿಜ್ಞಾನ ಪರಿಣತರು ಸೂಚಿಸಿದ ದಿನಕ್ಕೆ ೧೦ ಔನ್ಸದ ಕೆಳಮಿತಿಯ ಪ್ರಮಾಣವನ್ನು ಹಿಡಿದರೂ ಪಂಜಾಬ ಮತ್ತು ರಾಜಸ್ಥಾನ ಇವೆರಡನ್ನು ಬಿಟ್ಟರೆ ಉಳಿದ ಎಲ್ಲ ರಾಜ್ಯಗಳಲ್ಲಿ ಹಾಲಿನ ಬಳಕೆಯಲ್ಲಿ ಕೊರತೆ ಕಂಡುಬರುವುದು. ಹಳ್ಳಿಯಲ್ಲಿನ ಹಾಲಿನ ಉತ್ಪಾದನವು ಬಹಳ ಕಡಿಮೆ ಯಿದ್ದು ಅದೂ ಹರಿದು ಹಂಚಿಹೋದಂತಾಗಿ ಒಂದೊಂದು ಹಳ್ಳಿಗೆ ಸರಾಸರಿ ೨·೫ ಮಣ ಹಾಲು ಉತ್ಪಾದನವಾಗುತ್ತದೆಂದು ಹೇಳಬಹುದು. ಇಷ್ಟಾಗಿ ಕೆಲವೆಡೆಯಲ್ಲಿ ಬಳಸದೆ ಉಳಿದ ಹಾಲು ತುಪ್ಪ ಇಲ್ಲವೆ ಖೋವೆ ತಯಾರು ಮಾಡಲಿಕ್ಕೆ ಉಪಯೋಗಿಸಲ್ಪಡುತ್ತದೆ.

ಹಾಲು, ಹೈನದ ಬೇಡಿಕೆ ಪಟ್ಟಣಗಳಲ್ಲಿ ಹೆಚ್ಚಾಗಿದೆ; ಗುಣದ ದೃಷ್ಟಿಯಿಂದ ಮತ್ತು ಪ್ರಮಾಣದ ದೃಷ್ಟಿಯಿಂದ ಅಲ್ಲಿಯ ಪೂರೈಕೆಯು

ಅಸಮಾಧಾನಕಾರಕವಾಗಿದೆ. ಮುನಿಸಿಪಲ್ ಕ್ಷೇತ್ರದಲ್ಲಿರುವ ದನಗಳಿಂದಲೇ ಸುಮಾರು ೭೦ ಶತಾಂಶ ಬೇಡಿಕೆಯ ಪೂರೈಕೆಯಾಗುವುದು. ಈ ದನಗಳು ಅನಾರೋಗ್ಯಕರ ವಾತಾವರಣದಲ್ಲಿಡಲ್ಪಟ್ಟಿರುವುದರಿಂದ ಅವುಗಳು ಹಾಲು ಕೊಡುವುದೂ ಕಡಿಮೆಯಾಗುವುದು; ಅವುಗಳಿಂದ ಒಳ್ಳೆಯ ತಳಿಯೂ ಬೆಳೆಯದು. ಅವು ಬರಡಾದ ಹಾಗೆಲ್ಲ ಕಸಾಯಿಖಾನೆಗೆ ಅಟ್ಟಲ್ಪಡುವುವು. ಈ ರೀತಿಯಾಗಿ ಸಾಕಲ್ಪಟ್ಟ ದನಗಳು ಆರ್ಥಿಕ ದೃಷ್ಟಿಯಿಂದಲೂ ದೇಶದ ದನಗಳ ಸಂಪತ್ತಿನ ದೃಷ್ಟಿಯಿಂದಲೂ ಅಹಿತಕಾರಿಯಾಗುವುವು. ಪಟ್ಟಣಗಳಿಗೆ ಬೇಕಾಗುವ ಉಳಿದ ೩೦ ಶತಾಂಶದಷ್ಟು ಹಾಲು ನೆರೆಯ ಹಳ್ಳಿಯಿಂದ ಬರುತ್ತದೆ. ಹಳ್ಳಿಯ ಹಾಲು ಪಟ್ಟಣ ಮುಟ್ಟುವತನಕ ಅದು ಅಶುದ್ಧ ಮತ್ತು ಗುಣಹೀನವಾಗುವಂತಾಗಿರುವುದು, ಮಾರಾಟಗಾರರ ಕೈಗೆ ಸಿಕ್ಕು. ಇಂತಹ ಗುಣಹೀನ ಹಾಲಿಗೂ ಪಟ್ಟಣಿಗರು ಹೆಚ್ಚಾದ ಬೆಲೆ ತೆರಬೇಕಾಗುವುದು. ಉಳಿದ ದೇಶಗಳಕಿಂತ ಭಾರತದಲ್ಲಿಯ ಕಿರುಕಳ ಹಾಲಿನ ಬೆಲೆಯು ಹೆಚ್ಚಾಗಿದೆ.

ಹಾಲಿನ ಪೂರೈಕೆಯಲ್ಲಿ ಸುಧಾರಣೆಯಾಗಬೇಕಾದರೆ ಉತ್ಪಾದನೆ ಹೆಚ್ಚಬೇಕು. ರಾಜ್ಯ ಸರಕಾರಗಳ ಯೋಜನೆಯ ಪ್ರಕಾರ ಬೇರೆ ಬೇರೆ ೨೭ ಯೋಜನೆಗಳಿದ್ದು ಅದರ ವೆಚ್ಚದ ಅಂದಾಜು ೭೫೦ ಲಕ್ಷ ರೂಪಾಯಿಗಳಾಗುವುದು. ಇದರಿಂದ ಮುಂಬಯಿ ಪಟ್ಟಣವೊಂದನ್ನು ಬಿಟ್ಟರೆ ಉಳಿದ ಯಾವ ದೊಡ್ಡ ಪಟ್ಟಣಗಳಿಗೂ ಯೋಗ್ಯ ಹಾಲಿನ ಪೂರೈಕೆಯಾಗದು. ಈ ಸಮಸ್ಯೆಯನ್ನು ಕೇವಲ ಸರಕಾರದವರೇ ಬಿಡಿಸಬೇಕೆಂದರೆ ಆಗದು. ರಾಜ್ಯಸರಕಾರ, ಸ್ಥಾನಿಕ ಸಂಸ್ಥೆಗಳು, ಪಾಂಜರಪೋಳ, ಗೋಶಾಲಾ, ಉತ್ಪಾದಕರ ಸಹಕಾರಿ ಸಂಘಗಳು ಮುಂತಾದವರು ಮುಂದೆ ಬಂದು ಸಹಕರಿಸಬೇಕು. ದಿಲ್ಲಿ ಮತ್ತು ಪುಣೆಯಲ್ಲಿ ಸಹಕಾರಿ ಸದ್ಧತಿಯ ಮೇಲೆ ನಡಸಿದ ಹಾಲಿನ ಉತ್ಪಾದನ ವಿತರಣವು ಅಭಿವೃದ್ಧಿಯ ದಾರಿ ತೋರಿಸಲು ಸಮರ್ಥವಾಗಿದೆ. ಪ್ರತಿಯೊಂದು ಪಟ್ಟಣದಲ್ಲಿ ಒಂದು ಹಾಲಿನ ಸಮಿತಿಯು ಏರ್ಪಡಾಗಬೇಕು. ಅದಕ್ಕೆ ಶಾಸನದ ಆಧಾರ ಸಹಾಯವಿರಬೇಕು. ಅದರಲ್ಲಿ ಉತ್ಪಾದಕರು, ವಿತರಣಕಾರರು, ಮುನಿಸಿಪಾಲಟಿ, ಬಳಕೆಗಾರರು,

ಆರೋಗ್ಯ ಅಧಿಕಾರಿಗಳು ಮತ್ತು ರಾಜ್ಯ ಸರಕಾರದ ಪ್ರತಿನಿಧಿಗಳು ಇರಬೇಕು. ನಗರ ಮತ್ತು ಉಪನಗರಗಳಲ್ಲಿ ಒಂದು ಸಹಕಾರಿ ಸಂಘದ ಮುಖಾಂತರ ಮೇವು, ಹಿಂಡಿ, ಇತರ ವಸ್ತುಗಳು, ದನ ಕೊಳ್ಳಲು ಸಾಲ, ಮುಂತಾದವುಗಳ ವ್ಯವಸ್ಥೆ ಮಾಡಿ ಹಾಲಿನ ಉತ್ಪಾದನೆ ಹೆಚ್ಚಿಸುವ ಮತ್ತು ಅದನ್ನು ಯೋಗ್ಯ ರೀತಿಯಲ್ಲಿ ವಿತರಣ ಮಾಡುವ ಹೊಣೆಯನ್ನು ಈ ಸಮಿತಿ ಹೊರಬೇಕು. ಸರಕಾರ, ಮುನಿಸಿಪಾಲಿಟಿ ಮತ್ತು ಸಹಕಾರಿ ಬ್ಯಾಂಕು ಇವು ಆರ್ಥಿಕ ಸಹಾಯ ಮಾಡಬೇಕು. ಸಮಿತಿಯು ಹಾಲಿನ ಗುಣ ಮತ್ತು ಬೆಲೆ ಇವುಗಳ ನಿಯಂತ್ರಣ ಮಾಡಬೇಕು. ಪಟ್ಟಣಗಳಿಗೆ ಈ ಸೂಚನೆಯಿಂದ ಲಾಭವಾಗುವುದು; ಆದರೆ ಹಳ್ಳಿಗಳಲ್ಲಿಯ ಹಾಲಿನ ಉತ್ಪಾದನೆಯು ಒಕ್ಕಲುತನ ಪ್ರಗತಿಯನ್ನೇ ಅವಲಂಬಿಸಿದೆ.

## ತೋಟಗಾರಿಕೆ

ಹಾಲಿನಂತೆ ಹಣ್ಣು ಹಂಪಲ, ಪಲ್ಲೆಕಾಯಿ ಇವೂ ಆಹಾರದಲ್ಲಿ ಉಪಯುಕ್ತ ಅಂಶಗಳಾಗಿವೆ. ಭಾರತದಲ್ಲಿ ವಾರ್ಷಿಕವಾಗಿ ೬೦ ಲಕ್ಷ ಟನ್ನು ಕಾಯಿಪಲ್ಲೆ ಬೆಳೆವುದೆಂದು ಕಂಡುಬಂದಿದೆ. ಇದರಿಂದ ಒಂದು ದಿನಕ್ಕೆ ಒಬ್ಬನು ೧·೫ ಔಂಸು ಹಣ್ಣು ಮತ್ತು ೧·೩ ಔಂಸು ಪಲ್ಲೆ ತಿನ್ನಲು ಸಾಧ್ಯವಾಗುವುದು. ಆದರೆ ಆಹಾರವಿಜ್ಞಾನ ಪರಿಣತರು ಮಾನವನು ೩ ಔಂಸು ಹಣ್ಣು ೧೦ ಔಂಸು ಪಲ್ಲೆ ತಿನ್ನಬೇಕೆಂದು ಹೇಳಿರುವರು—ಅಂದರೆ ಅದು ಸಮತೂಕ ಆಹಾರವಾಗುವುದು ಎಂದು ಅವರ ಮತ. ಆದುದರಿಂದ ಪಲ್ಲೆಕಾಯಿ ಮತ್ತು ಹಣ್ಣು ಬೆಳೆಯಲು ಸಾಕಷ್ಟು ಅವಕಾಶವಿದೆ; ಅಗತ್ಯವಿದೆ. ಇದನ್ನು ಭಾಗಶಃ ಬೆಳೆಯುವ ಕ್ಷೇತ್ರವ್ಯಾಪ್ತಿಯನ್ನು ಹೆಚ್ಚಿಸಿ ಮಾಡಬಹುದು; ಭಾಗಶಃ ಸುಧಾರಿಸಿದ ಸಾಗುವಳಿ ಪದ್ಧತಿ ಅನುಸರಿಸಿ ಹೆಚ್ಚಿನ ಉತ್ಪಾದನೆ ಮಾಡಿ ಮಾಡಬಹುದು. ಈ ತೋಟಗಾರಿಕೆಯ ಯೋಜನೆಗಳ ಮೇಲೆ ರಾಜ್ಯ ಸರಕಾರಗಳು ೧೨೧·೨೨ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಬೇಕೆಂದು ಮಾಡಿವೆ. ಈ ವೆಚ್ಚದಲ್ಲಿ ಬಹುಭಾಗ ಹಣ್ಣು-ಪಲ್ಲೆಗಳ ಬೆಳಗೆ, ಬೀಜ, ಮುಂತಾದವುಗಳ ಸಂಶೋಧನೆಗಾಗಿ ಇದೆ. ಹೆಚ್ಚಿನ ಬೆಳೆಗಾಗಿ ಈ ಮಾತುಗಳನ್ನು ಲಕ್ಷಿಸಬಹುದಾಗಿದೆ:

(೧) ಹಣ್ಣು ಬೆಳೆಯುವ ಕ್ಷೇತ್ರದಲ್ಲಿಯ ತೋಟಿಗರು ಸಸಿಗಳನ್ನು ಬೆಳೆಯಲು, ರೋಗ ನಿಯಂತ್ರಿಸಲು, ಮತ್ತು ಮಾರಾಟದ ವ್ಯವಸ್ಥೆ ಮಾಡಲು ಸಹಕಾರಿ ಪದ್ಧತಿಯನ್ನು ಅನುಸರಿಸಿ ಸಂಘಟಿತವಾಗಲು ನೆರವಾಗುವುದು.

(೨) ನಗರದ ಸುತ್ತುವಲಯದಲ್ಲಿರುವ ಉಪನಗರಗಳಲ್ಲಿ ಹಣ್ಣು-ಪಲ್ಲೆ ಬೆಳೆಯುವುದಕ್ಕೆ ಉತ್ತೇಜನ ಕೊಡಬೇಕು; ಅನುಕೂಲವಿದ್ದಲ್ಲಿ ಜನರು ಕೈತೋಟಗಳನ್ನು ಮಾಡಿಕೊಳ್ಳಲು ಬೀಜ ಸಸಿಗಳನ್ನು ಕೊಟ್ಟು ನೆರವಾಗುವುದು.

(೩) ಹಣ್ಣು ಮತ್ತು ಪಲ್ಲೆಗಳನ್ನು ಆಧುನಿಕ ಪದ್ಧತಿಯ ಮೇಲೆ ಕಾದಿಡಲು ಕಾರ್ಯವಿಸ್ತರಣವಾಗಬೇಕು.

## ಅರಣ್ಯಗಳು

ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಅರಣ್ಯಗಳಿಗೆ ಜೀವಾಳದ ಪಾತ್ರ ಇದೆ. ಉರುವಲಕ್ಕೆ ಮೂಲಸ್ಥಾನ; ದನಗಳಿಗೆ ಹುಲ್ಲುಗಾವಲು; ಅಲ್ಲದೆ, ಔದ್ಯೋಗಿಕ ಮತ್ತು ಕೃಷಿಕಾರ್ಯಕ್ಕಾಗಿ, ಮನೆಗಾಗಿ, ಕಟ್ಟಿಗೆ, ಬಿದಿರು, ಅರಗು, ಅಂಟು, ಮುಂತಾದವುಗಳನ್ನು ಅರಣ್ಯಗಳು ಒದಗಿಸುತ್ತವೆ ಭೂಮಿಯ ಫಲವತ್ತತೆಯನ್ನು ಕಾಯಿದುಕೊಳ್ಳಲೂ ಭೂಮಿಯಲ್ಲಿಯ ನೀರನ್ನು ಹಿಡಿದುಕೊಳ್ಳಲೂ ನೆರವಾಗುವುವು. ಗುಡ್ಡದ ಓರೆಯಲ್ಲಿರುವ ಮಣ್ಣು ಸವೆದು ಹೋಗದಂತೆ ನೋಡಿಕೊಳ್ಳುವುವು. ಬಯಲಿನಲ್ಲಿಯ ಭೂಮಿಯು ಸಿಡಿಯದಂತೆ ಮಾಡುವುವು.

೧೯೪೯-೫೦ರಲ್ಲಿ ಭಾರತದಲ್ಲಿಯ ಅರಣ್ಯಕ್ಷೇತ್ರವು ೧೪೭೭ ಲಕ್ಷ ಎಕರೆಯಷ್ಟು, ಅಂದರೆ ಭಾರತದ ಭೂಪ್ರದೇಶದ ೧೮ ಶತಾಂಶದಷ್ಟು ಇದ್ದಿತು. "ಭಾರತದ ಭೂಪ್ರದೇಶದ ೧/೩ ದಷ್ಟಾದರೂ ಅರಣ್ಯವಿರಬೇಕು" ಎಂದು ಅರಣ್ಯಧೋರಣೆಯು ಸೂಚಿಸಿದೆ. ಸದ್ಯಕ್ಕಿದ್ದ ಅರಣ್ಯಕ್ಷೇತ್ರ ಮತ್ತು ಸಾಧ್ಯವಾಗಬೇಕಿದ್ದ ಅರಣ್ಯಕ್ಷೇತ್ರಗಳಲ್ಲಿ ಅಂತರ ಬಹಳಿದೆ. ಈಗಿದ್ದ ಅರಣ್ಯಕ್ಷೇತ್ರದ ಬಹುಭಾಗವು ಹಿಮಾಲಯಗಳಲ್ಲಿ, ವಿಂಧ್ಯ ಪರ್ವತಗಳಲ್ಲಿ, ಡೆಕ್ಕನದಲ್ಲಿ ಇದೆ. ಸಿಂಧು ಗಂಗಾ ನದಿಗಳ ಭೂಮಿಯು ಬಯಲಾಗಿದೆ. ಈಗಿದ

ಬೀಳು ಭೂಮಿಯಲ್ಲಿ ಅರಣ್ಯ ಬೆಳೆಯಿಸಬೇಕು. ಆದರೆ ಒಕ್ಕಲುತನ ವಿಸ್ತರಣದ ಬೇಡಿಕೆಗೆ ಬೀಳು ಭೂಮಿಯು ಅಗತ್ಯವಾಗಿದೆ. ಒಂದಕ್ಕೊಂದು ಪೋಷಕವಾಗುವಂತೆ ಬೆಳೆಯಿಸುವ ಪದ್ಧತಿ ಅನುಸರಿಸಬೇಕಾಗಿದೆ. ಭೂಮಿಯ ಯೋಗ್ಯ ಉಪಯೋಗವಾಗುವಂತೆ ಪ್ರತಿಯೊಂದು ರಾಜ್ಯದಲ್ಲಿ ಎಷ್ಟು ಪ್ರಮಾಣದಲ್ಲಿ ಅರಣ್ಯಗಳು ಇರಬೇಕೆಂಬುದನ್ನು ಅರಣ್ಯಶಾಸ್ತ್ರದ ಕೇಂದ್ರ ಸಮಿತಿಯು ಸೂಚಿಸಬೇಕು. ಗೊತ್ತುಮಾಡಿದ ಪ್ರಮಾಣಕ್ಕಿಂತ ಹೆಚ್ಚಾಗಿದ್ದ ಕ್ಷೇತ್ರವನ್ನು ಶಾಶ್ವತ ಒಕ್ಕಲುತನದ ಕಾರ್ಯಕ್ಕಾಗಿ ಅರಣ್ಯಹೀನ ಮಾಡಬಹುದು.

ಅರಣ್ಯಕ್ಷೇತ್ರ ವಿಸ್ತರಣ ಕಾರ್ಯವು ದೀರ್ಘಾವಧಿ ಯೋಜನೆಯುಳ್ಳದ್ದು. ಆದರೆ ಈಗಾಗಲೆ ಕಾರಣಾಂತರದಿಂದ ಅರಣ್ಯಹೀನವಾದ ಕ್ಷೇತ್ರವನ್ನು ಪುನರುಜ್ಜೀವಿಸುವ ಕಾರ್ಯವನ್ನು ಮಾಡಬೇಕು; ಕೆಲವೆಡೆಯಲ್ಲಿ ಅಂದರೆ ಇದುವರೆಗೆ ಜಮೀನದಾರರ ವಶದಲ್ಲಿದ್ದ ಅರಣ್ಯಗಳ ಪೋಷಣೆ ಸಂರಕ್ಷಣೆ ಸರಿಯಾಗಿ ನಡೆಯುವಂತೆ ಮಾಡಬೇಕು. ಅಂದರೆ ಸುಮಾರು ೪೦೦ ಲಕ್ಷ ಎಕರೆ ಕ್ಷೇತ್ರವು ದೊರೆತಂತಾಗುವುದು. ಸಂಸ್ಥಾನಗಳ ವಿಲಯನದಿಂದ ರಾಜ್ಯಗಳ ಆಡಳಿತ ಕ್ಷೇತ್ರ ವಿಸ್ತಾರವಾದಲ್ಲೆಲ್ಲ ಹೊಸ ಆಡಳಿತ ವರ್ಗದ ವ್ಯವಸ್ಥೆಯಾಗಬೇಕು. ಯೋಜನೆಯಲ್ಲಿ ಇವುಗಳಿಗೆ ಅನುಕೂಲತೆ ಒದಗಿಸಿದೆ.

ಭೂಸವಕಳಿಯನ್ನು ತಡೆಯುವುದಕ್ಕೆ, ವೃಕ್ಷ ಭೂಮಿಯನ್ನು ವಿಸ್ತರಿಸುವುದಕ್ಕೆ ಮತ್ತು ಗ್ರಾಮಗಳ ಸುತ್ತುವಲಯದಲ್ಲಿ ಗಿಡ ನಡುವುದಕ್ಕೆ ಸಾಕಷ್ಟು ಅಪ್ಪದವಿದೆ. ವನಮಹೋತ್ಸವದ ಪ್ರಸಂಗಗಳ ಮುಖಾಂತರ ಗಿಡ ನಡುವ ಕಾರ್ಯವನ್ನು ಸಾರ್ವಜನಿಕರ ಮತ್ತು ಸ್ಥಾನಿಕ ಸಂಸ್ಥೆಗಳ ಸಹಕಾರದಿಂದ ಮುಂದುವರೆಸಬೇಕು. ಇದರಿಂದ ಉರುವಲದ ಕೊರತೆ ಎಷ್ಟೋ ದೂರಾಗುವುದು. ಉರುವಲದ ಕೊರತೆ ಕಡಿಮೆಯಾದಂತೆಲ್ಲ ಹಳ್ಳಿಗಳಲ್ಲಿಯ ಸಗಣಿಯು ಉರುವಲಕ್ಕೆ ಉಪಯೋಗವಾಗದೆ ಗೊಬ್ಬರಕ್ಕೆಂದು ದೊರೆಯುತ್ತಹೋಗುವುದು.

ಯುದ್ಧಕಾಲದಲ್ಲಿ ಮನೆಕಟ್ಟಿಗೆಯ ಉತ್ಪಾದನ ಹೆಚ್ಚಾಗಿತ್ತು. ಮಿತಿ ಮೀರಿ ಗಿಡಗಳನ್ನು ಕಡಿದುದೆ ಈ ಹೆಚ್ಚಿನ ಉತ್ಪಾದನದ ಕಾರಣ. ಸದ್ಯಕ್ಕೆ

ಗಳ ಲಕ್ಷ ಟನ್ನು ಮನೆಕಟ್ಟಿಗೆ ವರುಷಕ್ಕೆ ಉತ್ಪಾದನವಾಗುವುದು. ಆಯಾತ ಮಾಡಿದ ಮನೆಕಟ್ಟಿಗೆಯನ್ನು ಹಿಡಿದರೆ ಒಟ್ಟು ೨೧ ಲಕ್ಷ ಟನ್ನು ಬಳಕೆಗಾಗಿ ದೊರೆಯುತ್ತದೆ. ಇದರಲ್ಲಿ ಸುಮಾರು ೭೩ ಶತಾಂಶದಷ್ಟು ವೈಯಕ್ತಿಕ ಬಳಕೆಗಾರರು ಉಪಯೋಗಿಸುತ್ತಾರೆ. ಉಳಿದುದು ಸರಕಾರದಿಂದ ಉಪಯೋಗಿಸಲ್ಪಡುತ್ತದೆ. ಯುದ್ಧಕಾಲದಿಂದ ಮನೆಕಟ್ಟಿಗೆ ಸಂರಕ್ಷಣ ಉದ್ದೇಶಗಳಿಗಾಗಿ ಕಡಿಮೆ ಉಪಯೋಗವಾಗುತ್ತಲಿದೆ. ಆದರೆ ಪಟ್ಟಣಗಳ ಬೆಳಿಗೆಯ ಮೂಲಕ ಮನೆಗಳನ್ನು ಕಟ್ಟಲು ಹೆಚ್ಚಾಗಿ ಕಟ್ಟಿಗೆಯ ಬೇಡಿಕೆ ಉಂಟಾಗಿದೆ ಪುನರ್ನಿವೇಶನದ ಕಾರ್ಯದಲ್ಲಿಯೂ ಇದರ ಬೇಡಿಕೆ ಹೆಚ್ಚಾಗಿದೆ. ಕಟ್ಟಡಗಳಿಗೆ ಉಕ್ಕು ದೊರೆಯುವುದು ಕಠಿಣವಾಗಿದ್ದುದರಿಂದ ಅದರ ಬದಲು ಮನೆಕಟ್ಟಿಗೆಯನ್ನು ಬಳಸಲಾಗುತ್ತಿದೆ. ಆದುದರಿಂದ ಟೆಲೆಫೋನ, ಟೆಲೆಗ್ರಾಫ, ವಿದ್ಯುತ್‌ಶಕ್ತಿಗಳಿಗಾಗಿ ಕಟ್ಟಿಗೆ ಕಂಬಗಳನ್ನೆ ಬಳಸಬೇಕು. ಉಳಿದ ಯುರೋಪದೇಶಗಳಲ್ಲಿ ಈ ಬಗೆಯಿಂದ ಬಳಸಲಾಗುತ್ತಿದೆ. ಕಟ್ಟಿಗೆ ಕಂಬಗಳು ಸಿಕ್ಕುವುವು ಕೂಡ. ವರುಷಕ್ಕೆ ಸುಮಾರು ೫೦,೦೦೦ ಕಟ್ಟಿಗೆ ಕಂಬಗಳು ಅಂದಮಾನದಿಂದ ಮತ್ತು ಸುಮಾರು ೩೦,೦೦೦ ಕಟ್ಟಿಗೆ ಕಂಬಗಳು ಸುಂದರಬನ ಮತ್ತು ಮಹಾನದಿ ಕ್ಷೇತ್ರಗಳಿಂದ ದೊರೆವುದು ಶಕ್ಯವಿದೆ. ಈ ಬಗೆಯಾಗಿ ಉಪಯುಕ್ತತೆ ಹೆಚ್ಚುವುದರಿಂದ ಮನೆಕಟ್ಟಿಗೆಯ ಉತ್ಪಾದನವೂ ಹೆಚ್ಚಾಗುವಂತೆ ನೋಡುವುದು ಅಗತ್ಯವಾಗುವುದು. ರಾಜ್ಯ ಸರಕಾರಗಳ ಯೋಜನೆಗಳಲ್ಲಿ ೧೦೪ ಲಕ್ಷ ರೂಪಾಯಿಗಳನ್ನು ಕಾದಿಟ್ಟಿದ್ದು ಅದರಿಂದ ಅರಣ್ಯಗಳಲ್ಲಿ ಸಾರಿಗೆ ಸೌಕರ್ಯ ಒದಗಿಸಲು ಮತ್ತು ಇದುವರೆಗೆ ನಿಲುಕಲಾಗದ ಅರಣ್ಯಕ್ಷೇತ್ರಗಳ ಲಾಭ ಪಡೆಯಲು ಹಂಚಿಕೆಗಳನ್ನು ಹಾಕಲಾಗಿದೆ. ಇವೆಲ್ಲ ದೀರ್ಘಾವಧಿ ಯೋಜನೆಗಳೆಂದು ಅನ್ನಿಸಿದ್ದುದರಿಂದ ಸದ್ಯದ ಕೊರತೆ ತುಂಬಿಕೊಳ್ಳಲು ಬೇರೆ ಮಾದರಿಯ ಕಟ್ಟಿಗೆಗಳು—ಅವು ಅಷ್ಟು ಗಟ್ಟಿಯಿರುವುದಿಲ್ಲ, ಅದಕ್ಕಾಗಿ ಅವುಗಳನ್ನು ಭಟ್ಟಿಹಾಕಿ, ರಾಸಾಯನಿಕ ಚಿಕಿತ್ಸೆ ಕೊಟ್ಟು—ಉಪಯೋಗಿಸಲ್ಪಡಬೇಕೆಂದು ಸೂಚನೆ ಬಂದಿದೆ. ಈ ಉಪಾಯಗಳನ್ನು ಅನುಸರಿಸಿದರೆ ೧೦೦,೦೦೦ ಟನ್ನುಗಳಷ್ಟು ಹೆಚ್ಚಿಗೆ ಕಟ್ಟಿಗೆ ದೊರೆವುದು. ಉತ್ತರ ಅಂದಮಾನದಲ್ಲಿ ಅಭಿವೃದ್ಧಿ ಕಾರ್ಯ ಮಾಡಿದರೆ ಇನ್ನೂ ೧೦೦,೦೦೦ ಟನ್ನುಗಳಷ್ಟು ದೊರೆಯಬಹುದು.

ಜಮೀನುದಾರಿ ಕ್ಷೇತ್ರವಾಗಿ ಈಗ ಸರಕಾರದ ಅಧಿಕಾರಕ್ಕೆ ಬಂದ ಕ್ಷೇತ್ರಗಳಿಂದ ೬೦,೦೦೦ ಟನ್ನುಗಳಷ್ಟು ದೊರೆವುದು.

ಮನೆಕಟ್ಟಿಗೆ ಮತ್ತು ಉರುವಲವನ್ನು ಒದವಿಸುವುದಲ್ಲದೆ ಅರಣ್ಯಗಳು ಉದ್ಯಮಗಳಿಗೆ ಕಚ್ಚಾ ಸರಕುಗಳನ್ನು ಒದವಿಸುವುವು. ಕಡ್ಡಿಪೆಟ್ಟಿಗೆ, ಪ್ಲಾಯವುಡ್, ಕಾಗದ, ಕೃತಕ ರೇಶಿಮೆ ಮುಂತಾದ ಸರಕುಗಳ ಉದ್ಯಮಕ್ಕೆ ಅರಣ್ಯಸಂಪತ್ತು ಬಹುಉಪಯೋಗವಾಗುವುದು. ಕಡ್ಡಿಪೆಟ್ಟಿಗೆಯ ಉದ್ಯಮದ ವಿಸ್ತರಣಕ್ಕೆ ೧೯೫೫-೫೬ರಷ್ಟರಲ್ಲಿ ಅಂದಮಾನದಿಂದ ೪೫೦೦೦ ಟನ್ನುಗಳಷ್ಟು ಹೆಚ್ಚಿನ ಪೂರೈಕೆ ಮಾಡಲ್ಪಡುವುದು. ಪ್ಲಾಯವುಡ್ ಉದ್ಯಮದ ಬೆಳಗೆಗಾಗಿ ಅಂದಮಾನದಿಂದ ೩೦,೦೦೦ ಟನ್ನುಗಳಷ್ಟು ತರಿಸಬಹುದಾಗಿದೆ. ಮಾವಿನ ಮರಗಳಿಂದ ಸುಮಾರು ೨೦,೦೦೦ ಟನ್ನು ಹೆಚ್ಚಿಗೆ ದೊರೆಯಬಹುದಾಗಿದೆ. ಕಾಗದದ ತಯಾರಿಕೆಯಲ್ಲಿ ಬಿದಿರು ಮುಖ್ಯವಾದ ಅರಣ್ಯಉತ್ಪಾದನೆಯಾಗಿದೆ. ವೃತ್ತಪತ್ರಕಾಗದಕ್ಕಾಗಿ, ಕೃತಕ ರೇಶಿಮೆಗಾಗಿ ಹಿಮಾಲಯದಿಂದ ಫರ ಗಿಡಗಳ ತೊಲೆಗಳು ವಿಪುಲವಾಗಿ ಸಿಕ್ಕುವುವು. ಈ ವಸ್ತುಗಳ ತಯಾರಿಕೆಯಲ್ಲಿ ಹೊಸಕ್ರಮಗಳನ್ನು ಪ್ರಯೋಗಮಾಡಿ ನೋಡಲಾಗುತ್ತಿದೆ. ಉಳಿದ ಔದ್ಯಮಿಕ ಅರಣ್ಯಸರಕುಗಳಾದ ಅರಗು, ಅಂಟು, ವನಸ್ಪತಿ, ತೊಗಲು ಹದಮಾಡುವ ತೊಗಟೆ, ಇವುಗಳ ವಾರ್ಷಿಕ ಬೆಲೆಯು ೩೦೩ ಲಕ್ಷ ರೂಪಾಯಿಗಳಷ್ಟಾಗುವುದೆಂದು ಅಂದಾಜುಮಾಡಲಾಗಿದೆ. ಇವುಗಳಲ್ಲಿಯ ಅರಗು ಮತ್ತು ಮಾಯರೊಬಾಲನಗಳು ನಿರ್ಯಾತಕ್ಕಾಗಿ ಉಪಯೋಗ ಬೀಳುವುವು. ೧೯೫೦-೫೧ರಲ್ಲಿ ಅರಗಿನ ನಿರ್ಯಾತವು ೧೧.೬೭ ಕೋಟಿ ರೂಪಾಯಿಗಳಷ್ಟಾಗಿದೆ; ಮಾಯರೋಬಾಲನದ ನಿರ್ಯಾತವು ೧.೩೨ ಕೋಟಿ ರೂಪಾಯಿಗಳಷ್ಟಾಗಿದೆ.. ಇವುಗಳನ್ನು ಸರಿಯಾಗಿ ಕೂಡಿಸಿ ಕ್ರಮಗೊಳಿಸಿದರೆ ನಿರ್ಯಾತಕ್ಕೆ ಇನ್ನೂ ಕಳಿಸಬರುವುದು.

ರಾಜ್ಯಸರಕಾರಗಳ ಅರಣ್ಯಗಳಲ್ಲಿಯ ಹುಲ್ಲುಗಾವಲಿನಿಂದ ವರುಷಕ್ಕೆ ೯೫ ಲಕ್ಷ ರೂಪಾಯಿ ಆದಾಯವಾಗುತ್ತದೆ. ಇದು ಸುಮಾರು ೧೩೦ ಲಕ್ಷ ದನಗಳಿಗೆ, ೩೦ ಲಕ್ಷ ಎಮ್ಮೆಗಳಿಗೆ, ೯೦ ಲಕ್ಷ ಬೇರೆ ಪಶುಗಳಿಗೆ ಮೇವು (ಹುಲ್ಲು) ಒದಗಿಸುತ್ತದೆ. ಈ ಹುಲ್ಲುಗಾವಲಿನಲ್ಲಿ ದೊರೆಯುವ

ಸುಲಭ ದರದ ಸೌಕರ್ಯದಿಂದ ಜನರು ದನಗಳ ಸಂಖ್ಯೆಯನ್ನು ತಮ್ಮ ಯೋಗ್ಯತೆ ಮೀರಿ ಸಾಕುವ ಹವ್ಯಾಸ ಕಂಡುಬರುತ್ತಿದೆ. ಆದರ ಪರಿಣಾಮವಾಗಿ ಒಟ್ಟಿನಲ್ಲಿ ದನಗಳಿಗೆ ಸಾಕಷ್ಟು ಮೇವು ದೊರೆಯದೆ ಬಡಕಲೂ ಆಗುವುವು; ಕಾಲಾಂತರದಲ್ಲಿ ಅವುಗಳ ಸಂಖ್ಯೆಯೂ ಕಡಿಮೆಯಾಗುವುದು; ಅವುಗಳ ಸತ್ವಗುಣವೂ ಕಡಿಮೆಯಾಗುವುದು. ದನಗಳ ಅಭಿವೃದ್ಧಿಗೆ ಈ ಸುಲಭ ಸೌಕರ್ಯವು ಆತಂಕವಾಗಿದೆ. ಒಕ್ಕಲುತನದ ಮತ್ತು ಮನೆಯ ಹೈನದ ಅವಶ್ಯಕತೆಗಳಿಗೆ ಪೋಷಕವಾಗುವ ಮಟ್ಟಿಗೆ ಮಾತ್ರ ಅರಣ್ಯ ಹುಲ್ಲುಗಾವಲಿನ ಸೌಕರ್ಯ ಕೊಡಲ್ಪಡಬೇಕು. ಇದರ ಮೇಲ್ಪಟ್ಟು ಇರುವ ದನಗಳಿಗೆ ಆಯಾ ದನಗಳಿಂದ ಉತ್ಪಾದನವಾಗುವ ಸರಕಿನ ಬೆಲೆಯ ಮೇಲೆ ಬೀಳುವ ತೆರಿಗೆಯನ್ನು ಹೇರಬೇಕು. ರಾಯತವಾರೀ ಪದ್ಧತಿಯ ಒಕ್ಕಲುತನ ಕ್ಷೇತ್ರಗಳಲ್ಲಿಯ ಹುಲ್ಲುಗಾವಲು ಅಲಕ್ಷಿಸಲ್ಪಟ್ಟಿದ್ದು ಅದರ ಸಂರಕ್ಷಣೆಯ ವ್ಯವಸ್ಥೆಯಾದರೆ ದನಗಳು ಮೇಯಲು ಹೆಚ್ಚು ಕ್ಷೇತ್ರವು ದೊರೆವುದು.

ಅರಣ್ಯಗಳು ರಾಜ್ಯ ಸರಕಾರದ ಆಡಳಿತದಲ್ಲಿ ಬರುತ್ತಿದ್ದರೂ ಅರಣ್ಯ ಧೋರಣೆಯ ಸಂಬಂಧೀಕರಣಕ್ಕಾಗಿ ಕಣ್ಗಾರಿಕೆ ಇರುವುದು ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯ ದೃಷ್ಟಿಯಿಂದ ಅಗತ್ಯವಾಗಿದೆ. ಸಂಶೋಧನೆ ಮತ್ತು ಶಿಕ್ಷಣದ ಸರಿಯಾದ ವ್ಯವಸ್ಥೆಯೂ ಆಗಬೇಕು. ಡೆಹರಾಡೂನದಲ್ಲಿಯ ಅರಣ್ಯ ಸಂಶೋಧನ ಸಂಸ್ಥೆಯು ಬಹುಬೆಲೆಯುಳ್ಳ ಸಂಶೋಧನಗಳನ್ನು ಮಾಡಿದೆ. ಕ್ರಿಮಿಕೀಟಕ ರೋಗಗಳಿಂದ ಮನೆಕಟ್ಟಿಗೆ, ಬಿದಿರುಗಳನ್ನು ಕಾಪಾಡುವ ಪದ್ಧತಿಗಳನ್ನು ರೂಪಿಸಿದೆ. ಕಾಗದ, ಪ್ಲಾಯವುಡ್, ಅಂಟು, ತರ್ಪಣತೈಲ, ಸ್ಯಾಂಟೋನಿನ, ಮುಂತಾದ ಸರಕುಗಳನ್ನು ಸಿದ್ಧಪಡಿಸಲು ದಾರಿತೋರಿದೆ. ಅಲ್ಲಿಯ ಸಂಶೋಧನೆಗಳ ವಿವರವನ್ನು ಸಕಾಲದಲ್ಲಿ ಉದ್ಯೋಗದಲ್ಲಿ ಹಿತಸಂಬಂಧವುಳ್ಳವರಿಗೆ ಮುಟ್ಟುವ ಏರ್ಪಾಡಾಗುವುದು ಅವಶ್ಯವಿದೆ. ದಕ್ಷಿಣ ಭಾರತಕ್ಕೊಂದು ಇಂತಹ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸುವ ಅಗತ್ಯವು ಕಂಡುಬಂದಿದೆ.

ಈ ಅರಣ್ಯಕ್ಷೇತ್ರಗಳಲ್ಲಿ ಅನೇಕ ಹಿಂದುಳಿದ ಪಂಗಡಗಳು ಇವೆ. ಅವರು ಅಲ್ಲಿ ತಮ್ಮ ಉಪಜೀವನಕ್ಕಾಗಿ ಒಕ್ಕಲುತನ ಮಾಡಿಕೊಳ್ಳುವರು.

ಸಂಚಾರಿ ಜೀವನವುಳ್ಳ ಅವರು ಒಕ್ಕಲುತನ ಕ್ಷೇತ್ರವನ್ನು ಕಾಲಕಾಲಕ್ಕೆ ಬದಲಿಸುವರು. ಅಷ್ಟುಮಟ್ಟಿಗೆ ಅರಣ್ಯವು ಹಾಳುಮಾಡಲ್ಪಡುವುದು. ಅವರಿಗೆ ಬೇರೆ ಭೂಮಿಯನ್ನು ಕೊಟ್ಟು ಅವರು ಒಂದೆಡೆ ನೆಲಸುವಂತೆ ಮಾಡಿದರೆ ಹಿಂದುಳಿದ ವರ್ಗದ ಉಪಕಾರವೂ ಆಗುವುದು; ಅರಣ್ಯದ ಸಂರಕ್ಷಣೆಯೂ ಆಗುವುದು.

ಒಟ್ಟಿನಲ್ಲಿ ಅರಣ್ಯದ ಅಭಿವೃದ್ಧಿಯ ಕಾರ್ಯಕ್ರಮದಲ್ಲಿ ಈ ಬಗೆಯ ಪ್ರಾಥಮಿಕತೆ ಇದೆ :

(೧) ಅರಣ್ಯ ಆಡಳಿತವನ್ನು ಸುಭದ್ರಗೊಳಿಸುವುದು.

(೨) ಅರಣ್ಯದ ದುರ್ಲಾಭಪಡೆದ ಕ್ಷೇತ್ರಗಳನ್ನು ಪುನರುಜ್ಜೀವಿಸುವುದು.

(೩) ಭೂಸವಕಳಿಯಾದ ಕಡೆಗೆಲ್ಲ ಅರಣ್ಯ ಬೆಳೆಸುವುದು.

(೪) ಅರಣ್ಯಗಳಲ್ಲಿ ಸಾರಿಗೆ ಸಂಪರ್ಕವುಂಟಾಗಿಸುವುದು.

(೫) ಗ್ರಾಮಗಳ ವಲಯಗಳಲ್ಲಿ ಗಿಡಗಳನ್ನು ನೆಡುವುದು.

(೬) ಭಟ್ಟಿಗೆ ಹಾಕಿ, ರಾಸಾಯನಿಕ ಲೇಪ ಕೊಟ್ಟು ಸಾಮಾನ್ಯ ಕಟ್ಟಿಗೆಯನ್ನು ಉಪಯೋಗಕ್ಕೆ ತರುವುದು. ಇವರಿಂದ ಮನೆಕಟ್ಟಿಗೆಯ ಕೊರತೆಯನ್ನು ಹೋಗಲಾಡಿಸುವುದು.

ಇದನ್ನೆಲ್ಲ ಮಾಡುವುದಕ್ಕೆ ಈ ಕೆಳಗಿನಂತೆ ಯೋಜನೆಯಲ್ಲಿ ವೆಚ್ಚದ ವ್ಯವಸ್ಥೆ ಮಾಡಲಾಗಿದೆ :

| | | | |
|---|---|---|---|
| (೧) | ಅರಣ್ಯ ಅಭಿವೃದ್ಧಿ | ೬೧೧·೩ | ಲಕ್ಷ ರೂಪಾಯಿ |
| (೨) | ಆಡಳಿತ | ೨೪೯·೪ | ,, |
| (೩) | ಅರಣ್ಯ ಉದ್ಯಮಗಳು | ೪೯·೫ | ,, |
| (೪) | ಶಿಕ್ಷಣ ಮತ್ತು ತರಬೇತು | ೩೯·೩ | ,, |
| (೫) | ಸಂಶೋಧನೆ | ೧೦·೦ | ,, |
| | ಒಟ್ಟು | ೯೫೯·೫ | ಲಕ್ಷ ರೂಪಾಯಿ |

ಈ ವೆಚ್ಚದಲ್ಲಿ ಅರಣ್ಯ ಸಾರಿಗೆ ಸಂಪರ್ಕದ ಕಾರ್ಯ, ಭೂಸವಕಳಿ ತಡೆವುದು, ಸಮಾವೇಶವಾಗಿವೆ.

## ಭೂಸವಕಳಿ ತಡೆಯುವುದು.

ಭೂಸವಕಳಿ ತಡೆಯುವುದು ಎಂದರೆ ಕೇವಲ ಭೂಮಿಯ ಸವಕಳಿಯನ್ನು ತಡೆಯುವ ಉಪಾಯಗಳಷ್ಟೆ ಬರುವುದಿಲ್ಲ; ಭೂಮಿಯ ಫಲವತ್ತತೆಯನ್ನು ಉಚ್ಚ ಮಟ್ಟದಲ್ಲಿ ಕಾಯಿದುಕೊಳ್ಳುವ ಎಲ್ಲ ಉಪಾಯಗಳೂ ಅದರಲ್ಲಿ ಸಮಾವೇಶವಾಗುವುವು. ಆದರೆ ಇಲ್ಲಿ ಮುಖ್ಯವಾಗಿ ಭೂಮಿಯ ಸವಕಳಿಯನ್ನು ನಿಯಂತ್ರಿಸುವ ಬಗ್ಗೆ ಹೇಳಲಾಗಿದೆ. ಭೂಮಿಯ ಸವಕಳಿಯ ಮೂಲಕ ದೇಶದ ವಿಶಾಲಕ್ಷೇತ್ರವು ಗೀಳಾಗಿಹೋಗಿದೆ. ಮಳೆಯಿಂದ ಮೇಲಿನ ಪದರು-ಮಣ್ಣು ಹರಿದುಹೋಗುವುದು ಬಹು ದೊಡ್ಡ ಪ್ರಶ್ನೆಯಾಗಿದೆ ಕೊರಕಲು ಬಿದ್ದು ದುರಸ್ತಿಕಾಣದೆ, ಹಾನಿ ಹೆಚ್ಚಾಗುತ್ತಿದೆ. ಮರು ಪ್ರದೇಶದ ಸುತ್ತಲೂ ಬಿರುಗಾಳಿಯ ಹೊಡೆತಕ್ಕೆ ಸಿಕ್ಕ ನೆಲದ ಮಣ್ಣು ಹಾರಿಹೋಗುವುದು. ಅದರಿಂದ ಫಲವತ್ತಾದ ಭೂಪ್ರದೇಶವು ತಗ್ಗುತ್ತ ನಡೆದಿದೆ.

ಭೂಮಿಯ ಸವಕಳಿಗೆ ಅನೇಕ ಕಾರಣಗಳು. ಅವುಗಳಲ್ಲಿ ಅತಿ ಮುಖ್ಯವಾದುದು ಅರಣ್ಯಗಳು ನಾಶಮಾಡಲ್ಪಟ್ಟದ್ದು. ಅರಣ್ಯಗಳ ನಾಶದಿಂದ ಗುಡ್ಡದ ಓರೆಯಲ್ಲಿಯ ಗಿಡಗಳು ಇಲ್ಲವಂತಾಗಿ ಮಣ್ಣು ಹಿಡಿದುಕೊಳ್ಳುವ ಆಸರವೇ ಹೋಗಿಬಿಡುತ್ತದೆ. ಪಡಭೂಮಿಗಳ ಅಲಕ್ಷ್ಯದಿಂದ, ಹುಲ್ಲುಗಾವಲುಗಳಿಗೆ ಸರಿಯಾದ ಆರೈಕೆಗಳಿಲ್ಲದ ಮೂಲಕ, ಬೀಳು ಭೂಮಿಗಳನ್ನು ಸಂಪೂರ್ಣ ಕೈಬಿಟ್ಟದ್ದರಿಂದ ಭೂಮಿಯ ಸವಕಳಿ ವಿಪರೀತವಾಗಿದೆ. ಭೂಮಿಯ ಸವಕಳಿಯನ್ನು ನಿಯಂತ್ರಿಸುವುದಕ್ಕೆ ಈ ಕೆಳಗಿನ ಉಪಾಯಗಳು ಆವಶ್ಯಕವಾಗಿವೆ.

(೧) ಅರಣ್ಯಗಳನ್ನು ಬೆಳೆಸುವುದು ಮತ್ತು ವೈಜ್ಞಾನಿಕ ಪದ್ಧತಿಯಿಂದ ಅವುಗಳನ್ನು ಸಂರಕ್ಷಿಸುವುದು.

(೨) ಒಕ್ಕಲುತನದ ಪರಿಪಾಠಗಳಲ್ಲಿ ಸುಧಾರಣೆ ನಡಸಬೇಕು. ಇಳಿಜಾರಿನ ಭೂಮಿಗಳಲ್ಲಿ ದಂಡೆಗುಂಟ ರಂಟೆಹೊಡೆವುದು; ಸರಿಯಾದ ಕ್ರಮದಲ್ಲಿ ಬೆಳೆಗಳನ್ನು ಬೆಳೆವುದು; ಯೋಗ್ಯ ಗೊಬ್ಬರ, ರಾಸಾಯನಿಕ ಗೊಬ್ಬರಗಳನ್ನು ಬಳಸುವುದು; ಪಡಭೂಮಿ-ಬೀಳುಭೂಮಿಗಳ ಬಗ್ಗೆ ಲಕ್ಷ್ಯ ಹಾಕುವುದು.

(೩) ಅಲ್ಲಲ್ಲಿ ಒಡ್ಡುಗಳನ್ನು ಹಾಕುವುದು; ಗದ್ದೆಗಳಾದಿ ಮಾಡುವುದು; ಹೆಚ್ಚಾದ ನೀರಿಗೆ ಹರಿದುಹೋಗಲು ಅನುಕೂಲತೆ ಒದಗಿಸುವುದು; ಕೊರಕಲುಗಳನ್ನು ತುಂಬುವುದು. ಮುಂತಾಗಿ.

ಈಗಾಗಲೇ ಅನೇಕ ವರುಷಗಳಿಂದ ಕೆಲ ರಾಜ್ಯಗಳಲ್ಲಿ ಮೇಲಿನ ಉಪಕ್ರಮಗಳು ನಡೆದಿದ್ದರೂ ದೇಶವ್ಯಾಪಿಯಾಗಿ ಅವು ಬೆಳೆದಿಲ್ಲ, ಸಮಸ್ಯೆಯ ವ್ಯಾಪ್ತಿಯ ದೃಷ್ಟಿಯಿಂದ ಈಗ ಈ ಯೋಜನೆಯಲ್ಲಿ ಹೂಡಿದ ಕಾರ್ಯಕ್ರಮವು ಕ್ಷುಲ್ಲಕವೆನ್ನಿಸಬಹುದಾದರೂ ದೇಶವ್ಯಾಪಿಯಾದ ಕಾರ್ಯ ಪ್ರಾರಂಭ ಮಾಡುವುದರಿಂದ ಸಮಸ್ಯೆಯ ಪರಿಹಾರದ ಪ್ರಾರಂಭವಾಗುವುದೆಂದು ಹೇಳಬಹುದು. ಹಿನ್ನೆಲೆಯಾಗಿ ಆಗಬೇಕಾಗಿದ್ದ ಕಾರ್ಯವು ಸಾಕಷ್ಟಾಗಿ ಆಗಿರದ ಮೂಲಕ ಒಮ್ಮೆಲೆ ದೊಡ್ಡ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಆಗದು. ದೇಶದ ವಿಶಾಲ ಪ್ರದೇಶದಲ್ಲಿ ಎಲ್ಲಿ ಎಲ್ಲಿ ಯಾವ ಬಗೆಯ ಭೂಮಿ ಇದೆ, ಎಲ್ಲಿ ಎಷ್ಟು ಮತ್ತು ಯಾವ ವೇಗದಿಂದ ಸವಕಳಿ ನಡೆಯುತ್ತಿದೆ ಎಂಬ ಬಗ್ಗೆ ಸಾಕಷ್ಟು ಸುದ್ದಿ ಸಂಗತಿ ಅಂಕಿ ಸಂಖ್ಯೆಗಳು ಉಪಲಬ್ಧವಿಲ್ಲ; ತರಬೇತಿಹೊಂದಿದ ಇಲ್ಲವೆ ಅನುಭವಿಕರಾದ ಕಾರ್ಯಕರ್ತರ ಕೊರತೆಯೂ ಇದೆ. ಆದರೆ ಈ ಕೊರತೆಯನ್ನು ಯೋಜನೆಯ ಕಾಲಾವಧಿಯಲ್ಲಿ ಬಹು ಪಟ್ಟಿಗೆ ಹೋಗಲಾಡಿಸಲಾಗುವುದು. ಕೇಂದ್ರದಲ್ಲಿ, ರಾಜ್ಯಗಳಲ್ಲಿ ಸಂಶೋಧನ ಕೇಂದ್ರಗಳ ವ್ಯವಸ್ಥೆ ಮಾಡಲಾಗುವುದು. ಪ್ರತಿಯೊಂದು ರಾಜ್ಯಕ್ಕೆ ವಿಶಿಷ್ಟವಾದ ಸಮಸ್ಯೆಗಳನ್ನು ಆಯಾ ರಾಜ್ಯದವರು ಪರಿಶೀಲಿಸಿ ಪರಿಹಾರೋಪಾಯ ಕೈಕೊಳ್ಳುವಂತೆ ಭೂಸಂರಕ್ಷಣ ಸಮಿತಿಗಳನ್ನು ಏರ್ಪಡಿಸುವಂತೆ ಮಾಡಬೇಕಾಗಿದೆ. ಆಯಾ ಕ್ಷೇತ್ರಗಳಲ್ಲಿ ಪ್ರಯೋಗಗಳನ್ನು ನಡಸಬೇಕಾಗಿದೆ. ತಜ್ಞರ ನೆರವನ್ನು ಕೇಂದ್ರ ಸರಕಾರವು ರಾಜ್ಯಸರಕಾರಗಳಿಗೆ ಒದವಿಸುವ ಏರ್ಪಾಡು ಮಾಡಲಾಗಿದೆ. ಈ ಸಂಬಂಧದಲ್ಲಿ ರಾಜ್ಯಸರಕಾರಗಳು ಮಾಡಬಹುದಾದ ವೆಚ್ಚಕ್ಕೆ ಜೋಡಿಸುವಂತೆ ಕೇಂದ್ರ ಸರಕಾರವು ೨ ಕೋಟಿ ರೂಪಾಯಿಗಳನ್ನು ಮೀಸಲಾಗಿರಿಸಿದೆ.

ಒಕ್ಕಲಿಗರೇ ಮುಂದೆ ಬಂದು ಭೂಸವಕಳಿ ತಡೆಯುವುದಕ್ಕಾಗಿ ಸಹಕಾರೀ ಪದ್ಧತಿಯನ್ನು ಅವಲಂಬಿಸಿ ಸಂಘಟಿಸಿಕೊಳ್ಳಬೇಕು. ಇಂತಹ ಉದ್ದೇಶಗಳಿಂದ ಮಾಡಿದಂತಹ ಸಹಕಾರಿ ಸಂಘಗಳಿಗೆ ಸರಕಾರವು ತಾಂತ್ರಿಕ

ನೆರವನ್ನು, ಆರ್ಥಿಕ ನೆರವನ್ನು ಕೊಡುವುದು. ಖಾಸಗೀ ಒಡೆತನದ ಭೂಮಿಯಲ್ಲಿ ಸುಧಾರಣೆ ಕೈಕೊಳ್ಳಲು ಸರಕಾರಕ್ಕೆ ಅಧಿಕಾರ ಬರುವಂತೆ ಕಾನೂನುಗಳು ಆಗಬೇಕು. ಈ ದೃಷ್ಟಿಯಿಂದೆ ಸುಧಾರಣೆ ಮಾಡುವಾಗ ಆದ ವೆಚ್ಚವು ಒಕ್ಕಲಿಗರು ಮತ್ತು ಸರಕಾರ ಇವರಲ್ಲಿ ವಿಭಾಗಿತವಾಗುವಂತೆಯಾಗಬೇಕು.

ಡೆಹರಾಡೂನದಲ್ಲಿಯ ಅರಣ್ಯ ಸಂಶೋಧನ ಸಂಸ್ಥೆಯಲ್ಲಿ ಭೂಸವಕಳಿ ತಡೆವ ಪ್ರಾಯೋಗಿಕ ಭಾಗವನ್ನು ಜೋಡಿಸುವ ಅನುಕೂಲತೆ ಈ ಯೋಜನೆಯಲ್ಲಿ ಮಾಡಲಾಗಿದೆ. ದೇಶದ ಬೇರೆ ಬೇರೆ ಭಾಗಗಳಲ್ಲಿ ೬ ಬೇರೆ ಬೇರೆ ಕೇಂದ್ರಗಳನ್ನು ಪ್ರಾರಂಭಿಸಬೇಕೆಂದೂ ಅವರು ಅಲ್ಲಲ್ಲಿ ಪ್ರಾತ್ಯಕ್ಷಿಕೆಗಳನ್ನು ಕೊಡಬೇಕೆಂದೂ ಮಾಡಲಾಗಿದೆ. ಭೂಮಿಯ ಗುಣಲಕ್ಷಣಗಳ ಬಗ್ಗೆ ಅಖಿಲ ಭಾರತದ ತಳಹದಿಯ ಮೇಲೆ ಸರ್ವೆ ಆಗಬೇಕೆಂದೂ ಮಾಡಲಾಗಿದೆ. ಸರ್ವೆಯಲ್ಲಿ ಸಮಾನ ಕ್ರಮಪದ್ಧತಿಯಿರಬೇಕೆಂದು ಕೇಂದ್ರದವರೇ ಇದನ್ನು ಕೈಕೊಳ್ಳಬೇಕೆಂದು ಮಾಡಲಾಗಿದೆ. ಈ ಕಾರ್ಯ ಮಾಡುವಾಗ ರಾಜಸ್ಥಾನ ಮತ್ತು ಪಂಜಾಬ, ಉತ್ತರಪ್ರದೇಶ, ಸೌರಾಷ್ಟ್ರ, ಕಚ್ಛ ಈ ಪ್ರದೇಶಗಳಿಗೆ ಹೊಂದಿಕೊಂಡಿರುವ ಮರುಪ್ರದೇಶದ ಬಗ್ಗೆ ವಿಶೇಷ ಲಕ್ಷ್ಯವನ್ನು ಹಾಕಲಾಗುವುದು. ಇದರ ಸಲುವಾಗಿ ಜೋಧಪುರದಲ್ಲಿ ಮರುಪ್ರದೇಶದ ಸಂಶೋಧನ ಕೇಂದ್ರವನ್ನು ಸ್ಥಾಪಿಸಲಾಗಿದೆ. ಈ ಮರುಪ್ರದೇಶದ ಹಬ್ಬುಗೆಯು ಸುತ್ತಲಿನ ಎಲ್ಲ ರಾಜ್ಯಗಳ ಸಾಮಾನ್ಯ ಸಮಸ್ಯೆಯಾಗಿದೆಯಾದ್ದರಿಂದ ಆಯಾ ರಾಜ್ಯಗಳ ಪ್ರತಿನಿಧಿಗಳೂ ಕೇಂದ್ರದ ಪ್ರತಿನಿಧಿಯೂ ಇರುವ ಕಾರ್ಯ ಸಮಿತಿಯ ಏರ್ಪಾಡು ಆಗಿ ಅದರ ಮುಖಾಂತರ ಕಾರ್ಯ ನಡೆಯಬೇಕಾಗಿದೆ. ಅಲ್ಲದೆ ಮೇಲ್ಕಾಣಿಸಿದ ಕಾರ್ಯಕ್ರಮವು ವ್ಯವಸ್ಥಿತವಾಗಿ ನಡೆಯಬೇಕಾದರೆ, ಇನ್ನು ವಿಶಿಷ್ಟ ಕಾರ್ಯವ್ಯಾಪ್ತಿಯುಳ್ಳ ಬೇರೆ ತಾಂತ್ರಿಕ ಸಮಿತಿಗಳೂ ಏರ್ಪಾಡಾಗಬೇಕು.

## ಮೀನುಗಾರಿಕೆ

ಮೀನುಗಾರಿಗೆಯ ವ್ಯವಸಾಯದಿಂದ ರಾಷ್ಟ್ರೀಯ ಆದಾಯಕ್ಕೆ ವರುಷಕ್ಕೆ ಸುಮಾರು ೧೦ ಕೋಟಿ ರೂಪಾಯಿ ಬರುತ್ತದೆ. ಪ್ರೋಟೀನ್, ಜೀವಸಸತ್ವ ಮತ್ತು ಖನಿಜಕ್ಷಾರಗಳು ಸಮೃದ್ಧವಾಗಿರುವುದರಿಂದ ಮೀನು

ಉತ್ತಮ ಆಹಾರವಾಗಿದೆ. ದೇಶದಲ್ಲಿಯ ವ್ಯಾಪಕವಾದ ಕ್ಷೇತ್ರಗಳಲ್ಲಿ ಈಗಾಗಲೇ ಅದು ಆಹಾರದ ಮುಖ್ಯ ಅಂಗವಾಗಿಬಿಟ್ಟಿದೆ.

ಮೀನುಗಳ ಉತ್ಪಾದನೆಯ ವಿವರಗಳು ಈಗ ಸರಿಯಾಗಿ ದೊರೆಯುತ್ತಿಲ್ಲ. ಅಂಕಿಸಂಖ್ಯೆಗಳನ್ನು ಕಲೆಹಾಕಲು ಯೋಜನೆಯಲ್ಲಿ ಅದಕ್ಕಾಗಿ ೭ ಲಕ್ಷ ರೂಪಾಯಿ ತೆಗೆದಿಡಲಾಗಿದೆ. ಈಗ ಉಪಲಬ್ಧವಿದ್ದ ಅಂಕಿಸಂಖ್ಯೆಗಳನ್ನು ನೋಡಿದರೆ, ಮೀನುಗಳ ಉತ್ಪಾದನೆಯು ಸುಮಾರು ಹತ್ತು ಲಕ್ಷ ಟನ್ನುಗಳಷ್ಟು ಆಗುತ್ತಿದ್ದು ಅದರಲ್ಲಿಯ ಸುಮಾರು ೭೦ ಶತಾಂಶ ಸಮುದ್ರದಿಂದ, ೩೦ ಶತಾಂಶ ಸಿಹಿನೀರಿನಲ್ಲಿ ದೊರೆಯುತ್ತದೆ. ಈದಿನ ಪೂರೈಕೆಯಿಂದ ಪ್ರತಿ ತಲೆಗೆ ವರುಷಕ್ಕೆ ೩-೪ ಪೌಂಡಿನಷ್ಟು ಬೀಳುವುದು. ಸಮತೂಕ ಆಹಾರದ ಲೆಕ್ಕವನ್ನು ಹಿಡಿದರೆ ಪ್ರತಿದಿನ ಪ್ರತಿ ಪ್ರೌಢನಿಗೆ ೩ ಔಂಸುಗಳಷ್ಟಾದರೂ ಬೇಕು. ಅಂದರೆ ವರುಷಕ್ಕೆ ಒಬ್ಬನಿಗೆ ೬೮ ಪೌಂಡಿನಷ್ಟು ಬೇಕಾಗುವುದು. ಇದರಿಂದ ಬೇಡಿಕೆ ಪೂರೈಕೆಗಳಲ್ಲಿಯ ಅಂತರದ ಕಲ್ಪನೆ ಬರುವುದು.

ಒಳದೇಶದಲ್ಲಿಯ ಮೀನುಗಾರಿಕೆಯ ವ್ಯವಸಾಯ ಬೆಳೆಯಿಸುವುದಕ್ಕೆ ಜಲಸಂಚಯಗಳ ಪರೀಕ್ಷಣೆಯ ವರದಿಯು ಅವಶ್ಯವಾಗಿದೆ. ದೊಡ್ಡ ಪ್ರಮಾಣದಲ್ಲಿ ಉತ್ಪಾದನ ಮಾಡಲು ಮೀನುಮರಿಗಳ ಸಂಗ್ರಹದ ಬಗ್ಗೆಯೂ ಅವುಗಳ ಸ್ಥಾನಾಂತರದ ಬಗ್ಗೆಯೂ ವಿಚಾರಿಸಬೇಕು. ಬರಾಕಪೂರದಲ್ಲಿಯ ಒಳದೇಶ ಮೀನುಗಾರಿಕೆ ಸಂಶೋಧನ ಕೇಂದ್ರದವರ ಪ್ರಯೋಗಗಳಿಂದ, ಸ್ಥಾನಾಂತರದಲ್ಲಿ ಮೀನುಮರಿಗಳನ್ನು ಕಾಪಾಡುವ ಯೋಜನೆ ಮಾಡಲ್ಪಟ್ಟುದರಿಂದ ಅವುಗಳಲ್ಲಿಯ ಸಾವಿನ ಸಂಖ್ಯೆ ಕಡಿಮೆಯಾಗಿದೆ. ಜಲಸಂಚಯಗಳಲ್ಲಿ ಬೆಳೆಯುವ ಕೆಲ ಬಳ್ಳಿಗಳು ಮೀನುಗಳಿಗೆ ಮಾರಕವಾಗುವುದರಿಂದ ಅವುಗಳ ನಿರ್ಮೂಲನ ಸಾಧನಗಳಿಗಾಗಿ ಸಂಶೋಧನೆ ನಡೆಯುವುದು ಅಗತ್ಯವಾಗಿದೆ. ಒಳದೇಶದಲ್ಲಿಯ ಮೀನುಗಾರಿಕೆ ವ್ಯವಸಾಯ ವಿಕಾಸವಾಗದಿರಲು ಹಳ್ಳಿಯ ಕೆರೆಗಳ ಖಾಸಗಿ ಒಡೆತನದ ಹಕ್ಕುಗಳು ಕಾರಣವಾಗಿವೆ ಎಂದು ಕಂಡುಬಂದಿದೆ. ಇನ್ನೇನು ಈಗ ಜಮೀನುದಾರಿಯ ನಿರ್ಮೂಲನವಾಗಿದ್ದುದರಿಂದ ಈ ಕಾರಣದಿಂದ ಬಾಧೆ ಕಡಿಮೆಯಾಗಬಹುದಾಗಿದೆ. ಆ ಕೆರೆಗಳ ಒಡೆತನವು ರಾಜ್ಯ ಸರಕಾರಗಳ ಅಂತರ್ಗತವಾಗಿರುವುದರಿಂದ

ಮೀನುಗಾರಿಕೆ ವ್ಯವಸಾಯ ಅಭಿವೃದ್ಧಿ ಮಾಡುವುದು ರಾಜ್ಯ ಸರಕಾರಗಳನ್ನೇ ಕೂಡಿದೆ. ಒಳದೇಶದಲ್ಲಿಯ ಮೀನುಗಾರಿಕೆಯು ವಿಶಾಲವಾದ ಕ್ಷೇತ್ರದಲ್ಲಿ ಹರಿದು ಹಂಚಿಹೋಗಿರುವುದರಿಂದ ವಿಸ್ತರಣ ಸೇವೆಯು ಆವಶ್ಯಕವಾಗಿದೆ. ಈ ಕಾರ್ಯವನ್ನು ಒಕ್ಕಲುತನ ವಿಸ್ತರಣಸೇವೆಯು ಆಡಳಿತಕ್ಕೆ ಕೊಟ್ಟರೆ ಹೆಚ್ಚು ಪ್ರಯೋಜನಕಾರಿಯಾಗಬಹುದೆಂದು ತೋರುತ್ತಲಿದೆ. ಒಕ್ಕಲುತನ ಶಾಲೆಗಳಲ್ಲಿ, ಕಾಲೇಜುಗಳಲ್ಲಿ ಮೀನುಗಾರಿಕೆಯ ಜ್ಞಾನದಾನವಾಗಬೇಕು.

ಭಾರತದ ಕರಾವಳಿ ಪ್ರದೇಶವು ವಿಶೇಷಾನುಕೂಲತೆಗಳುಳ್ಳ ನದೀಮುಖಗಳಿಂದ, ಉಪ್ಪುನೀರಿನ ಸರೋವರಗಳಿಂದ, ಸಮುದ್ರದ ಒತ್ತುಗಳಿಂದ ತುಂಬಿದೆ. ಉಪ್ಪುನೀರಿನ ಪ್ರದೇಶವು, ಚಿಲ್ಕಾ ಸರೋವರ ಹಿಡಿದು, ಸುಮಾರು ೧೯ ಲಕ್ಷ ಎಕರೆಯಷ್ಟಾಗುವುದು. ಚಿಲ್ಕಾ ಸರೋವರದ ಕ್ಷೇತ್ರ ೨೫೬,೦೦೦ ಎಕರೆಯಷ್ಟಿದೆ. ಇವೇ ಸುಮಾರು ೩,೦೦೦ ಟನ್ನುಗಳಷ್ಟು ವಾರ್ಷಿಕವಾಗಿ ಮೀನು ಪೂರೈಸುತ್ತದೆ. ಈ ಪ್ರದೇಶದ ಬಹುಭಾಗವು ರಾಜ್ಯಸರಕಾರಗಳ ಅಧೀನವಾಗಿದ್ದು ಇನ್ನೂ ಸಾಕಷ್ಟು ಅಭಿವೃದ್ಧಿಯಾಗಿಲ್ಲ. ತ್ರಾವಣಕೋರ ಕೋಚೀನಗಳಲ್ಲಿ ಉತ್ಪಾದಕ ಮೀನುಗಾರಿಕೆಗಾಗಿ ಬೀಳು ಜಲಪ್ರದೇಶಗಳನ್ನು ಮರಳಿ ಪಡೆಯಲಾಗಿದೆ. ಇದೇ ಬಗೆಯಾಗಿ ಉಳಿದ ರಾಜ್ಯಗಳಲ್ಲಿಯೂ ಆಗಬೇಕಾಗಿದೆ. ಇಂತಹ ಪ್ರದೇಶಗಳಲ್ಲಿ ಮೀನುಗಾರರ ಸಹಕಾರೀ ಸಂಘಗಳಿಂದ ಕೂಡಿದ ವಸಾಹತುಗಳು ಏರ್ಪಾಡಾಗುವುದು ಅವಶ್ಯವಿದೆ.

ಸಾಗರ ಮೀನುಗಾರಿಕೆಗಾಗಿ ದೇಶೀಯ ನಾವುಗಳಿಗೆ ಯಂತ್ರಸಾಧನಗಳನ್ನು ಜೋಡಿಸುವುದು ಅಗತ್ಯವಿದೆ. ಸದ್ಯಕ್ಕೆ ಕೆಲಸ ಮಾಡುತ್ತಿರುವ ಇಂತಹ ನಾವುಗಳ ಸಂಖ್ಯೆ ಸುಮಾರು ೭೦,೦೦೦ ದಷ್ಟಿದೆ. ಇವು ಸಮುದ್ರದ ಒಳಕ್ಕೆ ಕೆಲ ಮೈಲುಗಳಾಚೆ ಹೋಗಲಾರವು. ಮೇಲಾಗಿ ಹೋಗಿಬರುವುದರಲ್ಲಿಯೆ ಇವುಗಳ ಕಾಲಹರಣವಾಗುವುದು. ಆದುದರಿಂದ ಉತ್ಪಾದನೆ ಕಡಿಮೆ. ಇವುಗಳಿಗೆ ಯಾಂತ್ರಿಕ ಶಕ್ತಿ ಸಾಧನಗಳನ್ನು ಜೋಡಿಸಿದರೆ, ಸಾಮಾನ್ಯವಾಗಿ ಹೋಗಬಹುದಾಗಿದ್ದ ಅಂತರದಕಿಂತಲೂ ದೂರ ಹೋಗಬಹುದಲ್ಲದೆ ಹೆಚ್ಚು ವೇಳೆ ಮೀನು ಹಿಡಿಯುವುದರಲ್ಲಿ ಕಳೆಯಬಹುದಾಗಿದೆ. ಸುಮಾರು ನೂರಾನಾಲ್ವತ್ತು ನಾವುಗಳಿಗೆ ಯಾಂತ್ರಿಕ ಸಾಧನಗಳನ್ನು ಜೋಡಿಸುವ ಏರ್ಪಾಡು ಯೋಜನೆಯಲ್ಲಿದೆ.

ಪಶ್ಚಿಮ ಕರಾವಳಿಯಲ್ಲಿ 'ಮಾತೃನೌಕೆ'ಯ ಪದ್ಧತಿಯನ್ನು ಅನು [illegible] ತುಂಬಾ ಅವಕಾಶವಿದೆ. ಆದರೆ ಭದ್ರವಾದ ಹಿಡಿತಗಳೂ ಶೀತಲೋಪ [illegible] ವ್ಯವಸ್ಥೆಯೂ ಆಗಬೇಕಾಗುವುದು. ಆದರೂ ಸೌರಾಷ್ಟ್ರ ಮತ್ತು ಕೋಚೀನಗಳ ಆಸುಪಾಸುಗಳಲ್ಲಿ ಈ ತರಹದ ಕಾರ್ಯ ನಡೆಯುವಂತೆ ಯೋಜನೆ ವ್ಯವಸ್ಥೆ ಮಾಡಿದೆ. ಇದರಿಂದ ದೊಡ್ಡ ಹಡಗವಾದ 'ಮಾತೃ ನೌಕೆ'ಯ [illegible]ನಿಂದ ಅನೇಕ ಕಿರಿನಾವೆಗಳು ಕಾರ್ಯಮಾಡಿ ಉತ್ಪಾದನೆ ಹೆಚ್ಚಿಸಬಹುದಾಗಿದೆ; ಸಂಗ್ರಹ ಮಾಡಬಹುದಾಗಿದೆ. ಕಾರವಾರದ ಹತ್ತಿರದ ಮ್ಯಾಕೆರೆಲ ಮಾದರಿಯ ಮತ್ತು ಕೋಚೀನದ ಹತ್ತಿರದ ಸಾಡೀನ ಮಾದರಿಯ ಮೀನುಗಳನ್ನು ಹಿಡಿಯುವುದಕ್ಕೆ 'ಪರ್ಸಸೀನರ್ಸ'ಗಳ ಪ್ರಾಯೋಗಿಕ ವ್ಯವಸ್ಥೆ ಮಾಡಲಾಗಿದೆ. ವ್ಯಾಪಾರೀ ನೌವಾಹಕಗಳ ವ್ಯವಸ್ಥೆಗೆ ಸಾಕಷ್ಟು ಅವಕಾಶ ವಿದೆ. ಅರಬೀಸಮುದ್ರದಲ್ಲಿ ಕಾರ್ಯ ಮಾಡಲು ಒಂದು ಅಂತಹ ವ್ಯಾಪಾರಿ ನೌವಾಹಕವನ್ನು ತಯಾರು ಮಾಡಲಾಗಿದೆ ಪಶ್ಚಿಮ ಬಂಗಾಲ ಸರಕಾರವೂ ಇಂತಹ ಮೂರು ಕಿರಿನೌವಾಹಕಗಳಿಗಾಗಿ ವ್ಯವಸ್ಥೆ ಮಾಡಿದೆ.

ಆದರೆ ವ್ಯಾಪಾರಿ ದೃಷ್ಟಿಯಿಂದ ಯಶಸ್ಸು ಸಾಧಿಸಬೇಕಾದರೆ ಕಾರ್ಯ ಕ್ಷಮ ಮತ್ತು ತರಬೇತಿ ಪಡೆದ ಕೆಲಸಗಾರರು ಬೇಕಾಗುತ್ತಾರೆ. ಎಂಟು ಜನರ ಒಂದು ಗುಂಪು ಈಗ ತರಬೇತಿ ಪಡೆಯುತ್ತಲಿದೆ. ೧೯೫೫ರಿಂದ ಪಶ್ಚಿಮ ಕರಾವಳಿಯಲ್ಲಿ ಕಾರ್ಯ ಪ್ರಾರಂಭಿಸಿದ ಒಂದು ಜಪಾನೀ ಕಂಪನಿಯೂ ತರಬೇತಿ ಕೊಡುತ್ತಲಿದೆ. ಸಂಯುಕ್ತರಾಷ್ಟ್ರಸಂಘದ ಆಹಾರ ಒಕ್ಕಲುತನ ಸಂಘಟನೆಯ ಮುಖಾಂತರ, ಇಲ್ಲವೆ ಅಮೇರಿಕೆಯ ಚತುರಂಶ ಕಾರ್ಯಕ್ರಮಗಳ ಮುಖಾಂತರ, ಮೀನುಗಾರಿಕೆ ಇಂಜಿನಿಯರರು, ನೌಕಾ ಶಿಲ್ಪಿಗಳು, ಬಂದರು ತಜ್ಞರು, ಮುಂತಾದ ತಾಂತ್ರಿಕಪ್ರವೀಣರ ನೆರವೂ ದೊರೆಯುತ್ತಿದೆ. ಸುಮಾರು ೫ ಲಕ್ಷ ರೂಪಾಯಿ ತೆಗೆದಿಟ್ಟು ಮೀನುಗಾರರಿಗೆ ಯಾಂತ್ರಿಕ ಸಾಧನಗಳನ್ನು ಉಪಯೋಗಿಸುವ ಶಿಕ್ಷಣ ಕೊಡಲಾಗುತ್ತಿದೆ.

ಇದಕ್ಕೆ ಹೊಂದಿಕೊಂಡು ಬೇರೆ ಸಂಘಟನೆಯೂ ಆಗಬೇಕಾಗಿದೆ. ಮೀನುಗಳನ್ನು ನಾವೆಗಳಿಂದ ಇಳಿಸಿಕೊಳ್ಳುವ ಸೌಕರ್ಯ, ಶೀತಲೋಪಕರಣ ವ್ಯವಸ್ಥೆ ಸಾರಿಗೆ, ಮಾರಾಟ ಮುಂತಾದವುಗಳ ವ್ಯವಸ್ಥೆಯಾಗಬೇಕು. ಒಂಬತ್ತು ಬರ್ಫದ ಕಾರಖಾನೆಗಳಿಗಾಗಿ, ಮತ್ತು ಒಂಬತ್ತು ವಿಶಿಷ್ಟ

ಸೌಕರ್ಯಗಳುಳ್ಳ ಸಾರಿಗೆ ವಾಹನಗಳ ಬಗ್ಗೆಯೂ ವ್ಯವಸ್ಥೆ ಮಾಡಲಾಗಿದೆ. ಪಶ್ಚಿಮ ಕರಾವಳಿಯಲ್ಲಿ ಕಿರಿಬಂದರಗಳಲ್ಲಿ ರೇವೆ ತುಂಬಿಹೋಗುದುದನ್ನು ತೆಗೆಸುವುದು ಅತ್ಯಗತ್ಯವಾಗಿದೆ. ಈ ಸಂಬಂಧದಲ್ಲಿಯೂ ಯೋಜನೆಯು ಕಾರ್ಯಾರಂಭ ಮಾಡಿದೆ.

ಮೀನುಗಾರಿಕೆಯ ವ್ಯವಹಾರದಲ್ಲಿ ದಲಾಲರು ತುಂಬಿಕೊಂಡಿದ್ದಾರೆ. ಮೀನುಗಾರರಿಗೆ ಇವರೇ ಆಧಾರರು. ಇವರಿಂದ ಮೀನುಗಾರರು ನಾವೆ, ಕೊಕ್ಕೆಗಳು, ಬಲೆಗಳು, ಬಲೆದಾರ, ನೌಕಾಪಟದ ಅರಿವೆ ಮುಂತಾದವು ಗಳನ್ನು ಪಡೆಯಬೇಕಾಗುತ್ತದೆ. ಇದರಲ್ಲಿಯೆ ಮೀನುಗಾರರ ಗಳಿಕೆಯು ಬಹುಭಾಗ ಹಿಂಡಿಹೋಗುತ್ತದೆ. ದಲಾಲರ ಸ್ಥಾನದಲ್ಲಿ ಆ ಕಾರ್ಯ ಮಾಡುವ ಮೀನುಗಾರರ ಸಹಕಾರೀ ಸಂಘಗಳು ಏರ್ಪಡಬೇಕಾಗಿದೆ. ಸುಮಾರು ೬೦ ಲಕ್ಷ ರೂಪಾಯಿ ತೆಗೆದಿಟ್ಟು ಮೀನುಗಾರರಿಗೆ ವ್ಯಾವಸಾಯಿಕ ಉಪಕರಣಗಳನ್ನು ಒದವಿಸುವ ಅನುಕೂಲತೆ ಕಲ್ಪಿಸಲಾಗಿದೆ.

ಸಿಹಿನೀರಿನ ಮೀನು ತಾಜಾ ಸ್ಥಿತಿಯಲ್ಲಿಯೆ ಮಾರಾಟವಾಗುತ್ತದೆ. ಸುಮಾರು ೨೦ ಶತಾಂಶದಷ್ಟು ಸಾಗರ ಮೀನುಗಳು ತಾಜಾ ಸ್ಥಿತಿಯಲ್ಲಿ ಮಾರಾಟವಾಗುವುವು. ಉಳಿದ ಸುಮಾರು ೮೦ ಶತಾಂಶದಷ್ಟು ಒಣಗಿಸಿದ ಮೀನು ಎಂದು, ಇಲ್ಲವೆ ಉಪ್ಪಿಸಿದ ಮೀನು ಎಂದು, ಇಲ್ಲವೆ ಮೀನುಗೊಬ್ಬರ ಮಾಡಲ್ಪಟ್ಟು ಮಾರಾಟವಾಗುವುದು. ತಾಜಾ ಮೀನುಗಳಿಗೆ ಹೆಚ್ಚಾಗಿ ಇರುವ ಬೇಡಿಕೆ ಪೂರೈಸಲು ಸಾಗರ ಮೀನುಗಳ ಸಾರಿಗೆಯು ವ್ಯವಸ್ಥೆಯಾಗ ಬೇಕು. ಇದರಿಂದ ಮೀನುಗಾರರಿಗೆ ಹೆಚ್ಚಿಗೆ ಲಾಭವೂ ದೊರೆವುದು. ಇದಕ್ಕಾಗಿ ಬರ್ಫು, ಶೀತಲೋಪಕರಣ, ಅವಿಲಂಬಿತಸಾರಿಗೆ, ಮುಂತಾದ ಸೌಕರ್ಯ ಬೇಕಾಗುತ್ತದೆ. ಅನೇಕ ಮೀನುಗಾರಿಕೆಯ ಕೇಂದ್ರಗಳಿಂದ ಒಳಪ್ರದೇಶಕ್ಕೆ ಸಂಪರ್ಕ ಕೂಡ ಇಲ್ಲದಂತಹ ಸ್ಥಿತಿಯಿದೆ. ಸಾರಿಗೆ ಸಂಪರ್ಕದ ಅಭಿವೃದ್ಧಿಯು ದೀರ್ಘಕಾಲದ ಕ್ರಮವಾಗಿದೆ. ಅಲ್ಲಿಯತನಕ, ಮೀನು ಗಳನ್ನು ಒಣಗಿಸಿಯೋ ಆಗಲಿ, ಉಪ್ಪಿಸಿಯೋ ಆಗಲಿ ಕಾದಿಡಬೇಕಾಗುವುದು. ಈ ಪದ್ಧತಿಯಲ್ಲಿಯು ಸುಧಾರಣೆಯಿಂದ ಮೀನಿನ ಆಹಾರಗುಣ ಹೆಚ್ಚಿಸಬಹು ದಾಗಿದೆ. ಅವಕ್ಕೆ ಸಂಶೋಧನ-ಪ್ರಯೋಗಗಳ ಅವಶ್ಯಕತೆಯಿದೆ. ಏನೇ

ಆದರೂ ಇದ್ದ ಮೀನಿನ ಮಾರಾಟಕ್ಕಾಗಿ ಸಹಕಾರೀ ಮಾರ್ಕೆಟಿಂಗ ಸಂಸ್ಥೆಗಳನ್ನು ಉತ್ತೇಜಿಸಬೇಕಾಗಿದೆ.

ಈ ಎಲ್ಲ ಅಭಿವೃದ್ಧಿ ಕಾರ್ಯಗಳಿಗೆ ಯೋಜನೆಯಲ್ಲಿ ೫೮೦ ಲಕ್ಷ ರೂಪಾಯಿ ತೆಗೆದಿಡಲಾಗಿದೆ. ಈ ಕಾರ್ಯಕ್ರಮವು ಪ್ರಗತಿಪಡೆಯುವಾಗ ಯೋಜನೆಯ ಕಾಲಾವಧಿಯಲ್ಲಿ ಉತ್ಪಾದನೆಯಲ್ಲಿ ೧೦ ಲಕ್ಷ ದಿಂದ ೧೫ ಲಕ್ಷದವರೆಗೆ ಹೆಚ್ಚಳ ಕಂಡುಬರುವುದೆಂದು ಎಣಿಸಲಾಗಿದೆ. ಆದರೂ ಆಹಾರಸತ್ವ ಸಲಹಾಸಮಿತಿಯು ಸೂಚಿಸಿದ ಸಮತೂಕ ಆಹಾರಕ್ಕಾಗಿ ಸಾಕಷ್ಟು ಪೂರೈಕೆಯಾಗುವುದಿಲ್ಲವೆಂಬುದು ಲಕ್ಷಿಸಬೇಕಾದ ಸಂಗತಿ.

## ಗ್ರಾಮೋದ್ಯೋಗಗಳು

ದೇಶದಲ್ಲಿಯ ದೊಡ್ಡ ಉದ್ಯಮಗಳ ಬೆಳೆಗೆಯಿಂದ ಗ್ರಾಮೋದ್ಯೋಗಗಳು ಕಮರಿ, ಗ್ರಾಮಕೈಗಾರಿಕೆಯಲ್ಲಿಯ ಶಿಲ್ಪಿಗಳು ಕೆಲಸವಿಲ್ಲದವರಾಗಿ ಒಕ್ಕಲುತನಕ್ಕೆ ಜೋತುಬೀಳತೊಡಗಿದ್ದಾರೆ. ಪಟ್ಟಣಗಳ ಬೆಳೆಗೆಯೂ ಸಾಕಷ್ಟು ಭರದಿಂದ ಆಗದೆ ಇದ್ದುದರಿಂದ ಈ ನಿರುದ್ಯೋಗಿಯಾದ ಶಿಲ್ಪಿಗಳನ್ನು ಗ್ರಾಮಬಾಹಿರ ಕಾರ್ಯಕ್ಷೇತ್ರಗಳಲ್ಲಿ ಸಮಾವೇಶಮಾಡಿಕೊಳ್ಳದಂತಾಗಿದೆ. ಆದುದರಿಂದ ಗ್ರಾಮಕೈಗಾರಿಕೆಗಳ ಪುನರುಜ್ಜೀವನ ಮತ್ತು ಅಭಿವೃದ್ಧಿಯಿಂದಲೆ ಈ ಜನತೆಗೆ ಪರಿಹಾರ ಒದಗಿಸುವುದು ಸಾಧ್ಯವಿದೆ. ಇದರಿಂದ ಒಕ್ಕಲುತನದ ಮೇಲಿನ ಭಾರವೂ ಕಡಿಮೆಯಾಗುವುದು.

ಹಿಂದಿನ ಕಾಲದಲ್ಲಿ ಹಳ್ಳಿಗಳು ಸ್ವಯಂಪೂರ್ಣ ಘಟಕಗಳಾಗಿದ್ದುವು. ಸರಕು ಮತ್ತು ಸೇವೆಗಳ ವಿನಿಮಯದಿಂದ ಅಲ್ಲಿನ ಜೀವನ ನಡೆಯುತ್ತಿತ್ತು. ಇಂದಾದರೂ ಗ್ರಾಮಕೈಗಾರಿಕೆಗಳ ಅಭಿವೃದ್ಧಿಯು ಈ ಸೇವಾ–ಸರಕುಗಳ ವಿನಿಮಯ ಪದ್ಧತಿಯ ಜೀವಂತತನದ ಮೇಲೆಯೆ ಹೆಚ್ಚಾಗಿ ಅವಲಂಬಿಸಿದೆ. ಆದರೆ ಇಂದಿನ ಹಳ್ಳಿಗಳಲ್ಲಿ ಹಳೆಯ ಸಮಾಜರಚನೆ ಇಲ್ಲದಂತಾಗಿದೆ. ಶ್ರಮ ವಿಭಾಗದ ತತ್ವವು ಮಾಯವಾಗಿ ಸ್ವೈರವೃತ್ತಿಯ ಶಿಥಿಲಸ್ವರೂಪವು ಗ್ರಾಮ ಸಮಾಜದ ಲಕ್ಷಣವಾಗಿಬಿಟ್ಟಿದೆ. ಈ ಪರಿಸ್ಥಿತಿಗೆ ಐತಿಹಾಸಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಕಾರಣಗಳಿದ್ದರೂ ಪರಿಸ್ಥಿತಿಯನ್ನು ಅಲ್ಲಗಳೆಯುವಂತಿಲ್ಲ. ಈ ಪರಿಸ್ಥಿತಿ ಸುಧಾರಿಸಿದ ಹೊರತು, ಹಳ್ಳಿಗಳು ಹಳೆಯ ಕಾಲದಂತೆ ಒಂದು

ಸಾಮಾಜಿಕ, ರಾಜಕೀಯ, ಆರ್ಥಿಕ ಘಟಕವಾಗಿ ಪರಿಣಮಿಸಿದ ಹೊರತು, ಗ್ರಾಮಕೈಗಾರಿಕೆಯ ಅಭಿವೃದ್ಧಿಯು ಹಗಲುಗನಸಾಗುವುದು. ಗ್ರಾಮಕೈಗಾರಿಕೆಗಳು ಗ್ರಾಮಾಭಿವೃದ್ಧಿಯ ಆವಶ್ಯಕ ಸಂಘಟನೆಯಾಗಬೇಕು. ಈ ದೃಷ್ಟಿಯಿಂದ ಅಲ್ಲಿನ ಸಾಮಾಜಿಕ, ಆರ್ಥಿಕ ರಚನೆಯಲ್ಲಿ ಪರಿವರ್ತನವಾಗುವಂತೆ ಮಾಡಬೇಕು. ಕಾಲಚಕ್ರವನ್ನು ಎಷ್ಟರಮಟ್ಟಿಗೆ ಹೊರಳಿಸಿಡಲು ಸಾಧ್ಯವಿದೆ ಎಂಬುದು ವಿಚಾರಿಸಬೇಕಾದ ಪ್ರಶ್ನೆಯಾಗಿದೆ.

ಆದರೆ ಹಾಗೆಂದು ಸುಮ್ಮನೆ ಕೂಡಲಾಗದು. ಗ್ರಾಮೋದ್ಯೋಗಗಳ ಸ್ಥಿತಿಗತಿಯ ಪರಿಶೀಲನೆ ನಡೆವುದು ಆಗತ್ಯ. ಸಹಕಾರೀ ಪದ್ಧತಿಯ ಸಹಾಯದಿಂದ ಏನು ಮಾಡಲು ಬರುವುದು ಎಂಬುದನ್ನು ಅರಿಯಬೇಕಾದುದು ಆಗತ್ಯ. ಅದಕ್ಕಾಗಿ ಅಲ್ಲಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಸಮಿತಿಗಳ ಏರ್ಪಾಡಾಗಬೇಕೆಂದು ಸೂಚಿಸಲಾಗಿದೆ. ಈ ಸಮಿತಿಗಳು ಹಳ್ಳಿಯ ಒಳ-ಹೊರಗಿನ ಸಂಪರ್ಕ ಸಾಧನಗಳಾಗಿ ಬೆಳೆದು ಹಳ್ಳಿಗರ, ಗ್ರಾಮೋದ್ಯೋಗಗಳ ಗುಡಿ ಕೈಗಾರಿಕೆಗಳ ಅಭಿವೃದ್ಧಿ ಸಾಧಿಸುವಂತಹ ಕಾರ್ಯಮಾಡಬೇಕು.

ಈ ಪ್ರಪಂಚದಲ್ಲಿ ಆಯಾ ವಸ್ತು-ವ್ಯಕ್ತಿಗಳು, ಸಂಘ ಸಂಸ್ಥೆಗಳಿಗೆ ಅವರವರ ವ್ಯಾಪ್ತಿ, ವರ್ಚಸ್ಸು, ಉಪಯೋಗಗಳಿಗೆ ತಕ್ಕಂತೆ ಕಾರ್ಯಕ್ಷೇತ್ರ ಪರಿಮಿತವಾಗಿರುವುದು. ಗುಡಿಕೈಗಾರಿಕೆಗಳಿಗೆ ವಿಶಿಷ್ಟಸ್ಥಾನವಿದೆ. ಅದು ಎಂದಿಗೂ ಕಾರಖಾನೆ ಪರಕಿಗೆ ಸರಿಹೋಗಲಾರದು. ಕಾರಖಾನೆಯ ಸರಕಿನ ಸ್ಥಾನ ಬೇರೆ. ಹೀಗೆ ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ ಒಂದು ಮತ್ತೊಂದಕ್ಕೆ ವಿಘಾತಕವಾಗದಂತೆ ಕಾರ್ಯಮಾಡಿ ಎರಡೂ ಬೆಳೆಯುವಂತೆ ಮಾಡುವ ಹಾಗೆ ಸರಕಾರದ ಧೋರಣೆ ಇರಬೇಕಾಗಿದೆ. ಸೌಕರ್ಯ, ಸೌಲಭ್ಯ, ಸೌಹಾರ್ದ್ರಕ್ಕಾಗಿ 'ಕಾದಿಟ್ಟ ಕ್ಷೇತ್ರ'ವೆಂದು ಮಾಡಬಹುದಾಗಿದೆ. ಈಗಾಗಲೇ ಈ ಬಗೆಯಾದ ಪ್ರಯೋಗವನ್ನು ಸಂಘಟಿತ ಜವಳಿ ಉದ್ದಿಮೆ ಮತ್ತು ಕೈಮಗ್ಗದ ವ್ಯವಸಾಯ ಇವುಗಳಲ್ಲಿ ಮಾಡಲಾಗಿದೆ. ಇದೇ ತತ್ವವನ್ನು ಇನ್ನುಳಿದ ಬೇರೆ ಕೈಗಾರಿಕೆ ಉದ್ಯಮಗಳಿಗೂ ಅನ್ವಯಿಸಬಹುದಾಗಿದೆ. ತಿನ್ನುವ ಎಣ್ಣೆಯನ್ನು ಗುಡಿ ಕೈಗಾರಿಕೆಗಳಿಂದ, ಉಳಿದ ಎಣ್ಣೆಗಳನ್ನು ಕಾರಖಾನೆಗಳಿಂದ ತಯಾರಿಸಬಹುದು. ದೊಡ್ಡ ಉದ್ಯಮಗಳ ಮೇಲೆ ಕರ ಹೇರಿ

ಗುಡಿಕೈಗಾರಿಕೆಗಳಿಗೆ ಆಸರ ಕೊಡುವುದು ಒಂದು ಉಪಾಯವಾಗಿದೆ. ಉತ್ಪಾದನೆಗಾಗಿ ಒಂದು ಸಾಮಾನ್ಯ-ಸರ್ವಮಾನ್ಯ ಕಾರ್ಯಕ್ರಮವಿದ್ದರೆ, ಹಿರಿ ಉದ್ಯಮಗಳು ತಮ್ಮ ಮೇಲೆ ಹೇರಿದ ಕರದಿಂದ ಗುಡಿಕೈಗಾರಿಕೆಗಳಿಗೆ ತಾಂತ್ರಿಕ ಸುಧಾರಣೆಗಳನ್ನು ಒದವಿಸುವಂತೆ ಮಾಡಬೇಕು. ಇದರಿಂದ ಎರಡೂ ಪ್ರೋತ್ಸಿತವಾಗುವುವು.

ಗ್ರಾಮೋದ್ಯೋಗಗಳಲ್ಲಿ ರಚನಾತಂತ್ರಗಳಲ್ಲಿ ಸುಧಾರಣೆಯಾಗುವುದು ಆಗತ್ಯವಿದೆ. ಅದಕ್ಕಾಗಿ ಈ ಕ್ಷೇತ್ರಗಳಲ್ಲಿ ಸಂಶೋಧನ ಮತ್ತು ತರಬೇತು ಗಳಿಗಾಗಿ ಹೆಚ್ಚಿನ ಮಹತ್ವವನ್ನು ಕೊಡಬೇಕಾಗಿದೆ. ಕೇಂದ್ರ ಸರಕಾರದ ಯೋಜನೆಯಲ್ಲಿ ಗುಡಿ ಮತ್ತು ಗ್ರಾಮೋದ್ಯೋಗಗಳಿಗೆ ೧೫ ಕೋಟಿ ರೂಪಾಯಿ ತೆಗೆದಿಡಲಾಗಿದ್ದು ಅದರಲ್ಲಿಯ ಕೆಲಭಾಗವು ಸಂಶೋಧನೆ ಮತ್ತು ತರಬೇತಿ ಗಾಗಿ ಇಡಲಾಗಿದೆ. ತರಬೇತಿಯು ವ್ಯಾಪಕವಾದ ಕಾರ್ಯಕ್ರಮದ ಮೂಲಕ ಗ್ರಾಮಶಿಲ್ಪಿಗಳಿಗೆ ದೊರೆಯುವಂತೆ ಮಾಡಬೇಕು. ತರಬೇತಿ ಪಡೆದ ಶಿಲ್ಪಿಗಳು ಹೆಚ್ಚು ಕಾರ್ಯಕ್ಷಮರಾಗುವುದಲ್ಲದೆ ಆಧುನಿಕ ಸುಧಾರಣೆಯ ವೈಜ್ಞಾನಿಕ ಸಾಧನಗಳನ್ನು ತಮ್ಮ ಉದ್ಯೋಗಗಳಿಗೆ ಹೇಗೆ ಹೊಂದಿಸಿಕೊಳ್ಳಬೇಕೆಂದು ತಿಳಿವುದು.

ಗ್ರಾಮಗಳಲ್ಲಿಯ ಈ ಕೈಗಾರಿಕೆಯ ಸರಕುಗಳು ಮಾರಾಟವಾದರೆ ಸರಿ ಹೋಯಿತು. ಹೊರಗಿನ ಮಾರ್ಕೆಟಿಗಾಗಿ ಅವುಗಳನ್ನು ಕಳಿಸುವ ಪ್ರಸಂಗ ಬಂದರೆ ಈಗ ಅವರು ದಲಾಲನನ್ನು ಅವಲಂಬಿಸಿ ಕಾರ್ಯಮಾಡುವರು. ಅವನೇ ಅವರಿಗೆ ಧನಿಕನಾಗುವನು. ಒಕ್ಕಲುತನದಲ್ಲಿಯ ಸಮಸ್ಯೆಯಂತೆಯೆ ಇದನ್ನು ಪರಿಶೀಲಿಸಿ ದಲಾಲನ ಧನಿಕತ್ವವನ್ನು ತೆಗೆದು ಸಹಕಾರೀ ಸಾಘದಿಂದ ಆರ್ಥಿಕ ನೆರವು ಕೊಡುವಂತೆಯಾದರೆ ಗ್ರಾಮಶಿಲ್ಪಿಯ ಸರಕುಗಳಿಗೆ ಒಳ್ಳೆಯ ಬೆಲೆ, ಹೆಚ್ಚಿನ ಲಾಭ ಬಂದೀತು.

ಖಾದೀ ಮತ್ತು ಗ್ರಾಮೋದ್ಯೋಗ ಸಮಿತಿಯವರು ನಾಲ್ಕು ವರುಷಗಳ ಕಾರ್ಯಯೋಜನೆ ಮಾಡಿದ್ದಾರೆ.

೧. ಎಣ್ಣೆ ಉದ್ಯಮ: ಎಣ್ಣೆ ಗಾಣಗಳಿಗೂ ಎಣ್ಣೆ ಕಾರಖಾನೆ ಗಳಿಗೂ ಸಾಮಾನ್ಯ ಕಾರ್ಯಕ್ರಮವೊಂದನ್ನು ಸಿದ್ಧಪಡಿಸಬೇಕು. ಗಾಣದಿಂದ

ಉತ್ಪಾದನೆಯನ್ನು ಈಗಿದ್ದ ೧೦ ಲಕ್ಷ ಟನ್ನುಗಳಿಂದ ೧೩-೮ ಲಕ್ಷ ಟನ್ನಿಗೆ ಏರಿಸುವುದು. ನಿರುಪಯುಕ್ತ ಇಲ್ಲವೆ ತೀರ ಹಳೆಯದಾದ ಗಾಣಗಳ ಬದಲು ಹೊಸ ಮತ್ತು ಹೆಚ್ಚು ಕಾರ್ಯಕ್ಷಮ ಗಾಣಗಳನ್ನು ಒದವಿಸುವುದು. ಸುಧಾರಿಸಿದ ಗಾಣಗಳನ್ನು ರಿಪೇರಿ ಮಾಡುವುದನ್ನು ಕಲಿಯಲು ಐದು ಪ್ರಾದೇಶಿಕ ಕೇಂದ್ರಗಳನ್ನು ತೆರೆಯಬೇಕು.

**೨. ಬೇವಿನ ಎಣ್ಣೆಯಿಂದ ಸಾಬೂಣ:** ಎಲ್ಲಿ ಬೇವಿನ ಎಣ್ಣೆಯು ಹೆಚ್ಚು ಉತ್ಪಾದನ ಸಾಧ್ಯವಿದೆಯೋ ಆ ಪ್ರದೇಶದಲ್ಲಿ ಸುಮಾರು ಹನ್ನೊಂದು ಕೇಂದ್ರಗಳಿಗಾಗಿ ವ್ಯವಸ್ಥೆಯಾಗಲಿದೆ. ಈ ಕೇಂದ್ರಗಳಿಂದ ಒಂದೊಂದರಲ್ಲಿ ವರುಷಕ್ಕೆ ೧೨೭೦ ಮಣ ಬೇವಿನ ಎಣ್ಣೆಯು, ೭೮ ಟನ್ನು ಸಾಬೂಣವು ಸಿದ್ಧವಾಗುವುದು.

**೩. ಭತ್ತ ಒಡೆಯುವುದು;** ಭತ್ತ ಕುಟ್ಟುವುದು ಮುಖ್ಯವಾದ ಗ್ರಾಮೋದ್ಯೋಗ. ಇಂದಿಗೂ ೭೫ ಶತಾಂಶದಷ್ಟು ಭತ್ತ ಈ ಕ್ರಮದಿಂದಲೆ ಅಕ್ಕಿ ಮಾಡಲ್ಪಡುತ್ತದೆ. ಈ ಪದ್ಧತಿಯಲ್ಲಿ ಸುಧಾರಣೆಯಾಗುವಂತೆ ಮಾಡುವುದು ಯೋಜನೆಯಲ್ಲಿದೆ. ಸುಮಾರು ೫೦,೦೦೦ ಚಕ್ಕಿ (ತೊಳ್ಳಕಲ್ಲು) ಗಳನ್ನು ಒದವಿಸುವುದಕ್ಕೆ ಅನುಕೂಲತೆ ಒದವಿಸುವ ಏರ್ಪಾಡು ಆಗಲಿದೆ.

**೪. ತಾಳೆಬೆಲ್ಲ:** ೮೦,೦೦೦ ಟನ್ನುಗಳಷ್ಟು ತಾಳೆಬೆಲ್ಲ ತಯಾರಿಸುವ ಹವಣಿಕೆ ಇದೆ. ಇದರಿಂದ ೬೦,೦೦೦ ಮರತಟ್ಟುಗರಿಗೆ ಉದ್ಯೋಗ ದೊರೆವುದು.

**೫. ಬೆಲ್ಲ ಮತ್ತು ಕಲ್ಲುಸಕ್ಕರೆ:** ೧೦೦,೦೦೦ ಸುಧಾರಿಸಿದ ಕಬ್ಬಿನ ಗಾಣಗಳ ವ್ಯವಸ್ಥೆ ಮಾಡಬೇಕೆಂದಿದ್ದು ಅದರಿಂದ ಒಳ್ಳೆಯ ರೀತಿಯ ರಸವನ್ನು ತೆಗೆದು ಉತ್ತಮ ಬೆಲ್ಲ ಮತ್ತು ಕಲ್ಲುಸಕ್ಕರೆ ಮಾಡುವ ಯೋಜನೆಯಿದೆ.

**೬. ಚರ್ಮ:** ಹಳ್ಳಿಯಲ್ಲಿಯ ಚಮಗಾರರ ಸಹಕಾರಿ ಸಂಘಗಳನ್ನು ಮಾಡಿ ಚರ್ಮದ ಕೆಲಸದಲ್ಲಿ ಕೌಶಲ ಒದಗಿಸುವಂತೆ ಶಿಕ್ಷಣ, ತರಬೇತಿ ಕೊಡುವ ಯೋಜನೆ ಮಾಡಲಾಗಿದೆ.

೭. ಕಂಬಳಿ ಮಾಡುವುದು, ೮. ಕೈಕಾಗದ ತಯಾರಿಸುವುದು, ೯. ಜೇನು ಸಾಕುವುದು, ೧೦. ಕಡ್ಡಿಪೆಟ್ಟಿಗೆ ಮಾಡುವುದು, ೧೧. ಖಾದಿ,

೧೨. ಕತ್ತದ ಕೈಗಾರಿಕೆ, ಇವುಗಳನ್ನು ಬೆಳೆಸುವುದು ಯೋಜನೆಯಲ್ಲಿದೆ. ಇವೆಲ್ಲ ಕಾರ್ಯಗಳ ವೆಚ್ಚಕ್ಕೆ ೧೫ ಕೋಟಿ ರೂಪಾಯಿಗಳಲ್ಲದೆ, ಕಾರಖಾನೆ ಎಣ್ಣೆಯ ಮೇಲೆ ಕರ ಹೇರುವ ಯೋಜನೆಯೂ ಇದೆ.

**ಕಿರಿ ಉದ್ಯಮಗಳು ಮತ್ತು ಕೈಗಾರಿಕೆಗಳು:**

ಇಲ್ಲಿ ಎರಡು ಭಾಗ; ಸಾಂಪ್ರದಾಯಿಕ ಕಾರ್ಯಕೌಶಲ ಆವಶ್ಯಕವಾಗಿದ್ದುವುಗಳು, ಮತ್ತು ಆಧುನಿಕ ಜೀವನದಿಂದ ಬೆಳೆದುಬಂದಂತಹವು ಮತ್ತು ದೊಡ್ಡ ಉದ್ಯಮಗಳಿಗೆ ಪೋಷಕವಾಗಿರುವಂತಹವು.

ಸಾರ್ವಜನಿಕ (ಸರಕಾರೀ) ಸೇವೆಯಲ್ಲಿ ಮತ್ತು ದೊಡ್ಡ ಉದ್ಯಮಗಳಲ್ಲಿ ನೌಕರಿಯ ಸೌಕರ್ಯವು ಪರಿಮಿತವಾಗಿರುವುದರಿಂದ ಕಿರಿ. ಉದ್ಯಮಗಳು ಕೈಗಾರಿಕೆಗಳು ಇವುಗಳಿಂದ ಅಲ್ಪಸ್ವಲ್ಪ ವಿದ್ಯೆ ಗಳಿಸಿದ ಇಲ್ಲವೆ ತರಬೇತಿ ಪಡೆದವರಿಗೆ ಒಳ್ಳೆಯ ಉದ್ಯೋಗ ಸಾಧನಗಳಾಗುವುವು; ಅಲ್ಲದೆ ಮನೆಯಲ್ಲಿಯೆ ಕೆಲಸಮಾಡಲು ಹೆಣ್ಣುಮಕ್ಕಳಿಗೆ ಇದರಿಂದ ಸೌಕರ್ಯ ಉಂಟಾಗುವುದು. ಯುದ್ಧಕಾಲದಲ್ಲಿ ಸಂರಕ್ಷಣ ಆವಶ್ಯಕತೆಗಳಿಗಾಗಿ ಹೊಸ ಕಿರಿ ಉದ್ಯಮಗಳು ದೇಶವ್ಯಾಪಿಯಾಗಿ ಹಬ್ಬಿದುವು. ಅವುಗಳಲ್ಲಿ ಕೆಲವು ಇಂದು ಕಮರಿವೆ; ಇಂದು ಆ ತರಹದ ಸರಕುಗಳನ್ನು ಆಯಾತ ಮಾಡುತ್ತಿರುವುದರಿಂದ ಆ ಉದ್ಯಮಗಳನ್ನು ಪುನಃ ಸ್ಥಾಪಿಸಿ ಬೆಳೆಸಲು ತುಂಬ ಅವಕಾಶವಿದೆ. ಇದುವರೆಗೆ ಆದ ಅಭಿವೃದ್ಧಿಯು ಯಾವ ಯೋಜನಾಬದ್ಧ ಕಾರ್ಯಕ್ರಮದಂತೆ ಸಾಗಿಲ್ಲ. ಅದಕ್ಕಾಗಿ ಕಳೆದ ಇಪ್ಪತ್ತು ವರುಷಗಳಿಂದ ವಿಶೇಷ ಪ್ರಗತಿಯೆಂಬುದಾಗಿಲ್ಲ. ಈ ಉದ್ಯಮಗಳ ಅಭಿವೃದ್ಧಿಯು ಬಹುವಿಶಾಲ ವ್ಯಾಪ್ತಿಯುಳ್ಳದ್ದು. ಅದಕ್ಕಾಗಿಯೆ ಕೇಂದ್ರ ಸರಕಾರವು ತನ್ನ ಕೈಯಲ್ಲಿ ತೆಗೆದುಕೊಂಡಿದೆ. ಇದಕ್ಕಾಗಿ ೧೫ ಕೋಟಿ ರೂಪಾಯಿಗಳನ್ನು ತೆಗೆದಿಟ್ಟಿದ್ದು ಇದರಿಂದ ಒಪ್ಪಿತವಾದ ಕಾರ್ಯಕ್ರಮಗಳಿಗೂ ರಾಜ್ಯಸರಕಾರಗಳಿಂದ ಕೈಕೊಳ್ಳಲ್ಪಡುವ ಉಪಾಯಯೋಜನೆಗಳಿಗೂ ಸಾಕಷ್ಟು ಆರ್ಥಿಕ ಸಹಾಯ ದೊರೆವುದು.

ಈ ಕಿರಿ ಉದ್ಯಮಗಳನ್ನು ಮೂರು ಮಾದರಿಗಳಾಗಿ ವಿಭಾಗಿಸಬಹುದು. (೧) ಯಾವುದರಲ್ಲಿ ಸಣ್ಣ ಪ್ರಮಾಣದಲ್ಲಿಯ ಉತ್ಪಾದನೆಯೆ ವಿಶೇಷ

ಸೌಕರ್ಯವುಳ್ಳದ್ದಾಗುವುದೋ ಅವು. (೨) ದೊಡ್ಡ ಉದ್ಯಮಗಳಲ್ಲಿಯ ಮುಖ್ಯ ಕಾರ್ಯಕ್ಕೆ ಪೋಷಕವಾಗುವ ಭಾಗಗಳ ಇಲ್ಲವೆ ಅವಸ್ಥೆಗಳಲ್ಲಿಯ ಕಾರ್ಯ ಮಾಡುವಂಥಹವು; (೩) ದೊಡ್ಡ ಉದ್ಯಮಗಳೊಡನೆ ಪೈಪೋಟಿ ನಡೆಸಬೇಕಾಗಿರುವಂತಹವು. ಮೊದಲನೆಯ ಮಾದರಿಯಲ್ಲಿ ಕೀಲಿ, ಮೇಣ ಬತ್ತಿ, ಬಿರಡೆಗಳು, ಚಪ್ಪಲಿಗಳು, ಬ್ಯಾಜುಗಳು, ಮುಂತಾದವುಗಳನ್ನು ತಯಾರಿಸುವಂತಹ ಉದ್ಯಮಗಳು ಬರುವವು; ಎರಡನೆಯ ಮಾದರಿಯಲ್ಲಿ ಸಾಯಕಲ್ಲಿನ ಬಿಡಿಭಾಗಗಳು, ವಿದ್ಯುತ್ ಉಪಕರಣಗಳು, ಚಾಕುಕತ್ತರಿಗಳು, ಮಣ್ಣಿನ ಪಾತ್ರೆಗಳು, ಒಕ್ಕಲುತನ ಉಪಕರಣಗಳು ಇವು ಮುಖ್ಯ ಉದಾಹರಣೆಗಳಾಗುವುವು; ಮೂರನೆಯ ಮಾದರಿಯ ಉದಾಹರಣೆ ಕೈಮಗ್ಗಗಳು. ಈ ಉದ್ಯಮವು ಇಂದು ಗಂಡಾಂತರ ಸ್ಥಿತಿಯಲ್ಲಿರುವುದರಿಂದ ಯೋಗ್ಯ ಸಂರಕ್ಷಣೆ ಕೊಡುವ ವ್ಯವಸ್ಥೆ ಮಾಡಲಾಗುತ್ತಿದೆ. ಕಿರಿ ಉದ್ಯಮಗಳಿಂದ ಸಿದ್ಧವಾಗುವ ಸರಕುಗಳ ಬೇಡಿಕೆಯನ್ನು ಆಯಾತ ಸರಕುಗಳ ನಿಯಂತ್ರಣದಿಂದ, ಒಟ್ಟು ಸಂಗ್ರಹಿಸುವುದರಿಂದ ಹೆಚ್ಚಿಸಬಹುದಾಗಿದೆ. ಆಯಾತ ಧೋರಣೆಯೂ ಸಹಕಾರೀ ಪದ್ಧತಿಯ ಸಂಘಟನೆಯೂ ಈ ಎರಡೂ ಕಾರ್ಯವನ್ನು ಮಾಡಬಹುದಾಗಿದೆ.

ಕಿರಿ ಉದ್ಯಮಗಳ ಕಾರ್ಮಿಕರಿಗೆ ತರಬೇತಿ ಕೊಡುವುದು ಯೋಜನೆಯ ಮುಖ್ಯ ದೃಷ್ಟಿಗಳಲ್ಲಿ ಒಂದಾಗಿದೆ. ಉದ್ಯೋಗ ಒದಗಿಸಿಕೊಡುವ ಖಾತೆಯಿಂದ ೧೪೪,೦೦೦ ಜನರು, ಪುನರ್ನಿವೇಶನ ಸಚಿವಾಲಯದ ಮುಖಾಂತರ ೬೦,೦೦೦ ಜನರು, ಈಗಾಗಲೇ ತರಬೇತಿ ಪಡೆದವರಿದ್ದು ೧೨೦೦೦ ಜನರು ಈಗ ತರಬೇತಿ ಹೊಂದುತ್ತಿದ್ದಾರೆ. ರಾಜ್ಯಸರಕಾರಗಳ ಯೋಜನೆಯಲ್ಲಿ ತರಬೇತಿಗಾಗಿ ಈ ಕಾರ್ಯಕ್ರಮವಿದೆ:

| | ೧೯೫೦—೫೧ | ೧೯೫೫—೫೬ |
|---|---|---|
| ಔದ್ಯೋಗಿಕ ಶಾಲೆಗಳ ಸಂಖ್ಯೆ | ೩೬೫ | ೪೫೬ |
| ತರಬೇತಿ ಪಡೆದ ವಿದ್ಯಾರ್ಥಿಗಳ ಸಂಖ್ಯೆ | ೧೪,೭೫೦ | ೨೧,೭೯೭ |
| ತಾಂತ್ರಿಕ, ವ್ಯಾವಸಾಯಿಕ ಶಾಲೆಗಳ ಸಂಖ್ಯೆ | ೨೬೦ | ೪೦೭ |
| ತರಬೇತಿ ಪಡೆದ ಜನರ ಸಂಖ್ಯೆ | ೨೬,೭೦೨ | ೪೩,೯೯೭ |

ಯಾವ ಉದ್ಯಮಗಳಲ್ಲಿ ನಿತ್ಯ ಮತ್ತು ನಿರಂತರ ಉದ್ಯೋಗವು ದೊರೆವುದೋ ಅಂತಹ ಉದ್ಯಮಗಳಿಗಾಗಿ ತರಬೇತಿಯ ಕಡೆಗೆ ಹೆಚ್ಚು ಲಕ್ಷ್ಯ ಹಾಕುವುದು ಯೋಗ್ಯವೆನ್ನಿಸುತ್ತದೆ.

## ಕೈಗಾರಿಕೆ

ಕುಸುರಿನ ಕಾರ್ಯಕೌಶಲವು ಕೈಗಾರಿಕೆಯ ಮುಖ್ಯ ಲಕ್ಷಣವು. ಆದರೆ ದಲಾಲರ ಶೋಷಣದಿಂದ ಮತ್ತು ಮಾರಾಟದ ಯೋಗ್ಯ ಭರವಸೆಗಳು ಇರದೆ ಇರುವುದರಿಂದ ಒಳ್ಳೆಯ ಕೌಶಲದ ಕಾರ್ಯವುಳ್ಳ ವಸ್ತುಗಳು ಸಿದ್ಧವಾಗುವುದು ಕಡಿಮೆಯಾಗತೊಡಗಿದೆ. ಪರದೇಶಗಳಿಂದ ಹೆಚ್ಚಾಗಿ ಬೇಡಿಕೆ ಇದೆ. ಈ ವಸ್ತುಗಳು ಸೌಂದರ್ಯ–ಸುಖವಿಲಾಸ ಸಾಧನಗಳೆಂದು, ನಮ್ಮ ದೇಶದ ಜನರ ಜೀವನಮಟ್ಟವು ಹೀನಾಯವಾಗಿರುವುದರಿಂದ ದೇಶೀಯ ಬೇಡಿಕೆ ವಿಶೇಷವಾಗಿಲ್ಲ. ಕಾಶಿ, ಮುರಾದಾಬಾದ, ಜೈಪೂರ, ತಂಜಾವರಗಳಲ್ಲಿಯ ಹಿತ್ತಾಳೆ ಸಾಮಾನುಗಳು ಹೆಚ್ಚಿನ ಬೇಡಿಕೆಯುಳ್ಳವೆ. ಅವುಗಳ ಉತ್ಪಾದನೆ ಹೆಚ್ಚುವಂತೆಯಾಗಬೇಕಾಗಿದೆ. ಬನಾರಸದ ಜರತಾರೀ ಅರಿವೆಗಳಿಗೂ ಬೇಡಿಕೆಯಿದೆ. ಕತ್ತದ ಸಾಮಾನುಗಳು ತಮ್ಮ ಗುಣವಿಶೇಷಗಳನ್ನು ಬೆಳೆಯಿಸಿಕೊಂಡರೆ ಹೆಚ್ಚಿನ ಲಾಭವುಂಟಾಗುವ ಅವಕಾಶವಿದೆ. ಒಟ್ಟಿನಲ್ಲಿ ಉಪಯುಕ್ತತೆಯ ದೃಷ್ಟಿಯಿಂದ ಈ ಕೈಗಾರಿಕೆಯ ಬೆಳಗೆಯಾದರೆ ಸ್ವದೇಶ ಪರದೇಶಗಳಲ್ಲಿ ಅವುಗಳ ಮಾರಾಟವಾಗುವುದು. ಪ್ರದರ್ಶನ ಮತ್ತು ಮಾರಾಟದಂಗಡಿಗಳ ಮುಖಾಂತರ ಸರಕುಗಳು ಸಾರ್ವಜನಿಕರ ಕಣ್ಣಿಗೆ ಬೀಳುವಂತೆ ಮಾಡಬೇಕು. ಕೈಗಾರಿಕೆಯ ಶಿಲ್ಪಿಯು ದಲಾಲನಿಗೆ ಜೋತುಬೀಳದೆ, ಸಹಕಾರಿ ಸಂಘದ ಆಶ್ರಯ ಪಡೆಯುತ್ತ ಹೋದರೆ, ಮತ್ತು ಅವನಿಗೆ ಯೋಗ್ಯ ತಾಂತ್ರಿಕ ಶಿಕ್ಷಣವೂ ದೊರೆಯುವಂತೆಯಾದರೆ ಕಮರಿ ಕುಸಿಬಿದ್ದ ಕೈಗಾರಿಕೆಯ ವ್ಯವಸ್ಥೆಯು ಕುಮರುವುದಲ್ಲದೆ, ಕೊತವಿಕೊಂಡು ಎದ್ದು ತನ್ನ ಪ್ರಾಚೀನ ಹಿರಿಮೆ ವೈಭವಗಳನ್ನು ಮತ್ತೆ ನೆನಪಿಗೆ ತರುವಂತಾಗುವುದೆಂದು ಆಶಿಸಲಾಗಿದೆ. ಸರಕಾರವು ತನ್ನ ಭಾಗದ ಕಾರ್ಯವನ್ನು ಯೋಜನೆಯ ಮುಖಾಂತರ ಮಾಡಲಿದೆ. ಸಾರ್ವಜನಿಕರೂ ಸಹಕರಿಸಿ ಮುಂಬಂದು ಪ್ರೋತ್ಸಾಹಿಸಿದರೆ ಪ್ರಗತಿ ಕಟ್ಟಿಟ್ಟದ್ದು

---

ಪ್ರಕರಣ ಒಂಬತ್ತು :

# ನೀರಾವರಿ—ವಿದ್ಯುತ್

ಭಾರತೀಯರ ಜೀವನದಲ್ಲಿ ನದಿಗಳು ವಿಶೇಷ ಪ್ರಭಾವ ಬೀರಿವೆ. ಪ್ರಾಚೀನ ನಾಗರಿಕತೆಗಳು ಸಿಂಧು ಮತ್ತು ಗಂಗಾ ನದಿಗಳ ದಂಡೆಗುಂಟ ಬೆಳೆದುವು. ದಕ್ಷಿಣದಲ್ಲಿಯಾದರೂ ನದಿಗಳ ವಲಯದಲ್ಲಿಯೇ ನಾಗರಿಕತೆ ಬೆಳೆದಿದೆ. ದೇಶದ ಬಹುಭಾಗದಲ್ಲಿಯೂ ಒಕ್ಕಲುತನವು ನದಿಗಳ ನೀರನ್ನೂ ಅವಲಂಬಿಸಿದೆ. ಭೂಮಿಯ ಅಭಿವೃದ್ಧಿ ಮತ್ತು ನೀರಿನ ಸಂಚಯಗಳ ಸೌಕರ್ಯಾಭಿವೃದ್ಧಿಗಳು ಜತೆಗೂಡಿ ಸಾಗಿದರೆ ದೇಶದ ಆರ್ಥಿಕ ಉನ್ನತಿಯು ನಿಶ್ಚಿತ ದಾರಿಯಲ್ಲಿ ಸಾಗುವುದು.

ನೀರಾವರಿಯು ಭಾರತದಲ್ಲಿ ಬೆಳೆದುಬಂದ ಬಹು ಹಳೆಯ ಕಲೆಯಾಗಿದೆ. ದೇಶದ ಅನೇಕ ಎಡೆಗಳಲ್ಲಿ ಅದು ಒಕ್ಕಲುತನದ ಜತೆಗೇ ಹುಟ್ಟಿಕೊಂಡಿದೆ. ದಕ್ಷಿಣದಲ್ಲಿ ಕಂಡುಬರುವ ಅನೇಕ ಕೆರೆಗಳು ಶತಮಾನಗಳಿಂದ ಅಸ್ತಿತ್ವದಲ್ಲಿವೆ. ಕಾವೇರಿ ಕಾಲುವೆಗಳು ಕ್ರಿ. ಶ. ಎರಡನೆಯ ಶತಕದಿಂದಲೇ ಬೆಳೆದುಬಂದಿವೆ. ಯಮುನಾ ನದಿಯ ಕಾಲುವೆಗಳು ೧೪ನೆಯ ಶತಕದಲ್ಲಿ ರಚಿತವಾದುವು. ವಿಜಯನಗರದ ಅರಸರ ಕಾಲಕ್ಕೆ ತುಂಗಭದ್ರೆಯ ಕಾಲುವೆಗಳು ಕೆಲವು ರೂಪುಗೊಂಡುವು. ನದಿಯ ನೀರಲ್ಲದೆ, ಭೂಗರ್ಭದಲ್ಲಿಯ ನೀರು ಪ್ರಯೋಜನಕಾರಿಯಾಗಿದೆ. ನದಿಯ ನೀರಿನ ಯೋಜನೆಯ ಜತೆಗೆ ಭೂಗರ್ಭದ ನೀರಿನ ಉಪಯೋಗದ ಯೋಜನೆಯನ್ನು ಜೋಡಿಸಿದರೆ ಹೆಚ್ಚಿನ ಲಾಭವಾಗುವುದು.

ಇತ್ತೀಚೆ ನೀರಿನಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗುತ್ತಿದೆ. ಎಣ್ಣೆಯ ನೆಲೆಗಳು ಸಾಕಷ್ಟಿಲ್ಲದ, ಕಲ್ಲಿದ್ದಲಿ ಕಣಿಗಳು ಒಂದೆಡೆಯಲ್ಲಿ

ಕೇಂದ್ರೀಕೃತವಾದ ಭಾರತದಲ್ಲಿ ವಿದ್ಯುಚ್ಛಕ್ತಿಯು ಬಹು ಮುಖ್ಯಪಾತ್ರ ವಹಿಸುವ ಹಾಗಿದೆ.

## ಜಲ ಸಂಪತ್ತು

ಭಾರತದಲ್ಲಿಯ ನದಿಗಳನ್ನು, ಸ್ಥೂಲದೃಷ್ಟಿಯಿಂದ ಎರಡು ವರ್ಗಗಳಾಗಿ ಮಾಡಬಹುದು: ಒಂದು, ಹಿಮಸ್ರೋತಿತ ನದಿಗಳು; ಎರಡು, ಮೇಘಸ್ರೋತಿತ ನದಿಗಳು. ಹಿಮಸ್ರೋತಿತ ನದಿಗಳು ಉತ್ತರಭಾರತದಲ್ಲಿವೆ; ಮೇಘಸ್ರೋತಿತ ನದಿಗಳು ಮಧ್ಯ ಮತ್ತು ದಕ್ಷಿಣ ಭಾರತದಲ್ಲಿವೆ. ಹಿಮಾಲಯದಿಂದ ಹರಿವ ನದಿಗಳಲ್ಲಿ ಸಿಂಧು, ಗಂಗಾ ಮತ್ತು ಬ್ರಹ್ಮಪುತ್ರಾ ಇವು ಮುಖ್ಯವಾದುವು. ಇವುಗಳಿಗೆ ಅನೇಕ ಉಪನದಿಗಳಿವೆ. ಮಧ್ಯ ಮತ್ತು ದಕ್ಷಿಣ ಭಾರತದ ಮುಖ್ಯ ನದಿಗಳೆಂದರೆ, ಮಹಾನದಿ, ಗೋದಾವರಿ, ಕೃಷ್ಣಾ, ಕಾವೇರಿ; ಇವು ಪೂರ್ವಕ್ಕೆ ಹರಿಯುವುವು; ನರ್ಮದಾ, ತಾಪಿ ಇವು ಪಶ್ಚಿಮಕ್ಕೆ ಹರಿಯುವುವು. ಈ ಮುಖ್ಯ ನದಿಗಳಿಗೆ ಅನೇಕ ಉಪನದಿಗಳಿವೆ. ಹಿಮಸ್ರೋತಿತ ನದಿಗಳು ಇಡಿ ವರುಷವೆಲ್ಲವೂ ಹರಿಯುವುವು. ಚಳಿಗಾಲದಲ್ಲಿ ತುಸ ನೀರು ತಗ್ಗಿರುವುದು; ಮೇಘಸ್ರೋತಿತ ನದಿಗಳಾದ ಮಧ್ಯ ಮತ್ತು ದಕ್ಷಿಣದ ನದಿಗಳು ಮಳೆಗಾಲದಲ್ಲಿ ತುಂಬಿ ಹರಿವುವು; ಬೇಸಗೆಯಲ್ಲಿ ನೀರು ತಗ್ಗಿರುವುದು. ಈ ಎಲ್ಲ ನದಿಗಳಲ್ಲಿಯ ನೀರು ವರುಷಕ್ಕೆ ೧೩೫೦ ಲಕ್ಷ ಎಕರೆ–ಫೂಟದಷ್ಟು ಸಮುದ್ರಕ್ಕೆ ಹೋಗುತ್ತದೆಂದು ಅಂದಾಜು ಮಾಡಲಾಗಿದೆ. ಇದರಲ್ಲಿ ಸುಮಾರು ೭೬೦ ಲಕ್ಷ ಎಕರೆ–ಫೂಟದಷ್ಟು ನೀರು ಮಾತ್ರ ಇಂದು ನೀರಾವರಿಗಾಗಿ ಪ್ರಯೋಜನವಾಗುತ್ತಿವೆ. ದೊಡ್ಡ ನೀರಾವರಿ ಯೋಜನೆಗಳಾದ ಭಾಕ್ರಾನಂಗಾಲದಿಂದ ೮೦ ಲಕ್ಷ, ದಾಮೋದರ ಕೊಳ್ಳದ ಯೋಜನೆಯಿಂದ ೨೭ ಲಕ್ಷ, ಹಿರಾಕುಡದಿಂದ ೧೧೦ ಲಕ್ಷ, ತುಂಗಭದ್ರಾದಿಂದ ೬೦ ಲಕ್ಷ ಎಕರೆ–ಫೂಟುಗಳಷ್ಟು ನೀರನ್ನು ನೀರಾವರಿಗಾಗಿ ಪಡೆಯಬಹುದೆಂದು ಕಂಡಿದೆ; ಇವಲ್ಲದೆ ಕಾಕರಪಾರಾ, ಮಾಂಕೆ, ಚಂಬಳ, ಘಟಪ್ರಭಾ ಮೊದಲಾದ ಕಿರಿಯೋಜನೆಗಳಿಂದಲೂ ವಿಶೇಷವಾಗಿ ನೀರಿನ ಸಂಚಯವು ನೀರಾವರಿಗಾಗಿ ದೊರೆಯುವುದು.

ಇದಲ್ಲದೆ ಹಿರಿಹಳ್ಳ–ಕಿರಿ ಹೊಳೆಗಳಿಂದ ಮಳೆಗಾಲದಲ್ಲಿ ನೀರಿನ ಸಂಚಯು

ಮಾಡಿಕೊಳ್ಳುವುದು ಸಾಧ್ಯವಿದ್ದು ಇಲ್ಲಿ ನೀರಾವರಿಗಾಗಿ ಕಟ್ಟಡಗಳ ಏರ್ಪಾಡು ಅನೇಕ ಕಡೆಗಳಲ್ಲಿ ಆಗಿದೆ. ಭೂಗರ್ಭದ ನೀರನ್ನು ಬಾವಿತೆಗೆದು, ಕೊಳವೆಬಾವಿ ಮಾಡಿ, ಗೃಹಕೃತ್ಯಕ್ಕೆ ಔದ್ಯೋಗಿಕ ಕಾರ್ಯಗಳಿಗೆ ನೀರನ್ನು ಬಳಸಲಾಗುತ್ತಿದೆ. ಬಾವಿ, ಕೆರೆ, ಸರೋವರಗಳು, ಶತಕಾನುಶತಕಗಳಿಂದ ಜೀವನೋಪಯೋಗಿಯಾದ ಕಾರ್ಯ ಮಾಡಿವೆ.

## ನೀರಾವರಿಗಾಗಿ

ನೀರಾವರಿಗಾಗಿ ನೀರನ್ನು ಮೂರು ರೀತಿಯಲ್ಲಿ ಪಡೆಯಬಹುದು: (೧) ನದಿಯ ನೀರನ್ನೇ ನೇರವಾಗಿ, ಕಾಲುವೆಗಳ ಮುಖಾಂತರ ಪಡೆಯುವುದು; (೨) ಹೊಳೆ ತುಂಬಿ ಹರಿಯುವಾಗ; ಮಳೆ ಬಿದ್ದು ನೀರು ಹಿಡಿಯಲ್ಪಟ್ಟಾಗ ಜಲಸಂಚಯ ಮಾಡಿಕೊಂಡು ಉಪಯೋಗಿಸುವುದು; ಆಣೆಕಟ್ಟು, ಬಾಂದು ಮುಂತಾದವುಗಳನ್ನು ಹಾಕಿ; (೩) ಬಾವಿ-ಕೊಳವೆ ಬಾವಿಗಳನ್ನು ಅಗಿಯುವುದು. ನದಿಗಳಲ್ಲಿ ಹರಿಯುವ ಎಲ್ಲ ನೀರೂ ನೀರಾವರಿಗೆ ಬೇಕಿಲ್ಲ; ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಅವಶ್ಯಕವೂ ಇರಲಿಕ್ಕಿಲ್ಲ. ಉಳಿದೆಡೆ, ಮಳೆಗಾಲದಲ್ಲಿ ಬಂದ ನದಿಯ ನೀರು ತಡೆಹಿಡಿಯಲ್ಪಟ್ಟು ಉಪಯೋಗಿಸಲಾಗದಿದ್ದರೆ, ಅದು ಸಮುದ್ರ ಕೂಡುವುದು; ಮಳೆಗಾಲದ ನಂತರ ಭೂಮಿ ಬಾಯಿಬಿಡುವುದು; ಕೆಲವೆಡೆ ಭೂಮಿಗೆ ಸಾಕಾಗುವಷ್ಟು ಮಳೆಯೂ ಬೀಳುವುದಿಲ್ಲ; ಬಿದ್ದುದು ಸಕಾಲಕ್ಕೆ ಒನ್ನೊನ್ನು ಆಗುವುದಿಲ್ಲ. ಭಾರತದಲ್ಲಿಯ ನದಿಗಳಿಂದ ಸಮುದ್ರ ಸೇರುವ ೧೩೫೬೦ ಲಕ್ಷ ಎಕರೆ-ಫೂಟು ನೀರಿನಲ್ಲಿಯ ೪೫೦೦ ಲಕ್ಷ ಎಕರೆ-ಫೂಟದಷ್ಟು ಮಾತ್ರ ನೀರಾವರಿಗೆ ಬಳಸಿಕೊಳ್ಳಬಹುದು ಎಂದು ಲೆಕ್ಕಹಾಕಲಾಗಿದೆ. ಸದ್ಯಕ್ಕೆ ಕೇವಲ ೭೬೦ ಲಕ್ಷ ಎಕರೆ-ಫೂಟದಷ್ಟು ಮಾತ್ರ ನೀರು ಈ ಬಗೆಯಿಂದ ಲಭ್ಯವಾಗುತ್ತಲಿದೆ.

ಸುಮಾರು ನೂರು ವರುಷಗಳ ಹಿಂದೆ, ೨೦-೩೦ ಲಕ್ಷ ಎಕರೆಯಷ್ಟು ಮಾತ್ರ ಭೂಮಿ ಸ್ಥಾನಿಕ ನೀರಾವರಿಗಳಿಂದ ಅಂದರೆ, ಕೆರೆ-ಕಟ್ಟೆಗಳಿಂದ ನೀರು ಉಣ್ಣುತ್ತಿತ್ತು. ಮತ್ತು ಪಶ್ಚಿಮಭಾರತದಲ್ಲಿಯ ಸುಮಾರು ೫೦ ಲಕ್ಷ ಎಕರೆ ಭೂಮಿ ಬಾವಿ ನೀರಿನಿಂದ ನೀರು ಉಣ್ಣುತ್ತಿತ್ತು. ಪ್ರಥಮತಃ ಭಾರತದಲ್ಲಿ ದೊಡ್ಡ ನೀರಾವರಿ ಕಟ್ಟಡವೆಂದರೆ, ಗಂಗಾ ಕಾಲುವೆ, ೧೮೫೪ ರಲ್ಲಿ



**ಪಂಚವಾರ್ಷಿಕ ಯೋಜನೆಯಲ್ಲಿಯ ಘಟಪ್ರಭಾ ಕಾಲುವೆ.**
ಜಗನೂರ ಹತ್ತರ ಹರಿಯುತ್ತಿರುವ ಕಾಲುವೆಯ ನೋಟ
(ಮುಂಬಯಿ ಸರಕಾರದ ಪ್ರಕಟನಾಶಾಖೆಯ ಕೃಪೆಯಿಂದ)



ಬೆಳಗಾವಿ ಜಿಲ್ಲೆಯಲ್ಲಿ ನಡೆದ **ಸಮಾಜ ವಿಕಾಸ ಯೋಜನೆಯಲ್ಲಿ**
ವಡ್ಡರು ಸಹಕಾರಿ ತತ್ವದಮೇಲೆ ತಮ್ಮ ಮನೆಗಳನ್ನು
ತಾವೇ ಕಟ್ಟುತ್ತಿರುವ ನೋಟ
(ಸಮಾಜ ವಿಕಾಸ ಕಾರ್ಯಾಲಯದ ಕೃಪೆಯಿಂದ)

ಕಟ್ಟಲಾಯಿತು. ಇದರ ನಂತರ ದುಆಬ ಕಾಲುವೆ, ಗೋದಾವರಿ ಕೃಷ್ಣಾ ಕಾಲುವೆಗಳು ಕಟ್ಟಲಾದುವು. ೧೯೦೦ರ ಸುಮಾರು ಅನೇಕ ಚಿಕ್ಕ ಪುಟ್ಟ ಯೋಜನೆಗಳು ಕಾರ್ಯಗತವಾದುವು. ಮೊದಲ ಮಹಾಯುದ್ಧದ ಅನಂತರ ಕೆಲ ದೊಡ್ಡ ನೀರಾವರಿಗಳು ಅಸ್ತಿತ್ವದಲ್ಲಿ ಬಂದುವು.

ಇತ್ತೀಚೆಗೆ ವಿದ್ಯುಚ್ಛಕ್ತಿ ಚಾಲಿತ ಕೊಳವೆಬಾವಿಗಳು ಭೂಗರ್ಭದ ನೀರನ್ನು ನೀರಾವರಿಗಾಗಿ ಉಪಲಬ್ಧಮಾಡಿವೆ. ಉತ್ತರ ಪ್ರದೇಶದಲ್ಲಿ ೨೦೦೦ ಕೊಳವೆಬಾವಿಗಳು ಸರಕಾರದ ಒಡೆತನದಲ್ಲಿದ್ದುವು ಅವೆ. ಬಿಹಾರ ಮತ್ತು ಪಂಜಾಬಗಳಲ್ಲಿ ಈ ಬಗ್ಗೆ ಕಾರ್ಯವೂ ನಡೆದಿದೆ. ಕಾಲುವೆ ನೀರಾವರಿಗಿಂತ ಕೊಳವೆಬಾಯಿಯ ನೀರಾವರಿಯು ಹೆಚ್ಚು ವೆಚ್ಚದ ವಿಷಯ.

ಭಾರತದಲ್ಲಿ ಒಂದು ವರುಷಕ್ಕೆ ಸುಮಾರು ೨೭೭೦ ಲಕ್ಷ ಎಕರೆ ಭೂಮಿ ಸಾಗುವಳಿಯಾಗುವುದು; ಎಲ್ಲ ಬಗೆಯ ನೀರಾವರಿ ವ್ಯವಸ್ಥೆಯಿಂದ ನೀರು ಉಣ್ಣುವ ಭೂಮಿ ಇದರಲ್ಲಿ ಕೇವಲ ೫೦೦ ಲಕ್ಷ ಎಕರೆ ಮಾತ್ರ. ನೀರಾವರಿ ಗಾಗಿ ಬಾಯಿಬಿಡುವ ಕ್ಷೇತ್ರವು ಇನ್ನೂ ಬೇಕಾದಷ್ಟಿದೆ ಎಂದು ಇದರಿಂದ ಕಂಡುಬರುವುದು. ನೀರಾವರಿ ಸೌಕರ್ಯ ಹೆಚ್ಚಿದಂತೆಲ್ಲ, ಪಡಭೂಮಿ, ಬೀಳುಭೂಮಿಗಳನ್ನು ಸಾಗುವಳಿ ಮಾಡಿ ಒಟ್ಟು ಸಾಗುವಳಿ ಕ್ಷೇತ್ರವನ್ನು ವಿಸ್ತರಿಸಬಹುದಾಗಿದೆ; ನೀರಾವರಿಯಿಂದ ಈಗಿನಕಿಂತ ಉತ್ಪಾದನ ಪ್ರಮಾಣ ವನ್ನು ಎಲ್ಲೆಡೆಯಲ್ಲಿಯೂ ಹೆಚ್ಚಿಸಬಹುದಾಗಿದೆ. ನೀರಾವರಿ ಸೌಕರ್ಯ ವಿದ್ದಲ್ಲಿ ಸುಧಾರಿಸಿದ ಒಕ್ಕಲುತನ ಉಪಕರಣ ಪದ್ಧತಿಯನ್ನು ಉಪ ಯೋಗಿಸಲು ಉತ್ತೇಜನವೂ ದೊರೆಯಬಹುದಾಗಿದೆ. ವರುಷದಲ್ಲಿ ಎರಡು, ಮೂರು ಬೆಳೆಗಳನ್ನು ಪಡೆಯಬಹುದಾಗಿದೆ. ಸುಧಾರಿಸಿದ ಬೀಜ, ಗೊಬ್ಬರ ಗಳಿಂದ ಉತ್ಪಾದನೆಯು ಇನ್ನೂ ಹೆಚ್ಚಲು ಅವಕಾಶವಿದೆ. ಉತ್ಪಾದನ ಹೆಚ್ಚುವುದರಿಂದ ಹೆಚ್ಚು ಜನರಿಗೆ ಉದ್ಯೋಗವೂ ಉಂಟಾಗಿ ಭಾರತದ ಕೃಷಿ ಜೀವನದಲ್ಲಿಯೆ ಎಂದಿಲ್ಲದಂತಹ ಮಾರ್ಪಾಟು ಆಗಬಹುದಾಗಿದೆ. ಅನು ಕೂಲವಿದ್ದ ಎಲ್ಲ ನೀರಾವರಿ ಸಂಪತ್ತನ್ನೂ ಉಪಯೋಗಿಸಿಕೊಂಡರೆ, ಭಾರತದ ಬೆಳೆಯುವ ಜನತೆಗೂ ಪೋಷಣಾಯುಕ್ತ ಉಚ್ಚಮಟ್ಟದ ಆಹಾರ ಒದಗಿಸು ವುದು ಸುಲಭಸಾಧ್ಯವಾಗುವುದು. ಇದನ್ನು ಸಾಧ್ಯಮಾಡಿಕೊಳ್ಳಬೇಕಾದರೆ ಈಗಿದ್ದ ನೀರಾವರಿ ಪೋಷಿತ ಕ್ಷೇತ್ರವು ಇಮ್ಮಡಿಯಾಗಬೇಕು.

ನದಿಗಳಿಂದ ವಾಹತೂಕದ ಸೌಕರ್ಯವನ್ನು ಪಡೆಯಬಹುದಾಗಿದೆ. ಒಂದು ಕಾಲಕ್ಕೆ ಉತ್ತರಭಾರತದ ನದಿಗಳೇ ಸಂಪರ್ಕ ಸಾಧನಗಳಾಗಿದ್ದುವು. ರೈಲ್ವೆಗಳ ಅಭಿವೃದ್ಧಿಯಿಂದ ಜಲಯಾನವು ಕಡಿಮೆಯಾಗಿ ಈಗ ಅಸಾಮು ಪಶ್ಚಿಮಬಂಗಾಲ ಮತ್ತು ಬಿಹಾರಗಳಲ್ಲಿ ಮಾತ್ರ ಅದು ಹೆಚ್ಚಾಗಿ ಕಂಡು ಬರುತ್ತದೆ. ನದಿಗಳ ಮಹಾಪೂರದಿಂದ ಪ್ರತಿವರುಷ ಅನೇಕ ಕಡೆ ಹಾನಿ ಸಂಭವಿಸುತ್ತದೆ. ಇದನ್ನು ತಪ್ಪಿಸಲು ಯೋಜನಾಬದ್ಧ ಅಣೆಕಟ್ಟುಗಳೇ ಯೋಗ್ಯ ಉಪಾಯವೆಂದು ಕಂಡುಬಂದಿದೆ. ನೀರನ್ನು ಹೀಗೆ ಸಂಚಯ ಮಾಡಿ ನಿಯಂತ್ರಿಸುವುದರಿಂದ ಮಹಾಪೂರದಿಂದ ಕೊಚ್ಚಿಕೊಂಡು ಹೋಗುವುದು ಕಡಿಮೆಯಾಗುವುದಲ್ಲದೆ ಜಲಯಾನವು ವರುಷವೆಲ್ಲವೂ ಸಾಧ್ಯವಾಗುತ್ತದೆ. ಜಲಯಾನವು ದೇಶದ ಸಂರಕ್ಷಣೆಯ ಸಂದರ್ಭಗಳಲ್ಲಿ ಬಹು ಉಪಯೋಗಕಾರಿ ಸಾರಿಗೆ ಸಾಧನವಾಗುವುದು.

## ವಿದ್ಯುಚ್ಛಕ್ತಿ

ವಿದ್ಯುಚ್ಛಕ್ತಿಯನ್ನು ಕಲ್ಲಿದ್ದಲಿ, ಖನಿಜ ಎಣ್ಣೆ ಮುಂತಾದವುಗಳಿಂದಲೂ ಉತ್ಪಾದಿಸಲು ಬರುತ್ತದೆ. ಆದರೆ ಇವುಗಳ ಪೂರೈಕೆ ಮಿತವಾದುದು. ಅಮಿತ ಪೂರೈಕೆ, ನಿರಂತರವಾದ ಸೆಲೆಯಾಗಿರುವ ನೀರಿನಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿದರೆ ಸಾಧ್ಯವಾಗುವುದು. ಭಾರತದಲ್ಲಿಯ ಪೆಟ್ರೋಲಿಯಂ ಪೂರೈಕೆ ಬಹು ಮಿತವಾಗಿದೆ. ಕಲ್ಲಿದ್ದಲ್ಲಿಯ ಸ್ಥಿತಿಯೂ ಅಷ್ಟು ಆಶಾದಾಯಕವಿಲ್ಲ. ಕಲ್ಲಿದ್ದಲಿ ಬೇರೆ ರಾಸಾಯನಿಕ ಮತ್ತು ಧಾತು ಕಾರ್ಯಗಳಿಗೆ ಅಗತ್ಯವೂ ಆಗಿರುವುದು. ಅಲ್ಲದೆ ಕಲ್ಲಿದ್ದಲಿ ಕಣಿಗಳು ದೇಶದ ಒಂದು ಮೂಲೆಯಲ್ಲಿರುವುದರಿಂದ ಎಲ್ಲೆಡೆಗೂ ಕಲ್ಲಿದ್ದಲಿ ಸಾಗಿಸುವುದು ಸಾಮಾನ್ಯ ಮಾತಾಗದು. ದೂರದ ಸಾರಿಗೆಯಿಂದ ಔದ್ಯೋಗಿಕ ಉತ್ಪಾದನೆಯಲ್ಲಿ ಹೆಚ್ಚು ವೆಚ್ಚ ಬರುವುದು. ಆದುದರಿಂದ ಜಲವಿದ್ಯುತ್ ಶಕ್ತಿ ಉತ್ಪಾದನೆಯೇ ಯೋಗ್ಯ ಸಾಧನವಾಗಿದೆ. ಒಟ್ಟಿನಲ್ಲಿ ೪೦೦ ಲಕ್ಷ ಕಿಲೋವ್ಯಾಟ ಶಕ್ತಿಯನ್ನು ಉತ್ಪಾದಿಸುವ ಸತ್ವಸಾಮರ್ಥ್ಯ ಭಾರತಕ್ಕಿದೆಯೆಂದು ಲೆಕ್ಕ ಹಾಕಲಾಗಿದೆ.

ಹಿಂದಿನ ಕಾಲದಲ್ಲಿ ವಿದ್ಯುಚ್ಛಕ್ತಿಯನ್ನು ಪಟ್ಟಣಗಳಲ್ಲಿಯ ಗೃಹ ಸೌಕರ್ಯ, ಔದ್ಯೋಗಿಕ ಚಾಲಕ ಶಕ್ತಿಗಾಗಿ ಉತ್ಪಾದಿಸಲಾಗುತ್ತಿತ್ತು. ಕಳೆದ ಶತಕದ ಕೊನೆಯಲ್ಲಿ ಕಲಕತ್ತೆಯಲ್ಲಿ ಸ್ಥಾಪಿಸಲಾದ ವಿದ್ಯುತ್ಕೇಂದ್ರವೇ ನಮ್ಮ ದೇಶದಲ್ಲಿ ಮೊದಲನೆಯದು. ಮುಂದಿನ ೨೦ ವರುಷಗಳಲ್ಲಿ ಅನೇಕ ಪಟ್ಟಣಗಳಲ್ಲಿ ವಿದ್ಯುತ್ ಸೌಕರ್ಯ ದೊರೆಯುವಂತಾಯಿತು. ಆದರೂ ೧೯೨೦ರ ವರೆಗಿನ ಪ್ರಗತಿ ಕುಂಠಿತವಾದದ್ದು. ಆದರೆ ಮುಂದಿನ ಕಾಲಾವಧಿಯಲ್ಲಿ ಮಾತ್ರ ವಿದ್ಯುಚ್ಛಕ್ತಿಯ ಉತ್ಪಾದನೆಯಲ್ಲಿ ತೀವ್ರಗತಿ ಕಂಡು ಬಂದಿದೆ. ೧೯೩೯ರಲ್ಲಿ ೧೦ ಲಕ್ಷ ಕಿಲೋವ್ಯಾಟ ಶಕ್ತಿ ಉತ್ಪಾದನವಾಗುತ್ತಿದ್ದು ೧೯೫೦ರಲ್ಲಿ ೧೭ ಲಕ್ಷ ಕಿಲೋವ್ಯಾಟಿಗೆ ಮುಟ್ಟಿತ್ತು. ಸಾರ್ವಜನಿಕ ಉಪಯೋಗಿಯಾದ ಈ ಕೇಂದ್ರಗಳಲ್ಲದೆ, ರೇಲ್ವೆಗಳಲ್ಲಿ, ಬೇರೆ ಕೆಲವು ಉದ್ಯಮಗಳಲ್ಲಿ ಸ್ವಾಯತ್ತವಾದ ಕೇಂದ್ರಗಳೂ ಇದ್ದುವು. ಈ ಕೇಂದ್ರಗಳಿಂದ ೧೯೫೦ರಲ್ಲಿ ೫,೮೫,೦೦೦ ಕಿಲೊವ್ಯಾಟ ಶಕ್ತಿ ಉತ್ಪಾದನವಾಗುತ್ತಿದ್ದುದು ಕಂಡು ಬಂದಿದೆ. ಇವೆಲ್ಲವೂ ಸೇರಿ ೧೯೫೦ರಲ್ಲಿ ಭಾರತದಲ್ಲಿಯ ವಿದ್ಯುಚ್ಛಕ್ತಿಯ ಉತ್ಪಾದನೆಯು ಸುಮಾರು ೨೩ ಲಕ್ಷ ಕಿಲೊವ್ಯಾಟದಲ್ಲಿ ಇತ್ತು. ಇದರಲ್ಲಿ ಸುಮಾರು ೫ ಲಕ್ಷದಷ್ಟು ಮಾತ್ರ ಜಲವಿದ್ಯುಚ್ಛಕ್ತಿಯಾಗಿತ್ತು. ಈಗ ಭಾರತದಲ್ಲಿ ೨೦,೦೦೦ಕ್ಕೆ ಮೇಲ್ಪಟ್ಟ ಜನವಸತಿಯಿರುವ ಪಟ್ಟಣಗಳಿಗೆ ವಿದ್ಯುತ್ ಪೂರೈಕೆಯಾಗುತ್ತಲಿದೆ. ಹಳ್ಳಿಗಳಿಗೆ ಮಾತ್ರ ಇನ್ನೂ ಸಾಕಷ್ಟು ಮುಟ್ಟುವಂತಾಗಿಲ್ಲ. ದೇಶದಲ್ಲಿನ ಸುಮಾರು ಒಟ್ಟು ೫,೬೦,೦೦೦ ಹಳ್ಳಿಗಳಲ್ಲಿ ಕೇವಲ ೩೦೦೦ ಹಳ್ಳಿಗಳಿಗೆ ಮಾತ್ರ ವಿದ್ಯುತ್ ಪೂರೈಕೆಯಾಗುತ್ತಿದೆ. ಇವಾದರೂ ಮೈಸೂರು, ಮದ್ರಾಸ ಮತ್ತು ಉತ್ತರ ಪ್ರದೇಶದ ಹಳ್ಳಿಗಳಿಗೆ ಮರ್ಯಾದಿತವಾಗಿದೆ. ಈ ವಿದ್ಯುಚ್ಛಕ್ತಿಯು ಜಲವಿದ್ಯುತ್ ಕೇಂದ್ರಗಳ ಬೆಳಗೆಯ ಮೂಲಕವಾಗಿದೆ.

ವಿದ್ಯುಚ್ಛಕ್ತಿಯ ಸುಲಭ ಸೌಕರ್ಯವು ರಾಷ್ಟ್ರದ ಬೆಳವಣಿಗೆಗೆ ಮುಖ್ಯ ಚಾಲಕ ಶಕ್ತಿಯಾಗಿ ಪರಿಣಮಿಸಿದೆ; ಅದು ಜೀವನಮಟ್ಟದ ಲಕ್ಷಣವೂ ಆಗಿದೆ. ನೀರಾವರಿಗಾಗಿ ನೀರು ಪಂಪುಮಾಡಲಿಕ್ಕೆ ಅದರ ಉಪಯೋಗವಿದೆ. ಒಕ್ಕಲುತನದ ಇನ್ನು ಕೆಲವು ಕಾರ್ಯಗಳಿಗೂ ಗೃಹಕೃತ್ಯಗಳಿಗೂ ಅದರ ಉಪಯೋಗವಿದೆ. ವಿದ್ಯುಚ್ಛಕ್ತಿಯಿಂದ ಗ್ರಾಮಜೀವನದಲ್ಲಿಯ ಆವಶ್ಯಕವಾದ

ಪರಿವರ್ತನವಾಗುವುದು. ಒಕ್ಕಲತನದಲ್ಲಿಯ ಉತ್ಪಾದನ ಪದ್ಧತಿಗಳಲ್ಲಿ ಸುಧಾರಣೆ, ಗುಡಿ ಕೈಗಾರಿಕೆಗಳು ಮತ್ತು ಕಿರಿ ಉದ್ಯಮಗಳು ಇವುಗಳಿಗೆ ಉತ್ತೇಜನ ದೊರೆಯುವುದಲ್ಲದೆ ಗ್ರಾಮಜೀವನವು ಆಕರ್ಷಕವಾಗುವುದು. ಇದರಿಂದ ಪಟ್ಟಣಗಳಲ್ಲಿ ಗ್ರಾಮದ ಜನರು ಬಂದು ಸೇರಿಕೊಳ್ಳುವ ಪರಿಮಾಣವು ಕಡಿಮೆಯಾಗುವುದು. ಕಳೆದ ಹತ್ತು ಹದಿನೈದು ವರುಷಗಳಲ್ಲಿ ಸಾಕಷ್ಟು ಪ್ರಗತಿಯಾಗಿದ್ದರೂ ಭಾರತದಲ್ಲಿ ವಿದ್ಯುಚ್ಛಕ್ತಿಯ ಉತ್ಪಾದನೆ ಬಹಳ ಕಡಿಮೆಯಿದೆ. ವಿದ್ಯುಚ್ಛಕ್ತಿಯ ಬೇಡಿಕೆಯು ಸಾರ್ವತ್ರಿಕವಾಗಿದೆ. ಕೆಲ ವೆಡೆಗಳಲ್ಲಿ ಇದ್ದ ಉತ್ಪಾದನ ಸಾಧನಗಳಿಂದ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸುವ ಸ್ಥಿತಿ ಬಂದಿದೆ; ಈ ಸಾಧನಗಳು ಕೂಡ ಸವಕಳಿಯಿಂದ ತಮ್ಮ ಉಪಯುಕ್ತತೆ ಕಡಿಮೆಮಾಡಿಕೊಳ್ಳುತ್ತಲಿವೆ. ಅವುಗಳನ್ನು ಬದಲು ಮಾಡುವುದು ಅತ್ಯಗತ್ಯವಿದೆ.

## ಯೋಜನೆಯಲ್ಲಿ ಬೆಳಗೆ

ನೀರಾವರಿ ಮತ್ತು ವಿದ್ಯುಚ್ಛಕ್ತಿಯ ಅಭಿವೃದ್ಧಿಯು ರಾಜ್ಯಸರಕಾರಗಳ ಹೊಣೆಯ ವಿಷಯವಾಗಿದ್ದರೂ ರಾಷ್ಟ್ರೀಯ ಧೋರಣೆಯೊಂದನ್ನು ರೂಪಿಸುವುದು ಹಲವಾರು ಕಾರಣಗಳ ಮೂಲಕ ಆವಶ್ಯಕವಾಗಿದೆ. ಒಂದು: ನೀರಾವರಿಗಾಗಿ ದೇಶದ ಎಲ್ಲ ಭಾಗಗಳಲ್ಲಿ ಸೌಕರ್ಯಗಳಿಲ್ಲ; ಎಲ್ಲಿ ಸೌಕರ್ಯವಿದೆ ಅಲ್ಲಿ ಇಡಿ ರಾಷ್ಟ್ರದ ಆಹಾರ ಉತ್ಪಾದನೆಗಾಗಿ ಅಭಿವೃದ್ಧಿಕಾರ್ಯ ಕೈಕೊಳ್ಳಲೇಬೇಕಾಗಿದೆ. ಎರಡು: ಈಗ ಕಾರ್ಯಕಾರಿಯಾಗುತ್ತಿದ್ದ ಮತ್ತು ಮುಂದೆ ಕಾರ್ಯವ್ಯಾಪ್ತಿಯಲ್ಲಿ ಬರುವ ನೀರಾವರಿ ಕಟ್ಟಡಗಳು ಸ್ಥಾಪತ್ಯ ಶಾಸ್ತ್ರೀಯ ಸಮಸ್ಯೆಗಳನ್ನು ಒಡ್ಡುತ್ತಿರುವುದರಿಂದ ದೇಶದಲ್ಲಿ ಉಪಲಬ್ಧವಿದ್ದ ಬೌದ್ಧಿಕ ಸಂಪತ್ತಿಯ ಉಪಯೋಗವಾಗಬೇಕಾಗಿದೆ. ಮೂರು: ನದೀ ಕೊಳ್ಳಗಳು ರಾಜ್ಯಗಳ ಸೀಮೆಗೆ ಮರ್ಯಾದಿತವಾಗಿರದೆ ಇರುವುದರಿಂದ ಸಂಬಂಧೀಕರಣವಿಲ್ಲದೆ ಅಪೇಕ್ಷಿತ ಪರಿಣಾಮ ಸಾಧ್ಯವಾಗುವುದಿಲ್ಲ. ಒಂದು ರಾಜ್ಯದಲ್ಲಿ ಸಂಚಯಿತವಾದ ನೀರು ಇನ್ನೊಂದು ರಾಜ್ಯಕ್ಕೆ, ಒಂದು ರಾಜ್ಯದಲ್ಲಿ ಉತ್ಪಾದಿತವಾದ ವಿದ್ಯುಚ್ಛಕ್ತಿ ಇನ್ನೊಂದು ರಾಜ್ಯಕ್ಕೆ ಬಳಸಲು ಕೊಡಬೇಕಾಗಿರುವುದು. ಕೊನೆಯದಾಗಿ ಬೃಹತ್ ಯೋಜನೆಗಳಿದ್ದಲ್ಲಿ

# ಭಾರತ

## ಹಿರಿ ನೀರಾವರಿ ಮತ್ತು ವಿದ್ಯುತ್ ಯೋಜನೆಗಳು.

ಸಂಕೇತಗಳು

ನೀರಾವರಿ ಯೋಜನೆಗಳು ——— ▲

ವಿದ್ಯುತ್ ಯೋಜನೆಗಳು ——— ●

ನೀರಾವರಿ ಮತ್ತು ವಿದ್ಯುತ್ ಯೋಜನೆಗಳು. Ⓐ

ಈ ನಕಾಶದ ಬಗ್ಗೆ ವಿವರಣೆಯನ್ನು ಇದರ ಹಿಂಬದಿಗೆ ಕೊಡಲಾಗಿದೆ.



# ಪರಿಶಿಷ್ಟ ೨ : ವಿವರಣೆ

**ನಕಾಶದಲ್ಲಿಯ ಅಂಕಿಗಳ ವಿವರಣೆ: 'ನೀ'=ನೀರಾವರಿ, 'ವಿ'=ವಿದ್ಯುತ್, 'ನೀವಿ'=ನೀರಾವರಿ ವಿದ್ಯುತ್ ಸೇರಿ, ಎಂದು ಅರ್ಥಮಾಡಿಕೊಳ್ಳಬೇಕು.**

**ಕೇಂದ್ರ ಸರಕಾರ**

೧. ದಾಮೋದರ ಕೊಳ್ಳಯೋಜನೆ ನೀ. ವಿ.
೨. ಹಿರಾಕುಡ ಯೋಜನೆ ನೀ. ವಿ.
೩. ಭಾಕಡಾ, ನಂಗಾಲ ನೀ. ವಿ,
೪. ಹರಿಕೆ ನೀ. ವಿ.

**ರಾಜ್ಯ ಸರಕಾರಗಳು**

**ಆಸಾಮು**

೫. ಉಂತರು ವಿ.

**ಬಿಹಾರ**

೬. ಉತ್ತರ ಬಿಹಾರ ವಿ.

**ಮುಂಬಯಿ**

೭. ಗಂಗಾಪೂರ ನೀ.
೮. ಘಟಪ್ರಭಾ ನೀ.
೯. ಮಾಹೀ ನೀ.
೧೦. ತಾಪೀ ನೀ.
೧೧. ಜೋಗ; ವಿತರಣ ವಿ.
೧೨. ಚೋಳಾ ವಿ.
೧೩. ರಾಧಾನಗರಿ ವಿ.

**ಮಧ್ಯ ಪ್ರದೇಶ**

೧೪. ದೂಧ್ವಾ ನೀ.
೧೫. ನಾಗಪೂರ ವಿ
೧೬. ಅಕೋಲಾ ವಿ.
೧೭. ಬಲ್ಲಾರಪೂರ ವಿ.

**ಮದ್ರಾಸ**

೧೮. ಕೆಳಭವಾನಿ ನೀ.
೧೯. ಮಲಂಪೂಜಾ ನೀ.
೨೦. ಮೆಟ್ಟೂರು ಕಾಲುವೆ ನೀ.
೨೧. ಮಣಿಮುತ್ತರ ನೀ.
೨೨. ಭೈರವಾಣಿ ತಿಪ್ಪಾ ನೀ.
೨೩. ವೇಲಿನ ಪೆನ್ನಾರ ನೀ.
೨೪. ಉಳಯೂರ ನೀ.
೨೫. ತುಂಗಭದ್ರಾ ನೀ. ವಿ.
೨೬. ಮೋಯಾರ ವಿ.
೨೭. ಪಾಯಕಾರಾ ವಿ.
೨೮. ಮಚಕುಂದ ವಿ.
೨೯. ಮಚಕುಂದ ವಿತರಣ ವಿ.
೩೦ ಮದ್ರಾಸ ವಿ.
೩೧. ಪಾಪನಾಶಿನಿ ವಿ.
೩೨. ನೆಲ್ಲೂರ ವಿ.

**ಉತ್ತರ ಪ್ರದೇಶ**

೩೩. ಪೂರ್ವ ಪ್ರದೇಶ ಕೇಂದ್ರ ವಿ.
೩೪. ಮಹಮ್ಮದಪೂರ ವಿ.
೩೫. ಪತ್ರಿ ವಿ.
೩೬. ಕಾನಪೂರ ವಿ.
೩೭. ಸಾರಡಾ ವಿ.

**ಪಶ್ಚಿಮ ಬಂಗಾಲ**

೩೮. ಮಯೂರಾಕ್ಷಿ ನೀ. ವಿ.

**ಹೈದರಾಬಾದ**

೩೯. ಗೋದಾವರಿ ನೀ.
೪೦. ರಾಜೋಳಿ ಬಂಡ ನೀ.
೪೧. ರಾಮುಗುಂಡಂ ವಿ.
೪೨. ನಿಜಾಮ ಸಾಗರ ವಿ.

**ಮಧ್ಯಭಾರತ**

೪೩. ಇಂದೂರ ವಿ.

**ಮೈಸೂರ**

೪೪. ಲಕ್ಕವಳ್ಳಿ ನೀ.
೪೫. ತುಂಗಾ ಆಣಿಕಟ್ಟು ನೀ.
೪೬. ನೇಗು ನೀ.
೪೭. ಶಿಂಶಾ ವಿ.

**ರಾಜಸ್ತಾನ**

೪೮. ಜವಾಯಿ ನೀ.

**ಸೌರಾಷ್ಟ್ರ**

೪೯. ಬ್ರಾಹ್ಮಣೀ ನೀ.
೫೦. ಮಚ್ಛು ನೀ.

**ತ್ರಾವಣಕೋರ ಕೋಚೀನ**

೫೧. ಚಳಕುಡಿ ನೀ.
೫೨. ಪೀಚಿ ನೀ.
೫೩. ನೆಯ್ಯಾರ ನೀ.
೫೪. ಪಳ್ಳಿವಾಸಲ್ ವಿ.
೫೫. ಪೊರಿಂಗಲ ಕಟ್ಟು ವಿ.
೫೬. ಸೆಂಗುಲಂ ವಿ.

**ಜಮ್ಮು ಕಾಶ್ಮೀರ**

೫೭. ಸಿಂಧಕೂಳ ನೀ. ವಿ.

**ಪಂಚವಾರ್ಷಿಕ ಕಾಲಾವಧಿಯಲ್ಲಿ ಪ್ರಾರಂಭಿಸಲ್ಪಡುವುವು :**

೫೮. ಕೋಸಿ ನೀ. ವಿ.
೫೯. ಕೊಯನಾ ನೀ. ವಿ.
೬೦. ಕೃಷ್ಣಾ ನೀ. ವಿ.
೬೧. ರಿಹಂದ ನೀ. ವಿ.
೬೨. ಚಂಬಳಾ ನೀ. ವಿ.

ಅವುಗಳಿಗೆ ಆಯಾ ರಾಜ್ಯದ ಬೊಕ್ಕಸದಿಂದ ಧನದ ಪೂರೈಕೆ ಸಾಧ್ಯವಿಲ್ಲವ್ದ ರಿಂದ ಕೇಂದ್ರವು ನೆರವು ಕೊಡಬೇಕಾಗುವುದು.

ಈಗ ಕಟ್ಟಲಾಗುತ್ತಿದ್ದ, ಕಟ್ಟಿದ ಮತ್ತು ಕಟ್ಟಬಹುದಾದ ಎಲ್ಲ ನೀರಾವರಿ ಮತ್ತು ವಿದ್ಯುಚ್ಛಕ್ತಿಯ ಯೋಜನೆಗಳಿಗೆ ಸುಮಾರು ೨೦೦೦ ಕೋಟಿ ರೂಪಾಯಿಗಳು ಬೇಕಾಗುವುವು. ಆದರಿಂದ ಈಗಿದ್ದ ನೀರಾವರಿ ಪೋಷಿತ ಕ್ಷೇತ್ರಕ್ಕೆ ಇನ್ನು ೪೦೦ ರಿಂದ ೪೫೦ ಲಕ್ಷ ಎಕರೆಯಷ್ಟು ಪ್ರದೇಶವನ್ನು ಜೋಡಿಸಿದಂತಾಗುವುದು, ಮತ್ತು ೭೦ ಲಕ್ಷ ಕಿಲೋವ್ಯಾಟ ವಿದ್ಯುಚ್ಛಕ್ತಿಯನ್ನು ಹೆಚ್ಚಿಗೆ ಉತ್ಪಾದಿಸಿದಂತಾಗುವುದು. ಈ ವಿಶಾಲವಾದ ಮತ್ತು ವ್ಯಾಪಕವಾದ ಕಾರ್ಯಯೋಜನೆಯನ್ನು ಪೂರ್ತಿ ಮಾಡಿದ ರೇನೆ, ದೇಶದ ಜೀವನಮಟ್ಟದಲ್ಲಿ ಸಾಕಷ್ಟು ಸುಧಾರಣೆಯಾಗುವುದು ಸಾಧ್ಯವಿದೆ. ಕಳೆದ ಕೆಲ ವರುಷಗಳಿಂದ ದೇಶದಲ್ಲಿ ಹೊಸ ನೀರಾವರಿ ಮತ್ತು ವಿದ್ಯುತ್ ಕೇಂದ್ರಗಳಿಗಾಗಿ ಕಾರ್ಯ ನಡೆಯುತ್ತಲೇ ಇದೆ. ನುತ್ತೆ ಅನೇಕ ಯೋಜನೆಗಳು ಕಾರ್ಯರಂಗಕ್ಕೆ ಬಂದಿವೆ. ಕೆಲವು ಕೇವಲ ನೀರಾವರಿಗಾಗಿ ಇವೆ; ಕೆಲವು ವಿವಿಧೋದ್ದೇಶಗಳುಳ್ಳವಾಗಿವೆ. ಈಗ ರಚನಾ ಕಾರ್ಯ ನಡೆದಿರುವ ಯೋಜನೆಗಳು ಈ ಪಂಚವಾರ್ಷಿಕ ಯೋಜನೆಯ ನಿರೀಕ್ಷಣೆ ಪರಿಶೀಲನ ಕಾರ್ಯದಕಿಂತ ಮೊದಲೆ ಪ್ರಾರಂಭವಾದುವು ಆಗಿವೆ. ಅವುಗಳ ವೆಚ್ಚ ವಿವರಗಳ ಬಗ್ಗೆ ಅನೇಕ ದೃಷ್ಟಿಯ ವಿಮರ್ಶೆ ಬಂದಿದ್ದರೂ ಅವುಗಳನ್ನು ಪೂರ್ತಿ ಮಾಡಿದಾಗ ಅದರಿಂದ ಬರುವ ಲಾಭದ ಮೇಲೆ ಕಣ್ಣಿಟ್ಟರೆ, ಹಿಂದೆ ಹಾನಿಯಾದುದರ ಬಗ್ಗೆ ಹಳಹಳಿಬಡುವ ಕಾರಣವುಳಿವುದಿಲ್ಲ. ಈ ಯೋಜನೆಯಲ್ಲಿ ಹಿಂದಿನ ಕಾರ್ಯಗಳನ್ನು ಪೂರ್ತಿಮಾಡುವುದೇ ಮುಖ್ಯ ಉದ್ದೇಶವಾಗಿದೆ.

ಈಗ ರಚನೆಯಾಗುತ್ತಿರುವ ನೀರಾವರಿ ವಿದ್ಯುತ್ ಯೋಜನೆಗಳ ವೆಚ್ಚ ೭೬೫ ಕೋಟಿ ರೂಪಾಯಿಗಳು ಎಂದು ಅಂದಾಜು ಮಾಡಲಾಗಿದೆ. ೧೯೫೧ರ ವರೆಗೆ ಈ ಯೋಜನೆಗಳ ಮೇಲೆ ೧೫೩ ಕೋಟಿ ವೆಚ್ಚ ಮಾಡಲಾಗಿತ್ತು. ಪಂಚವಾರ್ಷಿಕ ಯೋಜನೆಯ ಕಾಲಾವಧಿಯಲ್ಲಿ ೫೧೮ ಕೋಟಿ ರೂಪಾಯಿ ವೆಚ್ಚ ಮಾಡುವ ಸೂಚನೆಯಿದೆ. ವರುಷ ವರುಷಕ್ಕೆ ಮಾಡುವ ವೆಚ್ಚ, ಪಡೆಯಬಹುದಾದ ಲಾಭ ಇವುಗಳ ವಿವರವನ್ನು ಇಲ್ಲಿ ಕೊಡಲಾಗಿದೆ.

| ವರುಷ | ವೆಚ್ಚ | ಹೆಚ್ಚಾದ ನೀರಾವರಿ ಪೋಷಿತ ಕ್ಷೇತ್ರ | ಹೆಚ್ಚಾದ ವಿದ್ಯುಚ್ಛಕ್ತಿ |
|---|---|---|---|
| | ಕೋಟಿ ರೂ. | ಎಕರೆ | ಕಿಲೋವ್ಯಾಟ |
| ೧೯೫೧–೫೨ | ೮೫ | ೬೪೬,೦೦೦ | ೫೮,೦೦೦ |
| ೧೯೫೨–೫೩ | ೧೨೧ | ೧೮,೯೦,೦೦೦ | ೨,೩೯,೦೦೦ |
| ೧೯೫೩–೫೪ | ೧೨೭ | ೩೫,೫೫,೦೦೦ | ೭,೨೪,೦೦೦ |
| ೧೯೫೪–೫೫ | ೧೦೭ | ೫೭,೪೯,೦೦೦ | ೮,೭೫,೦೦೦ |
| ೧೯೫೫–೫೬ | ೭೯ | ೮೫,೩೩,೦೦೦ | ೧೦,೯೨,೦೦೦ |
| ಕೊನೆಗೆ— | — | ೧,೬೯,೪೨,೦೦೦ | ೧೪,೬೫,೦೦೦ |
| ಒಟ್ಟು | ೫೧೯ | | |

ನೀರಾವರಿಯ ಅತ್ಯಗತ್ಯತೆಯು ಮೂಲಕ ಯೋಜನೆಗಳಲ್ಲಿಯ ನೀರಾವರಿ ಕಟ್ಟಡಗಳು ಬೇಗನೆ ಪೂರ್ತಿಯಾಗಬೇಕೆಂದು ನಿಯೋಜಿಸಲಾಗಿದೆ. ವಿದ್ಯುಚ್ಛಕ್ತಿಯ ಕೇಂದ್ರಗಳ ಬೆಳವಣಿಗೆ, ಬೇಡಿಕೆ ಬಂದಹಾಗೆಲ್ಲ ರಚಿತವಾಗುವಂತೆ ಕೈಕೊಳ್ಳಲಾಗಿದೆ. ಈಗಾಗಲೆ ಕೈಕೊಂಡ ಯೋಜನೆಗಳಿಗೆ ಕೊನೆಯ ಎರಡು ವರುಷಗಳಲ್ಲಿ ವೆಚ್ಚ ಕಡಿಮೆಯಾಗುತ್ತಾ ಹೋಗುವುದರಿಂದ ಹಿಂದುಳಿದ ಕ್ಷೇತ್ರಗಳಲ್ಲಿಯ ಅತ್ಯಗತ್ಯದ ಯೋಜನೆಗಳ ಕಡೆಗೆ ಲಕ್ಷ್ಯಹಾಕಲಾಗಿದೆ. ೫ ಹೊಸ ಕಾರ್ಯಯೋಜನೆಗಳನ್ನು ಪಂಚವಾರ್ಷಿಕ ಯೋಜನೆಯಲ್ಲಿ ಸಮಾವೇಶ ಮಾಡಲಾಗಿದೆ. ಪಂಚವಾರ್ಷಿಕದ ಕೊನೆಯ ಎರಡು ವರುಷಗಳಲ್ಲಿ ಈ ಹೊಸ ಯೋಜನೆಗಳ ಮೇಲೆ ೪೦ ಕೋಟಿ ರೂಪಾಯಿಗಳನ್ನು ವೆಚ್ಚಮಾಡುವ ಅನುಕೂಲತೆ ಮಾಡಿ ಅವುಗಳ ಕಾರ್ಯ ಪ್ರಾರಂಭಮಾಡಲು ಆಸ್ಪದ ಮಾಡಿಕೊಡಲಾಗಿದೆ. ಅವುಗಳಿಗೆ ಒಟ್ಟು ೨೦೦ ಕೋಟಿ ರೂಪಾಯಿಗಳ ವೆಚ್ಚ ಬರಬಹುದೆಂದು ಅಂದಾಜು ಮಾಡಲಾಗಿದೆ. ಅದರ ವಿವರ ಮುಂದಿನಂತೆ ಇದೆ:

| ಯೋಜನೆಯ ಹೆಸರು | ಕ್ಷೇತ್ರಸೇವೆ | ಅಂದಾಜಿತ ವೆಚ್ಚ ಲಕ್ಷರೂಪಾಯಿ | ದೊರೆಯುವ ಲಾಭ ನೀರಾವರಿಪೋಷಣೆ (೧೦೦೦ ಎಕರೆ) | ವಿದ್ಯುಚ್ಛಕ್ತಿ (ಕಿಲೊವ್ಯಾಟ) |
|---|---|---|---|---|
| ಕೋಸಿ [ಪ್ರಥಮಾವಸ್ಥೆ] | .... ಬಿಹಾರ ಮತ್ತು ನೇಪಾಳ | ೬೬೦೦ | ೩೬೨೦ [ಮಹಾಪೂರ ನಿಯಂತ್ರಣ ಸಹಿತ] | ೪೦ |
| ಕೋಯಿನಾ [ಪ್ರಥಮಾವಸ್ಥೆ] | .... ಮುಂಬಯಿ | ೩೪೦೦ | — | ೨೪೦ |
| ಕೃಷ್ಣಾ | ... ಮದ್ರಾಸ ಮತ್ತು ಹೈದರಾಬಾದ | ಇನ್ನೂ ತಿಳಿದಿಲ್ಲ | — | ಇನ್ನೂ ತಿಳಿದಿಲ್ಲ |
| ಚಂಬಳ [ಪ್ರಥಮಾವಸ್ಥೆ] | ... ಮಧ್ಯಭಾರತ ರಾಜಸ್ಥಾನ | ೩೩೫೫ | ೧೨೦೦ | ೮೦ |
| ರಿಹಂದ | .... ಉತ್ತರ ಪ್ರದೇಶ | ೩೫೦೦ | — | ೨೪೦ |

ದೇಶದ ಎಲ್ಲ ಭಾಗಗಳಿಗೆ ನೀರಾವರಿ ಸೇವೆ ಸಲ್ಲಿಸಬೇಕೆಂಬ ಭರದಲ್ಲಿ ನೀರಿನ ಮಿತವ್ಯಯದ ಉಪಯೋಗದ ಕಡೆಗೆ ಲಕ್ಷ್ಯ ಹಾಕದಿದ್ದರೆ, ಇದ್ದ ಪೂರೈಕೆಯಲ್ಲಿ ಮೇಲ್ಮಿತಿಯ ಲಾಭ ದೊರೆಯದು. ಇದನ್ನು ಸಾಧ್ಯಮಾಡಿಕೊಳ್ಳಲು ಬೇರೆ ಬೇರೆ ಬೆಳೆಗಳಿಗೆ ಎಷ್ಟು ನೀರು ಬೇಕಾದೀತು ಎಂದು ಎಣಿಕೆ ಹಾಕುವುದು ಅವಶ್ಯವಿದೆ; ಅವುಗಳಿಗೆ ಯಾವ ಯಾವ ಕಾಲಕ್ಕೆ ನೀರು ಬೇಕಾಗುವುದು ಎಂಬುದನ್ನು ತಿಳಿಯುವುದೂ ಅಗತ್ಯವಿದೆ; ಕಾಲುವೆಯ ನೀರು ವ್ಯರ್ಥವಾಗಿ ಶೋಷಿತವಾಗಬಾರದೆಂದು ಕಾಲುವೆಗಳ ಒಳಮೈ ಭದ್ರಮಾಡಬೇಕು; ಹೊಲಗಳಲ್ಲಿ ಬಿಟ್ಟ ನೀರು ಹಾಳಾಗದ ಹಾಗೆಯೂ ನೋಡಿಕೊಳ್ಳಬೇಕು. ಈ ಸಂಬಂಧದಲ್ಲಿ ಆಯಾ ರಾಜ್ಯಸರಕಾರಗಳಿಗೆ ಸೂಚನೆ ಮಾಡಲಾಗಿದೆ.

## ವಿದ್ಯುಚ್ಛಕ್ತಿ

ವಿದ್ಯುಚ್ಛಕ್ತಿಯ ಪ್ರಾದೇಶಿಕ ವಿಸ್ತರಣ ಮತ್ತು ಪಂಚವಾರ್ಷಿಕದಲ್ಲಿ ವಿದ್ಯುಚ್ಛಕ್ತಿಯ ಮೇಲೆ ಸೆಳೆತ ಎಷ್ಟಾಗುವುದು ಎಂಬುದರ ವಿವರ ಇಲ್ಲಿ ಕೊಟ್ಟಿದೆ :

೧೯೫೫—೫೬ ರಷ್ಟರಲ್ಲಿ ದೊರೆಯಬಹುವೆಂದು ಅಂದಾಜು
ಕಿಲೋವ್ಯಾಟಗಳಲ್ಲಿ

| ಹೆಸರು | ಸ್ಥಾಪಿತಶಕ್ತಿ ವ್ಯಾಪ್ತಿ | ನಿಶ್ಚಿತಶಕ್ತಿ | ಅಂದಾಜು |
|---|---|---|---|
| ೧ ವಿವಿಧೋದ್ದೇಶ ಯೋಜನೆಗಳು | | | |
| (i) ಭಾಕ್ರಾನಂಗಾಲ | ೯೬ | ೭೨ | ೬೯ |
| (ii) ದಾಮೋದರಕೊಳ್ಳ | ೧೯೪ | ೧೪೪ | ೧೩೨ |
| (iii) ಹಿರಾಕುಡ | ೪೮ | ೨೪ | ೨೪ |
| ೨ ಮದ್ರಾಸ, ಮೈಸೂರು ಹೈದರಾಬಾದ, ತ್ರಾವಣಕೋರ-ಕೋಚೀನ | ೪೦೨ | ೫೧೧* | ೬೩೯ |
| ೩ ಮುಂಬಯಿ ಕ್ಷೇತ್ರ | ೮೩ | ೩೪೮* | ೪೧೭ |
| ೪ ಬಿಹಾರ, ಬಂಗಾಲ, ಮಧ್ಯಪ್ರದೇಶ | ೮೮ | ೬೫ | ೧೦೧ |
| ೫ ಉತ್ತರ ಪ್ರದೇಶ | ೧೦೯ | ೧೫೭* | ೧೪೬ |
| ೬ ಇತರ ಪ್ರದೇಶಗಳಲ್ಲಿ | ೬೨ | ೬೬ | ೬೬ |
| ಒಟ್ಟು | ೧೦೮೨ | ೧೩೯೭ | ೧೫೯೪ |

* ಈಗಿದ್ದ ಶಕ್ತಿಗಳಲ್ಲಿ ಸಮಾವೇಶಮಾಡಿದ ವ್ಯಾಪ್ತಿಯ ಪರಿಮಾಣ.

ಸಾರ್ವಜನಿಕ ಕ್ಷೇತ್ರದಲ್ಲಿಯ ವಿದ್ಯುಚ್ಛಕ್ತಿಯ ಉತ್ಪಾದನ ಸಾಮರ್ಥ್ಯವು ೧೦ ಲಕ್ಷ ಕಿಲೊವ್ಯಾಟದಕಿಂತಲೂ ಹೆಚ್ಚಾಗುವುದು ಕಂಡುಬರುತ್ತಿದೆ. ಇದರಲ್ಲಿ ೩೩೮೦೦೦ ಕಿಲೊವ್ಯಾಟು ವಿವಿಧೋದ್ದೇಶ ಯೋಜನೆಗಳಿಂದ ಬರುತ್ತಿದೆ ಎಂಬುದನ್ನು ಗಮನಿಸಬೇಕು. ಈಗಿದ್ದ ಅಂಕೆಯು ವಿವಿಧೋದ್ದೇಶ ಯೋಜನೆಗಳ ಪ್ರಥಮಾವಸ್ಥೆಯಲ್ಲಿಯದು. ಅವು ಪೂರ್ತಿಯಾದ ನಂತರ ಅಲ್ಲಿ ೧೦ ಲಕ್ಷ ಕಿಲೊವ್ಯಾಟ ಉತ್ಪಾದನವಾಗುವುದೆಂದು ಕಂಡುಬಂದಿದೆ.

ಈ ಮುಂದಿನ ಪಟ್ಟಿಯಿಂದ ೧೯೫೦ರಲ್ಲಿಯ ವಿದ್ಯುಚ್ಛಕ್ತಿಯ ಬಳಕೆ, ೧೯೫೫ರಲ್ಲಿಯ ಬಳಕೆಯ ವ್ಯಾಪ್ತಿ ಕಂಡುಬರುವುದು :

## ವಿದ್ಯುಚ್ಛಕ್ತಿಯ ಬಳಕೆ

| | ೧೯೫೦ * | ೧೯೫೦ರ ಒಟ್ಟು ಶತಾಂಶ | ೧೯೫೫ * | ೧೯೫೫ರ ಒಟ್ಟು ಶತಾಂಶ | ೧೯೫೦ರಿಂದ ಹೆಚ್ಚಳ ಶತಾಂಶ |
|---|---|---|---|---|---|
| ಗೃಹಕೃತ್ಯಕ್ಕೆ ದೀಪ ಮತ್ತು ಶಕ್ತಿ | ೫೨೫ | ೧೩ | ೮೬೦ | ೧೩ | ೬೪ |
| ವ್ಯಾಪಾರಿ ವ್ಯವಹಾರಕ್ಕೆ ದೀಪ ಮತ್ತು ಶಕ್ತಿ | ೩೦೯ | ೭ | ೪೩೦ | ೭ | ೩೯ |
| ಔದ್ಯೋಗಿಕ | ೨೬೦೪ | ೬೩ | ೪೧೦೦ | ೬೩ | ೫೮ |
| ನೀರಾವರಿ | ೧೬೨ | ೪ | ೩೩೨ | ೫ | ೧೦೫ |
| ಇತರ ಉದ್ದೇಶಗಳಿಗಾಗಿ | ೫೫೮ | ೧೩ | ೭೫೨ | ೧೨ | ೩೫ |
| ಒಟ್ಟು | ೪೧೫೮ | ೧೦೦ | ೬೪೭೪ | ೧೦೦ | ೫೬ |

ವಿದ್ಯುಚ್ಛಕ್ತಿಯ ಅಭಿವೃದ್ಧಿಗೆ ಭಾರತದಲ್ಲಿ ಸಾಕಷ್ಟು ಅವಕಾಶವಿದ್ದರೂ ಸರಕಾರದ ಪ್ರಯತ್ನವಿಲ್ಲದೆ ಸಾರ್ವಜನಿಕರು ವಿದ್ಯುಚ್ಛಕ್ತಿಯನ್ನು ಪಡೆಯುವ ಪ್ರಯತ್ನವನ್ನು ಕೂಡ ಕೆಲವೆಡೆಗಳಲ್ಲಿ ಮಾಡುವುದಿಲ್ಲ. ಅದಕ್ಕಾಗಿ ಬೇಡಿಕೆಯೆಷ್ಟಿದೆಯೆಂಬುದನ್ನು ಮೊದಲೆ ನಿರ್ಧರಿಸಿ ಅದರ ಮೇಲಿಂದ ಬೆಳಿಗೆಯ ಕಾರ್ಯಕ್ರಮ ಸಿದ್ಧಪಡಿಸುವುದು ಹಿತಕಾರಿಯಾಗುವುದು. ಪ್ರಾದೇಶಿಕ ಘಟಕಗಳಾಗಿ ಮಾಡಿ ಅದರ ವಿಕಾಸ ಮಾಡಬೇಕೆಂದರೆ ಅಲ್ಲಲ್ಲಿನ ಔದ್ಯಮಿಕ ಮತ್ತು ಆರ್ಥಿಕ ಯೋಜನೆಯೂ ಕೈಗೂಡಬೇಕಾಗುವುದು. ಹಳ್ಳಿಗರು ಕೂಡ ವಿದ್ಯುಚ್ಛಕ್ತಿಯನ್ನು ಬಳಸುವಂತೆಯಾಗಬೇಕು. ಯೋಗ್ಯ ಸೌಕರ್ಯಗಳನ್ನು ಒದವಿಸಿದರೆ ಒಕ್ಕಲುತನ ಕ್ರಿಯೆಗಳಲ್ಲಿ ವಿದ್ಯುಚ್ಛಕ್ತಿಯನ್ನು ಬಳಸಬಹುದಾಗಿದೆ. ಗ್ರಾಮಾಂತರಗಳಲ್ಲಿಯ ವಿದ್ಯುತ್ ಸೌಕರ್ಯಕ್ಕಾಗಿ ದೀರ್ಘಾವಧಿಯ ಸಾಲಗಳನ್ನು ಗ್ರಾಮ ಸಹಕಾರೀ ಸಂಘಗಳಿಗೆ ಕೊಡುವಂತೆಯಾಗಬೇಕು. ಒಕ್ಕಲಿಗರು ಉಪಯೋಗಿಸಬಹುದಾದ ವಿದ್ಯುತ್

* ೧೦ ಲಕ್ಷ ಕಿಲೋವ್ಯಾಟುಗಳಲ್ಲಿ.

ಉಪಕರಣಗಳನ್ನು ನಮ್ಮ ದೇಶದಲ್ಲಿಯೆ ಉತ್ಪಾದಿಸಬಹುದಾದುದೂ ಒಂದು ವಿಚಾರಣೀಯ ಸಂಗತಿಯಾಗಿದೆ.

ಯೋಜನೆಯಲ್ಲಿಯ ಹಿರಿ ಮತ್ತು ಕಿರಿ ನೀರಾವರಿಗಳಿಗೆ ಕೊಡಲಾದ ಮಹತ್ವದ ಬಗ್ಗೆ ಆಗಾಗ್ಗೆ ಪ್ರಶ್ನೆ ಕೇಳಲಾಗುತ್ತಿದೆ. ಹಿರಿ–ಕಿರಿ ನೀರಾವರಿ ಯೋಜನೆಗಳಲ್ಲಿ ಯಾವ ತಾಕಲಾಟವಿಲ್ಲವೆಂಬುದನ್ನು ಮೊದಲು ನೆನೆಯಬೇಕು. ದೇಶದ ಕೆಲ ಪ್ರದೇಶದಲ್ಲಿ ಹಿರಿ ನೀರಾವರಿ ಸಾಧ್ಯವಾದರೆ, ಕೆಲವೆಡೆಯಲ್ಲಿ ಕೇವಲ ಕಿರಿ ನೀರಾವರಿಗಳೇ ಸಾಧ್ಯವಾಗುವುವು. ಎಲ್ಲಿ ಯಾವುದು ಸಾಧ್ಯವೊ ಅದನ್ನು ಅಲ್ಲಿ ಮಾಡುವುದು ಯೋಗ್ಯ. ಹಿರಿ–ಕಿರಿ ನೀರಾವರಿ ಯೋಜನೆಗಳು ಪರಸ್ಪರ ಪೋಷಕವಾಗಿರುವುವೇ ಹೊರತು ಪೈಪೋಟಿಯುಳ್ಳವಲ್ಲ. ಪಂಚವಾರ್ಷಿಕ ಯೋಜನೆಯಲ್ಲಿ ಒಂದಕ್ಕೆ ೫ ಕೋಟಿ ರೂಪಾಯಿ ವೆಚ್ಚವಾಗುವಂತಹ ಎಂಟು ಯೋಜನೆಗಳಿವೆ; ಒಂದರಿಂದ ಐದು ಕೋಟಿ ರೂಪಾಯಿ ವೆಚ್ಚವಾಗುವ ೧೭ ಯೋಜನೆಗಳಿವೆ; ೫೦ ಲಕ್ಷ ರೂಪಾಯಿಯಿಂದ ೧ ಕೋಟಿಯ ವರೆಗೆ ವೆಚ್ಚವಾಗುವ ೨೧ ಯೋಜನೆಗಳಿವೆ; ೧೦ ಲಕ್ಷ ರೂಪಾಯಿಗಳಿಂದ ೫೦ ಲಕ್ಷ ರೂಪಾಯಿ ವರೆಗಿನ ವೆಚ್ಚದ ೨೭ ಯೋಜನೆಗಳಿವೆ. ಈ ಎಲ್ಲ ಯೋಜನೆಗಳಿಂದ ಈ ಐದು ವರ್ಷಗಳಲ್ಲಿ ಸುಮಾರು ಎಂಬತ್ತು ಲಕ್ಷ ಎಕರೆ ಭೂಮಿ ನೀರು ಉಣ್ಣುವಂತಹದು ಆಗುತ್ತದೆ. ಅದರೆ ಕಿರಿ ನೀರಾವರಿ ಯೋಜನೆಗಳಿಂದ ಸುಮಾರು ೧೧೦ ಲಕ್ಷ ಎಕರೆ ಭೂಮಿ ನೀರು ಉಣ್ಣುತ್ತದೆ. ಕಿರಿ ನೀರಾವರಿಗಳಿಗಾಗಿ ಒಟ್ಟು ವೆಚ್ಚ ಸುಮಾರು ೭೭ ಕೋಟಿ ಆಗುವುದು; ಇದರಲ್ಲಿ ಕೊಳವೆಬಾವಿಗಳ ವೆಚ್ಚವೂ ಸೇರಿದೆ.

ಕಿರಿ ನೀರಾವರಿಗಳಿಂದ ಅನೇಕ ಸೌಕರ್ಯಗಳಿವೆ. (i) ಪ್ರಾರಂಭದ ಬಂಡವಲು ಚಿಕ್ಕದು ಇರುತ್ತದೆ. (ii) ಅವುಗಳ ಕಾರ್ಯ ಬೇಗ ಮುಗಿದು ಬೇಗ ಫಲ ದೊರೆಯುತ್ತದೆ. (iii) ವಿಶೇಷ ತಾಂತ್ರಿಕ ಇಲ್ಲವೆ ಪರದೇಶದ ಪ್ರವೀಣರ ಸಹಾಯ ಅಗತ್ಯವಿಲ್ಲ. (iv) ಸ್ಥಾನಿಕ ಶ್ರಮ ಸಂಪತ್ತಿಯ ಸದುಪಯೋಗವಾಗುವುದು. ಆದರೆ ಅವುಗಳಿಗಾಗಿ ತುಲನಾತ್ಮಕವಾಗಿ ವೆಚ್ಚ ಹೆಚ್ಚು; ಅವುಗಳ ಕಾರ್ಯಜೀವಮಾನ ಕಿರಿದು. ಹಿರಿ ನೀರಾವರಿಗಳಲ್ಲಿ ಶಾಶ್ವತವಾದ ಸಹಾಯ ದೊರೆವುದು; ನೀರಾವರಿ ಅಲ್ಲದೆ ವಿದ್ಯುಚ್ಛಕ್ತಿಯ

ಉತ್ಪಾದನವಾಗುವುದು; ಮಹಾಪೂರ ನಿಯಂತ್ರಣವಾಗುವುದು; ಜಲಯಾನ ಸೌಕರ್ಯ ದೊರೆವುದು. ಕ್ರಮದ ಕಾಲದಲ್ಲಿ ಅವು ಒಳ್ಳೆಯ ಯೋಗ-ಕ್ಷೇಮ ತೆಗೆದುಕೊಳ್ಳುವುವು.

ಪಂಚವಾರ್ಷಿಕ ಯೋಜನೆಯ ಎರಡು ವರುಷಗಳು ಮುಗಿದಿವೆ; ಪರಿಸ್ಥಿತಿಯ ವಿಮರ್ಶೆ ಮಾಡಿ ನೋಡಲು ಸಾಧ್ಯವಿದೆ. ಪರಿಸ್ಥಿತಿಯ ವಿಮರ್ಶಿತ ಜ್ಞಾನದಿಂದ ಈ ಕಾಲಾವಧಿ ಮುಗಿಯುವುದರೊಳಗೆ ಮುಂದಿನ ಕಾರ್ಯ ಯೋಜನೆಗಳು ಸಿದ್ಧವಾಗಿ ಪ್ರಾರಂಭವಾಗುವುವು. ಮುಂದಿನ ಕಾರ್ಯ ಯೋಜನೆಗಳ ಪ್ರಾಥಮಿಕತೆಯನ್ನು ಸಿದ್ಧಪಡಿಸಲು ಅಖಿಲ ಭಾರತ ಪ್ರಾತಿನಿಧ್ಯವುಳ್ಳ ಸಮಿತಿಯನ್ನು ನೇಮಿಸಲಾಗಿದೆ.

---

ಪ್ರಕರಣ ಹತ್ತು

# ಅಭಿವೃದ್ಧಿ ಕಾರ್ಯಕ್ರಮಗಳು: ಖನಿಜಸಂಪತ್ತು ಮತ್ತು ಸಂಶೋಧನೆ

## ಖನಿಜಸಂಪತ್ತಿನ ಅಭಿವೃದ್ಧಿ

ಈಗ ಗೊತ್ತಿದ್ದ ಖನಿಜಸಂಪತ್ತಿಯು ದೇಶದಲ್ಲಿನ ಉದ್ಯಮಗಳ ಅಭಿವೃದ್ಧಿಗೆ ಅವಶ್ಯಕವಾಗುವ ಉಪಯುಕ್ತತೆಯುಳ್ಳವಾಗಿದೆ. ಉದ್ಯಮಗಳ ಮೂಲಾಧಾರವಾಗಿರುವ ಕಬ್ಬಿಣ ಮತ್ತು ಕಲ್ಲಿದ್ದಲಿ ವಿಪುಲವಾಗಿದೆ. ಭಾರತದಲ್ಲಿ ದೊರೆವ ಕಬ್ಬಿಣದ ಮೂಲಧಾತು ಪ್ರಪಂಚದಲ್ಲಿಯು ಅತ್ಯುತ್ತಮ ಮಾದರಿಗಳಲ್ಲಿ ಒಂದಾಗಿದೆ. ಅದರಂತೆ ಟಿಟಾನಿಯಾ, ತೋರಿಯಂ, ಮಾಯಿಕಾ (ಅಭ್ರಕ), ಬಾಕ್ಸಾಯಿಟ, ಮೊನಾಜಾಯಿಟುಗಳ ಭೂಸಂಗ್ರಹವೂ ಸಾಕಷ್ಟಿದೆ. ಆದರೆ, ದೇಶದಲ್ಲಿ ತಾಮ್ರ, ಸೀಸು, ಸತುವು, ಗಂಧಕ ಮುಂತಾದವುಗಳ, ಹೆಚ್ಚಾಗಿ ಪೆಟ್ರೋಲಿಯಂದ ಕೊರತೆಯಿದೆ ಇದುವರೆಗೆ ಈ ಖನಿಜಸಂಪತ್ತಿನ ಅರೈಕೆ ಚೆನ್ನಾಗಿ ಆಗಿಲ್ಲ. ಹೆಚ್ಚಾಗಿ ಮೂಲಧಾತುವನ್ನು ಯಾವ ಸಂಸ್ಕರಣವಿಲ್ಲದೆ ನಿರ್ಯಾತ ಮಾಡಲಾಗುತ್ತಿತ್ತು. ಭೂಗರ್ಭ ಪರಿಶೋಧನೆಯೂ ಯೋಗ್ಯರೀತಿಯಲ್ಲಿ ಆಗದೆ ಇದ್ದುದರಿಂದ ಯಾವುದು, ಎಲ್ಲಿ ಎಷ್ಟು ಇದೆ ಎಂಬುದು ಸರಿಯಾಗಿ ತಿಳಿದುಬಂದಿಲ್ಲ. ಖನಿಜಗಳು ಆಧುನಿಕ ಉದ್ಯಮಗಳ ತಳಹದಿಯಾಗಿರುವುದರಿಂದ ಅವುಗಳ ಬಗ್ಗೆ ಸರಿಯಾದ ಧೋರಣೆ ಅನುಸರಿಸುವುದು ಅಗತ್ಯವಾಗಿದೆ. ಇದ್ದವುಗಳನ್ನು ಕಾಪಾಡಿಕೊಳ್ಳುವುದು ಮತ್ತು ಅವುಗಳನ್ನು ಮಿತವ್ಯಯದಿಂದ ಉಪಯೋಗಿಸುವುದು ಮುಖ್ಯ ಲಕ್ಷಣವಾಗಬೇಕಾಗಿದೆ. ನಿರೀಕ್ಷಣೆ, ಸಂರಕ್ಷಣೆ ಸಹಿತ ಉತ್ಪತ್ತಿಯಲ್ಲಿ ಹೆಚ್ಚಳವಾಗಬೇಕಾಗಿದೆ.

## ಕಲ್ಲಿದ್ದಲಿ

ಕಲ್ಲಿದ್ದಲಿ ಕಣಿಗಳು ಮುಖ್ಯವಾಗಿ ಬಿಹಾರ ಮತ್ತು ಪಶ್ಚಿಮ ಬಂಗಾಲದಲ್ಲಿವೆ. ದೇಶದ ಉತ್ಪಾದನೆಯಲ್ಲಿಯ ೮೩ ಶತಾಂಶ ಇಲ್ಲಿಂದಲೆ ಬರುವುದು. ಉಳಿದ ಭಾಗವು ಮಧ್ಯಪ್ರದೇಶ, ಓಡಿಸಾ, ಹೈದರಾಬಾದ ಮತ್ತು ಆಸಾಮಗಳಿಂದ ಬರುವುದು. ಪಡೆಯಬಹುದಾದ ಕಲ್ಲಿದ್ದಲಿಯು ೨,೦೯,೨೦೦ ಲಕ್ಷ ಟನ್ನುಗಳಷ್ಟು ಇದೆಯೆಂದು ಅಂದಾಜು ಮಾಡಲಾಗಿದೆ. ಇದರಲ್ಲಿ ಸುಮಾರು ೫೦,೦೦೦ ಲಕ್ಷ ಟನ್ನುಗಳಷ್ಟು ಉತ್ತಮ ತರಗತಿಯದು ಇದೆ. ಇದನ್ನು ನೋಡಿದರೆ ಔದ್ಯೋಗೀಕರಣಕ್ಕೆ ಅವಶ್ಯಕವಾದಷ್ಟು ಪ್ರಮಾಣದಲ್ಲಿ ಕಲ್ಲಿದ್ದಲಿ ಇದೆಯೆಂದು ಕಂಡುಬರುವುದು. ಕಳೆದ ಮೂರು ದಶಕಗಳಲ್ಲಿ ಕಲ್ಲಿದ್ದಲಿಯ ಉತ್ಪಾದನೆಯು ದ್ವಿಗುಣಿತವಾಗಿದೆ. ೧೯೫೧ರಲ್ಲಿ ಸುಮಾರು ೩೪೦ ಲಕ್ಷ ಟನ್ನುಗಳಷ್ಟು ಉತ್ಪಾದನೆಯಾಗಿದೆ ಸುಮಾರು ೩೧ ಶತಾಂಶದಷ್ಟು ರೈಲ್ವೆಗಳಿಗೆ ಬಳಸಲ್ಪಡುತ್ತದೆ. ಕಣಿಗಳಲ್ಲಿಯೇ ೧೧ ಶತಾಂಶದಷ್ಟು ಬಳಸಲಾಗುತ್ತಿದೆ. ಉಳಿದುದರಲ್ಲಿ ಬಹುಭಾಗ ಉದ್ಯಮಗಳಿಂದ ಬಳಸಲಾಗುತ್ತಿದೆ.

ದೇಶದಲ್ಲಿರುವ ಸುಮಾರು ೧೦೦ ಕಲ್ಲಿದ್ದಲಿ ಕ್ಷೇತ್ರಗಳಲ್ಲಿ ಕೆಲವೇ ಮಾತ್ರ ೧೦೦೦ದಿಂದ ೨೦೦೦ ಅಡಿಗಳ ಆಳದ ವರೆಗೆ ಹೋಗಿವೆ. ಉಳಿದ ಕ್ಷೇತ್ರಗಳ ಭೂಗರ್ಭ ನಿರೀಕ್ಷಣೆಯಾಗುವುದು ಅಗತ್ಯವಿದೆ. ಬೇರೆ ಬೇರೆ ಮಾದರಿಯ ಕಲ್ಲಿದ್ದಲಿಗಳ ಭೌತಿಕ ಮತ್ತು ರಾಸಾಯನಿಕ ಗುಣಸತ್ವ ಪರೀಕ್ಷೆಯಾಗಬೇಕು. ವೈಜ್ಞಾನಿಕ ವರ್ಗೀಕರಣವಾಗಬೇಕು ಯಾವ ಕಾರ್ಯಕ್ಕೆ ಯಾವುದನು ಉಪಯೋಗಿಸಿದರೆ, ಮಿತವ್ಯಯವಾಗುವುದು ಮತ್ತು ಉತ್ತಮ ಪ್ರತಿಫಲ ದೊರೆವುದು ಇದರ ಅರಿತಿಯಾಗಬೇಕು. ಕಣಿಗಳಲ್ಲಿ ಆಧುನಿಕ ಉಪಕರಣಗಳನ್ನು ಜೋಡಿಸಿದರೆ ಉತ್ಪತ್ತಿ ಹೆಚ್ಚಾಗುವುದೆಂದು ಕಂಡುಕೊಳ್ಳಲಾಗಿದೆ. ಈ ಬಗ್ಗೆ ಕಾರ್ಯ ನಡೆಯುವಂತೆ ಯೋಜನೆಯಲ್ಲಿ ಏರ್ಪಾಡಾಗಿದೆ.

## ಕಬ್ಬಿಣ

ಭಾರತದಲ್ಲಿ ಉತ್ತಮ ತರಗತಿಯ ಕಬ್ಬಿಣ ದೊರೆಯುತ್ತದೆ. ಬಿಹಾರ, ಓರಿಸಾ, ಮಧ್ಯಪ್ರದೇಶ, ಮದ್ರಾಸ, ಮುಂಬಯಿ, ಮೈಸೂರ ರಾಜ್ಯಗಳಲ್ಲಿ ಕಣಿಗಳು ವ್ಯಾಪಿಸಿವೆ. ಭೂಗರ್ಭದಲ್ಲಿ ಒಟ್ಟಿನಲ್ಲಿ ಸುಮಾರು ೧,೦೦೦,೦೦೦ ಲಕ್ಷ ಟನ್ನುಗಳಷ್ಟು ಕಬ್ಬಿಣದ ಮೂಲಧಾತು ಇರುವುದೆಂದು ಅಂದಾಜುಮಾಡಲಾಗಿದೆ. ಇದರ ಬಹು ಭಾಗವು ಬಿಹಾರ, ಓರಿಸಾಗಳಲ್ಲಿದೆ. ಕಬ್ಬಿಣದ ಬಗ್ಗೆ ಭೂಗರ್ಭನಿರೀಕ್ಷಣೆ ಆಗಿದ್ದರೂ ವಿವರಗಳ ಬಗ್ಗೆ ಇನ್ನೂ ಪ್ರಯತ್ನ ನಡೆಯಬೇಕಾಗಿದೆ. ಯೋಜನೆಯ ಕಾಲಾವಧಿಯಲ್ಲಿ ಬಿಹಾರದಲ್ಲಿ ಬೊನಾಯಿ ಮತ್ತು ಕೊಯೆನಜಹಾರ, ಮಧ್ಯಪ್ರದೇಶದಲ್ಲಿ ದುರ್ಗ, ಚಂದಾ ಮತ್ತು ಬಸ್ತಾರ ಮುಂಬಯಿ ರಾಜ್ಯದಲ್ಲಿ ರತ್ನಾಗಿರಿ ಮತ್ತು ಮದ್ರಾಸ ರಾಜ್ಯದಲ್ಲಿ ಸೊಂಡೂರ ಈ ಪ್ರದೇಶಗಳ ವಿಸ್ತೃತ ನಿರೀಕ್ಷಣೆಯಾಗಬೇಕೆಂದು ನಿರ್ಧರಿಸಲಾಗಿದೆ.

ಕಬ್ಬಿಣದ ಮೂಲಧಾತುವಿನ ಉತ್ಪಾದನೆಯಲ್ಲಿ ಕಳೆದ ಕೆಲ ವರುಷಗಳಲ್ಲಿ ಏರಿಳಿತವಾಗಿದೆ. ಉತ್ಪಾದನೆಯ ಬಹುಭಾಗವು ಟಾಟಾನಗರ, ಆಸನಸೋಲ ಮತ್ತು ಭದ್ರಾವತಿ ಇವುಗಳಲ್ಲಿ ಬಳಸಲಾಗುತ್ತದೆ. ಸ್ವಲ್ಪ ಪ್ರಮಾಣದಲ್ಲಿ ನಿರ್ಯಾತವೂ ಆಗುತ್ತದೆ. ಕಬ್ಬಿಣ(ಬೀಡು)ದ ವಾರ್ಷಿಕ ಉತ್ಪಾದನೆಯು ೧೫ರಿಂದ ೨೦ ಲಕ್ಷ ಟನ್ನುಗಳಷ್ಟು ಮತ್ತು ಉಕ್ಕು ೧೦ ಲಕ್ಷ ಟನ್ನುಗಳಷ್ಟು ಸರಾಸರಿ ಆಗುತ್ತದೆ. ಇದರಿಂದ ದೇಶದ ಬೇಡಿಕೆಯು ಪೂರ್ತಿಯಾಗದೆ ಆಯಾತಮಾಡಬೇಕಾಗಿ ಬರುವುದು. ಯುದ್ಧಕಾಲದಲ್ಲಿ ಮತ್ತು ಯುದ್ಧೋತ್ತರಕಾಲದಲ್ಲಿ ಕಬ್ಬಿಣ ಮತ್ತು ಉಕ್ಕಿನ ಕೊರತೆ ಕಂಡುಬಂದಿದೆ. ೧೯೫೫–೫೬ರಷ್ಟರ ಹೊತ್ತಿಗೆ ಕಬ್ಬಿಣ(ಬೀಡು) ೨,೭೩೫,೦೦೦ ಟನ್ನುಗಳಷ್ಟು ಮತ್ತು ಉಕ್ಕು ೨,೫೦,೦೦೦ ಟನ್ನುಗಳಷ್ಟು ಉತ್ಪಾದನೆಯಾಗಬೇಕಾಗಬಹುದೆಂದು ಅಂದಾಜುಮಾಡಲಾಗಿದೆ. ಸದ್ಯದ ಉತ್ಪಾದನೆಯು ಕಬ್ಬಿಣ ೧೮,೭೮,೦೦೦ ಟನ್ನುಗಳು, ಉಕ್ಕು ೧೦,೫೦,೦೦೦ ಟನ್ನುಗಳು ಇಷ್ಟಿದೆ. ಯೋಜನೆಯ ಕಾಲಾವಧಿಯಲ್ಲಿಯ ಕಾರ್ಯದಿಂದ ಅಷ್ಟು ಹೆಚ್ಚಿನ ಉತ್ಪಾದನೆ ಮಾಡಬೇಕೆಂದಿದೆ. ಇದಕ್ಕೆ ಬೇಕಾಗುವ ಬೇರೆ ಕಚ್ಚಾ ಸರಕುಗಳ ಸಾಗಾಟದ ಸಮಸ್ಯೆಯೊಂದು ಇದಿರುಬರುತ್ತದೆ. ಆನುಷಂಗಿಕವಾಗಿ ಸಾರಿಗೆ

ಸಂಪರ್ಕದಲ್ಲಿ ಪ್ರಗತಿಯಾಗಬೇಕಾಗುವುದು. ಇತ್ತೀಚೆ ಬೆಳೆಯುತ್ತಿರುವ ನಿರ್ಯಾತವನ್ನೂ ನಿಯಂತ್ರಿಸಬೇಕಾಗುವುದು.

## ಮ್ಯಾಂಗ್ಯಾನೀಜ

ಕಬ್ಬಿಣ ಮತ್ತು ಉಕ್ಕುಗಳ ಉದ್ಯಮದಲ್ಲಿ ಕರಗಿಸುವ ವಿಧಾನಕ್ಕಾಗಿ ಬಳಸಲಾಗುವ ಮಹತ್ವದ ಖನಿಜವಾಗಿದೆ ಮ್ಯಾಂಗ್ಯಾನೀಜ. ಈ ಖನಿಜ ಸಂಪತ್ತಿಯು ಭಾರತದಲ್ಲಿ ವಿಶೇಷವಾಗಿದೆ; ರಶಿಯ ಒಂದನ್ನು ಬಿಟ್ಟರೆ ಇಷ್ಟು ಉತ್ತಮ ತರಗತಿಯ ಖನಿಜ ಬೇರೊಂದು ದೇಶದಲ್ಲಿ ಸಿಕ್ಕಲಾರದೆಂದು ಹೇಳ ಬಹುದು. ಈ ಖನಿಜವು ಮಧ್ಯಪ್ರದೇಶ, ಮಧ್ಯಭಾರತ, ಮದ್ರಾಸ, ಮೈಸೂರು, ಮುಂಬಯಿ ರಾಜ್ಯಗಳಲ್ಲಿ ಕೇಂದ್ರೀಕೃತವಾಗಿದೆ. ಬಿಹಾರ, ಓರಿಸಾಗಳಲ್ಲಿಯೂ ದೊರೆಯುತ್ತದೆ. ಮಧ್ಯಪ್ರದೇಶದಲ್ಲಿಯದೇ ದೊಡ್ಡದೂ ಉತ್ತಮವಾದುದೂ ಆದ ಕ್ಷೇತ್ರ. ಒಟ್ಟಿನಲ್ಲಿ ೧೫೦ರಿಂದ ೨೦೦ ಲಕ್ಷ ಟನ್ನು ಗಳಷ್ಟು ಈ ಖನಿಜದ ಸಂಪತ್ತು ಇರಬಹುದೆಂದು ಅಂದಾಜು ಮಾಡಲಾಗಿದೆ. ಕಳೆದ ೪೦ ವರುಷಗಳಲ್ಲಿ ಸರಾಸರಿ ಉತ್ಪಾದನೆಯು ವಾರ್ಷಿಕವಾಗಿ ೬೦೦೦೦೦ ಟನ್ನುಗಳಷ್ಟು ಆಗಿದೆ. ಟಾಟಾ ಆಯರ್ನ ಮತ್ತು ಸ್ಟೀಲ ಕಂಪನಿ ಬಳಸುವ ಪ್ರಮಾಣವನ್ನು ಬಿಟ್ಟರೆ ಉಳಿದುದು ಹೆಚ್ಚಾಗಿ ನಿರ್ಯಾತವಾಗುತ್ತದೆ. ಕೆಲವೊಂದು ಪ್ರಮಾಣವು ಕಾಜಿನ ಉದ್ಯಮದಲ್ಲಿ ಬಳಸಲಾಗುತ್ತದೆ. ಬ್ಯಾಟರಿ ಸೆಲ್ಲುಗಳನ್ನು ತಯಾರು ಮಾಡಲು, ರಾಸಾಯನಿಕ ಉದ್ಯಮಗಳಲ್ಲಿ ಸ್ವಲ್ಪು, ಹೀಗೆ ಅದರ ಬಳಕೆಯಾಗುತ್ತದೆ. ಕಬ್ಬಿಣ, ಉಕ್ಕು ಮತ್ತು ಇತರ ಉದ್ಯಮಗಳ ವಿಸ್ತರಣ ಅಭಿವೃದ್ಧಿಯ ಮೂಲಕ ವಾರ್ಷಿಕವಾಗಿ ೧೦೦೦೦೦ ಟನ್ನುಗಳಷ್ಟು ಮ್ಯಾಂಗ್ಯಾನೀಜು ೧೯೫೭–೫೮ ರಷ್ಟರಲ್ಲಿ ಭಾರತದಲ್ಲಿಯೆ ಬಳಸಲಾಗುವುದು. ಈ ಹೆಚ್ಚಿನ ಬೇಡಿಕೆ ಪೂರೈಸುವುದು ಕಠಿಣವೇನಲ್ಲ.

## ಕ್ರೊಮಾಯಿಟ

ಕ್ರೊಮಾಯಿಟದ ಪೂರೈಕೆ ವ್ಯಾಪ್ತಿ ಕಡಿಮೆಯಿದೆ. ಕ್ರೊಮಾಯಿಟು ಬಿಹಾರ, ಮೈಸೂರು, ಮುಂಬಯಿ, ಮದ್ರಾಸ ಮತ್ತು ಓರಿಸಾಗಳಲ್ಲಿದೆ.

ಕಾಶ್ಮೀರದ ಲಾಡಾಖದಲ್ಲಿಯೂ ಇದೆ. ಮಣಿಪುರ ಮತ್ತು ಅಂದಮಾನಗಳಲ್ಲಿಯೂ ಅಲ್ಪ ಸ್ವಲ್ಪ ಇದೆ. ಭೂಗರ್ಭಸಂಪತ್ತು ಎಷ್ಟಿದೆಯೆಂದು ಹೇಳಲು ಬಾರದು. ೧೯೫೭ರಲ್ಲಿ ೧೫,೮೦೨ ಟನ್ನುಗಳಷ್ಟು ಉತ್ಪಾದನೆಯಾಗಿತ್ತು. ಇದರಲ್ಲಿಯು ಬಹುಭಾಗ ನಿರ್ಯಾತವಾಗಿತ್ತು. ದೇಶದಲ್ಲಿಯು ಅದರ ಬಳಕೆಯು ಒಂದು ಮಾದರಿಯ ಇಟ್ಟಿಗೆ ಮತ್ತು ಕ್ರೋಮ ರಸಾಯನಗಳನ್ನು ಮಾಡಲು ಉಪಯೋಗವಾಗುತ್ತದೆ. ಇನ್ನಿತರ ತಯಾರಿಕೆಗಳ ಆಸ್ಪದ, ಅವಕಾಶ, ಜ್ಞಾನವಿದ್ದರೂ ತಯಾರಾಗುತ್ತಿಲ್ಲ. ೧೯೫೮ರಿಂದ ಉತ್ತಮ ತರಗತಿಯ ಈ ಖನಿಜದ ನಿರ್ಯಾತವನ್ನು ತಡೆಯಲಾಗಿದೆ. ಕೆಳ ತರಗತಿಯುದರ ನಿರ್ಯಾತವು ೧೦,೦೦೦ ಟನ್ನುಗಳಿಗೆ ಮರ್ಯಾದಿತವಾಗಿದೆ. ಭೂಗರ್ಭದ ಸಂಪತ್ತಿಯ ಬಗ್ಗೆ ಹೆಚ್ಚು ತಿಳಿದಂತೆಲ್ಲ ಈ ಘೋಷಣೆಯನ್ನು ಪುನರ್ವಿಮರ್ಶಿಸಬಹುದು.

## ಬಾಕ್ಸಾಯಿಟ

ಇದು ಆಲ್ಯೂಮಿನಿಯಂಕ್ಕೆ ಮೂಲಧಾತು. ಭಾರತದಲ್ಲಿ ವಿಶೇಷವಾಗಿ ಹಂಚಿಹೋಗಲಾಗಿದೆ. ದೊರೆಯುವ ಮುಖ್ಯವಾದ ಸ್ಥಾನಗಳು ಮುಂಬಯಿ, ಮಧ್ಯಭಾರತ, ಮಧ್ಯಪ್ರದೇಶ, ಬಿಹಾರರಾಜ್ಯಗಳಲ್ಲಿವೆ. ಓಡಿಸಾ ಕಾಶ್ಮೀರ, ಮದ್ರಾಸಗಳಲ್ಲಿಯೂ ಸ್ವಲ್ಪ ಪ್ರಮಾಣಗಳಲ್ಲಿ ದೊರೆವುದು. ಒಟ್ಟು ಭೂಗರ್ಭಸಂಪತ್ತಿಯು ೨೫೦೦ ಲಕ್ಷ ಟನ್ನುಗಳಷ್ಟು ಇರಬಹುದೆಂದು ಅಂದಾಜು ಮಾಡಲಾಗಿದೆ. ಇವರಲ್ಲಿಯು ಉತ್ತಮ ತರಗತಿಯುದು ಸುಮಾರು ೩೫೦ ಲಕ್ಷ ಟನ್ನುಗಳಷ್ಟಾಗಬಹುದು. ಕಳೆದೆರಡು ವರುಷಗಳಲ್ಲಿ ದೇಶದ ಅಲ್ಯೂಮಿನಿಯಂ ಉದ್ಯಮವು ವಾರ್ಷಿಕವಾಗಿ ೨೦೦೦೦ ಟನ್ನುಗಳಷ್ಟು ಬಳಸುತ್ತದೆ. ೧೯೫೫–೫೬ರಷ್ಟರಲ್ಲಿ ಸುಮಾರು ೪೫೦೦೦ ಟನ್ನುಗಳಷ್ಟು ಬೇಡಿಕೆಯು ಆಗಬಹುದೆಂದು ತೋರುತ್ತದೆ.

## ಮಾಯಿಕಾ (ಅಭ್ರಕ)

ಇದು ಬಹು ಮಹತ್ವವುಳ್ಳ ಖನಿಜವು. ವಿದ್ಯುತ್ ಉಪಕರಣಗಳ ಉದ್ಯಮದಿಂದ ಇವಕ್ಕೆ ಬೇಡಿಕೆ ಹೆಚ್ಚು. ಭಾರತವು ಈ ಖನಿಜದ ಆಗರ

ಷ್ಟಾಗಿದೆ ಎನ್ನಲಡ್ಡಿಯಿಲ್ಲ: ಇಡಿ ಪ್ರಪಂಚದ ಉತ್ಪಾದನೆಯ ೭೦ರಿಂದ ೮೦ ಶತಾಂಶ ಉತ್ಪಾದನೆಯು ಭಾರತದಲ್ಲಿ ಆಗುತ್ತದೆ. ದೇಶದಲ್ಲಿಯ ಅದರ ಬಳಕೆ ತೀರ ಮಿತವಾಗಿದೆ. ಈ ಉದ್ಯಮವು ಪರದೇಶದ ಮಾರ್ಕೆಟುಗಳನ್ನು ಅವಲಂಬಿಸಿದೆ. ಈ ಖನಿಜಸಂಪತ್ತು ಬಿಹಾರ ರಾಜಸ್ಥಾನ ಮತ್ತು ಮದ್ರಾಸ ಪ್ರಾಂತಗಳಲ್ಲಿದೆ. ಇತ್ತಿತ್ತಲಾಗಿ ಭಾರತದ ಇನ್ನೂ ಹಲವಾರು ಕಡೆಗಳಲ್ಲಿಯೂ ಅದು ಇರುವುದಾಗಿ ವರದಿಯಾಗಿದೆ. ಭೂಗರ್ಭದಲ್ಲಿ ಎಷ್ಟು ಇವೆಯೆಂಬುದು ನಿಶ್ಚಿತಗೊಳಿಸಲು ಆಗಿಲ್ಲ: ಆದರೆ ಇಷ್ಟೇ ಹೇಳಬಹುದು: ಇದೇ ಉತ್ಪಾದನೆಯ ಪ್ರಮಾಣದಂತೆ ಅನೇಕ ದಶಕಗಳವರೆಗೆ ಅದು ಪೂರೈಸಬಹುದು ಎಂದು ಕಂಡುಬರುವ ಹಾಗಿದೆ. ಕಳೆದ ಹತ್ತು ವರುಷಗಳಲ್ಲಿ ನಿರ್ಯಾತ ಮಾಡಿದ ಈ ಖನಿಜದ ವಾರ್ಷಿಕ ಬೆಲೆಯು ೧.೫ರಿಂದ ೩ ಕೋಟಿ ರೂಪಾಯಿಗಳ ವರೆಗೆ ಇದ್ದುದು ಕಂಡುಬಂದಿದೆ. ಕಳೆದ ಎರಡು ವರುಷಗಳಲ್ಲಿ ಈ ಪ್ರಮಾಣ ಇನ್ನೂ ಏರಿದೆ. ಅಮೇರಿಕೆಯು ಇದನ್ನು ಕೊಂಡುಕೊಂಡು ಸಂಗ್ರಹಿಸುತ್ತಿದೆ

ಈ ಖನಿಜದ ಗಣಿಕಾರ್ಯವು ಸಣ್ಣ ಪ್ರಮಾಣದಲ್ಲಿ ನಡೆಯುತ್ತಿದೆ. ಸುಮಾರು ೬೦೦ ಲಾಯಸೆನ್ಸುದಾರರು ಇದ್ದರೂ ಅವರಲ್ಲಿ ಬಹು ಜನರಿಗೆ ಸಾಕಷ್ಟು ಬಂಡವಲು ಇಲ್ಲ. ಅದಕ್ಕಾಗಿ ಉತ್ಪಾದನ ಮಾಡಿದ ಕೂಡಲೇ ಅವರು ದಲಾಲರಿಗೆ ಮಾರುತ್ತಾರೆ; ಹಣ ಪಡೆದು ಮತ್ತೆ ಕಾರ್ಯಕ್ಕೆ ತೊಡಗುತ್ತಾರೆ. ಆದಕ್ಕಾಗಿ ಆಧುನಿಕ ರೀತಿಯಲ್ಲಿ ಗಣಿ ಕೆಲಸ ನಡೆಯುತ್ತಿಲ್ಲ. ಇದರಿಂದ ಹೆಚ್ಚು ಸವಕಳಿ ಕಂಡುಬರುತ್ತಿದೆ ಪರಿಣತರನ್ನು ನಿಯಮಿಸಿಕೊಳ್ಳುವುದು ಅತ್ಯಗತ್ಯವೆಂದು ಅವರಿಗೆ ಬಿಂಬಿಸುವ ಕಾರ್ಯ ನಡೆದಿದೆ.

ಈ ಖನಿಜವು ಮೂಲಸ್ಥಿತಿಯಲ್ಲಿಯೇ ಉಪಯೋಗಿಸಲಾಗುತ್ತಿದೆ. ಭಾರತದಲ್ಲಿ ವಾರ್ಷಿಕವಾಗಿ ಸುಮಾರು ೭೦೦೦ ಪೌಂಡು ಬಳಸಲಾಗುತ್ತಿದೆ. ಇದು ರೇಲ್ವೆ, ವಿದ್ಯುತ್ ಕಾರಖಾನೆಗಳು ಮತ್ತು ಕಬ್ಬಿಣ ಉಕ್ಕು ಕಂಪನಿಗಳಲ್ಲಿ ಹಂಚಿಹೋಗುವುದು. ಈಗಾಗಲೇ ಯೋಜನೆಯಲ್ಲಿರುವ ವಿದ್ಯುತ್‌-ಕೇಂದ್ರಗಳಿಂದ ಹೆಚ್ಚಿನ ಬೇಡಿಕೆ ಬರಬಹುದಾಗಿದೆ. ಈ ಬೇಡಿಕೆಯನ್ನು ಪೂರೈಸಲು ಯಾವ ತೊಂದರೆಯೂ ಆಗದಷ್ಟು ಉತ್ಪಾದನೆಯಿದೆ

ಆಕಾರಕ್ಕಿಳಿಸುವಾಗ, ಕಣಿಯಿಂದ ಹೊರತೆಗೆಯುವಾಗ, ಸಾಕಷ್ಟು ಹಾಳಾ-ಗುವುದು. ಅದನ್ನು ತಡೆಯಬೇಕು.

## ಜಿಪ್ಸಮ್

ಕಬ್ಬಿಣ, ಕಲ್ಲಿದ್ದಲಿಯ ನಂತರ, ದೇಶದ ಔದ್ಯೋಗಿಕ, ಆರ್ಥಿಕ ವ್ಯವಸ್ಥೆಗೆ ಇದರಷ್ಟು ಮಹತ್ವವುಳ್ಳ ಖನಿಜ ಬೇರೊಂದಿಲ್ಲ. ಎರಡನೆಯ ಮಹಾಯುದ್ಧದ ಮೊದಲು ಇದು ಸಿಮೆಂಟ ಮತ್ತು ಪ್ಲಾಸ್ಟರ ಆಫ್ ಪಾರಿಸ್ ತಯಾರಿಕೆಗೆ ಉಪಯೋಗಿಸಲಾಗುತ್ತಿತ್ತು. ರಾಸಾಯನಿಕ ಗೊಬ್ಬರವಾದ ಅಮೋನಿಯಂ ಸಲ್ಫೇಟದ ತಯಾರಿಕೆಗೆ ಇದು ಉಪಯೋಗವಾಗುವುದು. ಸಲ್ಫುರಿಕ್ ಆ್ಯಸಿಡ್‌ದ ತಯಾರಿಕೆಗೂ ಉಪಯೋಗಿಸಬಹುದು. ಸಿಂದ್ರಿಯಲ್ಲಿ ರಾಸಾಯನಿಕ ಗೊಬ್ಬರ ತಯಾರಿಕೆಯ ಕಾರಖಾನೆ ಪ್ರಾರಂಭವಾದಂದಿನಿಂದ ಈ ಖನಿಜದ ಉತ್ಪತ್ತಿಯ ಕಡೆಗೆ ವಿಶೇಷ ಲಕ್ಷ್ಯ ಹಾಕಲಾಗಿದೆ. ಈ ಖನಿಜವು ರಾಜಸ್ಥಾನ ಮತ್ತು ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ದೊರೆವುದು. ತೆಹರಿಗಢವಾಲ ಮತ್ತು ಹಿಮಾಚಲ ಪ್ರದೇಶದಲ್ಲಿಯೂ ಅಲ್ಪಸ್ವಲ್ಪ ಪ್ರಮಾಣದಲ್ಲಿ ದೊರೆಯುತ್ತದೆ

೧೯೪೯ರಲ್ಲಿ ೧೪೦,೦೦೦ ಟನ್ನುಗಳಷ್ಟು ಉತ್ಪಾದನೆಯಾಗಿತ್ತು. ೧೯೫೧ರಲ್ಲಿ ೨೦೦,೦೦೦ ಟನ್ನುಗಳಷ್ಟು ಉತ್ಪಾದನೆಯಾಗಿದೆ. ಈಗ ಸಿಮೆಂಟಿಗಾಗಿ ವರುಷಕ್ಕೆ ೯೪೦೦೦ ಟನ್ನು, ೩೦೦೦ ಟನ್ನು ಪ್ಲಾಸ್ಟರ ಆಫ್ ಪಾರಿಸಿಗೆ, ಬೇಕಾಗುತ್ತದೆ. ಸಿಂದ್ರಿಯ ಗೊಬ್ಬರಕಾರಖಾನೆಯು ಪೂರ್ಣ ಉತ್ಪಾದನ ಸ್ಥಿತಿಗೆ ಮುಟ್ಟಿದಾಗ ವರುಷಕ್ಕೆ ಅದಕ್ಕೆ ೬೦೦೦೦೦ ಟನ್ನು ಬೇಕಾಗುವುದು. ತ್ರಾವಣಕೋರದಲ್ಲಿಯ ಗೊಬ್ಬರ ಮತ್ತು ರಸಾಯನ ಕಂಪನಿಗೆ ವರುಷಕ್ಕೆ ೩೬೦೦೦ ಟನ್ನು ಬೇಕಾಗುವುದು. ಯೋಜನೆಯ ದೃಷ್ಟಿಯನುಸರಿಸಿ ಹೆಚ್ಚಿಗೆ ಉತ್ಪಾದನವಾಗುವ ಸಿಮೆಂಟಿಗೆ ೧೯೫೫-೫೬ ರಷ್ಟರಲ್ಲಿ ಒಟ್ಟಿಗೆ ೮೬೦,೦೦೦ ಟನ್ನುಗಳಷ್ಟು ಬೇಡಿಕೆ ಬರುವುದು.

## ಗಂಧಕ

ಭಾರತದಲ್ಲಿ ಮೂಲಧಾತುವಾದ ಗಂಧಕದ ಸಂಪತ್ತಿ ಸಾಕಷ್ಟು ಇಲ್ಲ. ಮಿಶ್ರಸ್ಥಿತಿಯಾಗಿರುವ ಪಾಯರಾಟು ಕಾಶ್ಮೀರ, ಬಿಹಾರ, ಮುಂಬಯಿ,

ಮೈಸೂರ, ಸಿಮ್ಲಾ, ನೀಲಗಿರಿ, ಇಲ್ಲಿ ದೊರೆಯುತ್ತದೆ. ತಾಮ್ರವಾದರೂ ತಾಮ್ರದ ಪಾಯಿರಾಟು ಎಂದೆ ದೊರೆಯುತ್ತಿದೆ. ಭಾರತದಲ್ಲಿಯ ಕೆಲ ಮಾದರಿಯ ಕಲ್ಲಿದ್ದಲಿಯಲ್ಲಿ ಗಂಧಕ ದೊರೆಯುತ್ತಿದೆ. ಅದನ್ನು ಮಿತವ್ಯಯದಿಂದ ಹೇಗೆ ಪಡೆಯಬೇಕೆಂಬುದಕ್ಕೆ ಸಂಶೋಧನೆ ನಡೆಯಬೇಕು. ತಾಮ್ರದ ಮೂಲಧಾತುವನ್ನು ಕರಗಿಸುವಾಗ ಐದಾರುಸಾವಿರ ಟನ್ನುಗಳಷ್ಟು ಗಂಧಕ ಗಾಳಿಗೂಡಿ ಹೋಗುತ್ತದೆ. ಇದನ್ನು ತಡೆದು ಸಲ್ಫುರಿಕ್ ಆ್ಯಸಿಡ ಮಾಡುವ ಯೋಜನೆಯು ವಿಚಾರದಲ್ಲಿದೆ.

ದೇಶದಲ್ಲಿ ಸಾಕಷ್ಟು ಉತ್ಪಾದನವಾಗದ್ದರಿಂದ ಆಯಾತ ಮಾಡಬೇಕಾಗುವುದು. ೧೯೪೯ರಲ್ಲಿ ೪೦,೦೦೦ ಟನ್ನು, ೧೯೫೦ರಲ್ಲಿ ೫೫೦೦೦ ಟನ್ನು ಆಯಾತ ಮಾಡಿದೆ. ಕಳೆದ ಮೂರುವರುಷಗಳಲ್ಲಿ ವಾರ್ಷಿಕವಾಗಿ ಆಯಾತ ಮಾಡಲಾಗುವ ಗಂಧಕದ ಬೆಲೆ ೮೦ ಲಕ್ಷ ರೂಪಾಯಿಗಳಷ್ಟಾಗುವುದು. ಸದ್ಯಕ್ಕೆ ವರುಷಕ್ಕೆ ದೇಶಕ್ಕೆ ಬೇಕಾಗುವ ಗಂಧಕದ ಪ್ರಮಾಣವು ೬೫೦೦೦ ಟನ್ನುಗಳಷ್ಟಿದೆ. ಸಲ್ಫುರಿಕ್ ಆ್ಯಸಿಡ್ ಕಾರಖಾನೆಗೆ ಹೆಚ್ಚು ಬೇಡಿಕೆ. ೧೯೫೫–೫೬ ರಷ್ಟರಲ್ಲಿ ಸಲ್ಫುರಿಕ್ ಆ್ಯಸಿಡ್ ಕಾರಖಾನೆಗೆ ಬೇಕಾಗುವ ಬೇಡಿಕೆಯನ್ನು ಗಮನಿಸಿದರೆ, ವರುಷಕ್ಕೆ ೮೫೦೦೦ ಟನ್ನುಗಳಷ್ಟು ಗಂಧಕವು ಬೇಕಾಗುವುದು.

## ಔದ್ಯೋಗಿಕ ಮತ್ತು ವೈಜ್ಞಾನಿಕ ಸಂಶೋಧನೆ

ಯೋಜನಾಬದ್ಧ ಆರ್ಥಿಕ ವ್ಯವಸ್ಥೆಯಲ್ಲಿ ವಿಜ್ಞಾನದ ಪಾತ್ರವು ದೊಡ್ಡದು. ತಾಂತ್ರಿಕ ಸುಧಾರಣೆಗಳಿಂದ ಉತ್ಪಾದನೆ ಹೆಚ್ಚುವುದು. ಕಚ್ಚಾ ಸರಕುಗಳ ಎಲ್ಲ ಬಗೆಯ ಸದುಪಯೋಗ ಮಾಡಿಕೊಳ್ಳಲು ವೈಜ್ಞಾನಿಕ ಸಂಶೋಧನೆ ಅತ್ಯಗತ್ಯ. ದೇಶದ ಪ್ರತಿಯೊಂದು ಕಾರ್ಯ ಕ್ಷೇತ್ರವನ್ನು ಗಮನಿಸಿ ವ್ಯಾಪಕವಾದ ಆದರೂ ಸಮತೂಕವುಳ್ಳ ಸಂಶೋಧನ ಕಾರ್ಯಕ್ರಮವನ್ನು ಸಿದ್ಧಪಡಿಸಲಾಗಿದೆ. ಇದರಿಂದ ಜೀವನಮಟ್ಟದ ಸುಧಾರಣೆಯೂ ರಾಷ್ಟ್ರೀಯ ಆದಾಯದಲ್ಲಿ ಹೆಚ್ಚಳವೂ ಆಗಬಹುದಾಗಿದೆ. ಎರಡನೆಯ ಮಹಾಯುದ್ಧದಲ್ಲಿ ಭಾರತವು ಪೂರ್ವವಲಯದ ಯುದ್ಧರಂಗಕ್ಕೆ ಮುಖ್ಯ ಪೂರೈಕೆ ಕೇಂದ್ರವಾದುದರಿಂದ ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನೆಯ ಕಡೆಗೆ ಹೆಚ್ಚು ಲಕ್ಷ್ಯ ಹಾಕಲಾಯಿತು. ಆಯಾತ ಮಾಡಲು ಸಾಧ್ಯವಿಲ್ಲದ

ಸರಕುಗಳಿಗೆ ಬದಲಾದ ಸರಕುಗಳನ್ನು ಕಂಡುಹಿಡಿಯಬೇಕಾಯಿತು; ಅವುಗಳನ್ನು ಉಪಯೋಗಮಾಡುವ ಕ್ರಮಗಳನ್ನು ಕಂಡುಹಿಡಿಯಬೇಕಾಯಿತು. ೧೯೪೦ ರಲ್ಲಿ ಭಾರತ ಸರಕಾರವು ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನೆಯ ಸಮಿತಿಯೊಂದನ್ನು ರಚಿಸಿತು.

ದೇಶವು ಸ್ವತಂತ್ರವಾದಂದಿನಿಂದ ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನೆಗೆ ಹೆಚ್ಚಿನ ಪುಟುವು ದೊರೆತಿದೆ. ಹೊಸ ನಿರೀಕ್ಷಣೆ, ಅನ್ವೇಷಣೆ ಎಲ್ಲ ಕ್ಷೇತ್ರಗಳಲ್ಲಿ ನಡೆಸಲಾಗಿದೆ. ಅನೇಕ ಪ್ರಯೋಗ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಅವು ಯಾವೆಂದರೆ:

೧. ನ್ಯಾಶನಲ್ ಫಿಜಿಕಲ್ ಲ್ಯಾಬೊರೇಟರಿ ನ್ಯೂ ದಿಲ್ಲಿ.
೨. ನ್ಯಾಶನಲ್ ಕೆಮಿಕಲ್ ಲ್ಯಾಬೊರೇಟರಿ, ಪುಣೆ.
೩. ನ್ಯಾಶನಲ್ ಮೆಟ್ಯಾಲಾಜಿಕಲ್ ಲ್ಯಾಬೊರೇಟರಿ, ಜಮಶೇದಪೂರ
೪. ದಿ ಫ್ಯುಯಲ್ ರಿಸರ್ಚ ಇನ್‌ಸ್ಟಿಟ್ಯೂಟ. ಜಾಯಿಲ್‌ಗೋರಾ.
೫. ದಿ ಸೆಂಟ್ರಲ್ ಫುಡ್ ಟೆಕ್ನಾಲಾಜಿಕಲ್ ರಿಸರ್ಚ ಇನ್‌ಸ್ಟಿಟ್ಯೂಟ, ಮೈಸೂರು.
೬. ದಿ ಸೆಂಟ್ರಲ್ ಡ್ರಗ್ ರಿಸರ್ಚ ಇನ್‌ಸ್ಟಿಟ್ಯೂಟ್, ಲಕನೊ.
೭. ದಿ ಸೆಂಟ್ರಲ್ ಗ್ಲಾಸ ಅ್ಯಂಡ ಸಿರ್‍ಯಾಮಿಕ್ಸ ರಿಸರ್ಚ ಇನ್‌ಸ್ಟಿಟ್ಯೂಟ, ಕಲಕತ್ತೆ.
೮. ದಿ ಸೆಂಟ್ರಲ್ ರೋಡ ರಿಚರ್ಸ ಇನ್‌ಸ್ಟಿಟ್ಯೂಟ. ದಿಲ್ಲಿ.
೯. ದಿ ಸೆಂಟ್ರಲ್ ಬಿಲ್ಡಿಂಗ್ ರಿಸರ್ಚ ಇನ್‌ಸ್ಟಿಟ್ಯೂಟ ರೂರ್ಕಿ
೧೦. ದಿ ಸೆಂಟ್ರಲ್ ಲೆದರ ರಿಸರ್ಚ ಇನ್‌ಸ್ಟಿಟ್ಯೂಟ, ಮದ್ರಾಸ.
೧೧. ದಿ ಸೆಂಟ್ರಲ್ ಇಲೆಕ್ಟ್ರೊ ಕೆಮಿಕಲ್ ರಿಸರ್ಚ ಇನ್‌ಸ್ಟಿಟ್ಯೂಟ, ಕರಾಯಿಕುಡಿ.

ಈ ಎಲ್ಲ ಸಂಸ್ಥೆಗಳು ಕಾರ್ಯ ಪ್ರಾರಂಭಮಾಡಿವೆ. ಸಂಪತ್ತು ಸಾಮಗ್ರಿ ಎಷ್ಟಿದೆ, ಪ್ರಯೋಗಗಳ ಫಲಿತಾಂಶವೇನು, ಪ್ರಮಾಣಗಳು ಯಾವು, ಉಪಯುಕ್ತ ಕ್ರಮಗಳು ಯಾವು ಎಂದು ಅನೇಕ ಸಂಗತಿಗಳ ಬಗ್ಗೆ ಮಾಹಿತಿ ಒದವಿಸುತ್ತಲಿವೆ. ಇವೆಲ್ಲವೂ ಇಂಡಿಯನ್ ಸ್ಟ್ಯಾಂಡರ್ಡ

ಇನ್‌ಸ್ಟಿಟ್ಯೂಶನದೊಡನೆ ಸಹಕಾರದಿಂದ ಕಾರ್ಯ ಮಾಡುತ್ತಲಿವೆ. ಪ್ರಾಥಮಿಕ ಅವಸ್ಥೆಯಲ್ಲಿದ್ದ ಕೆಲವು ಸಂಸ್ಥೆಗಳಿಗೆ ತಕ್ಕ ತಜ್ಞರು, ಕಾರ್ಯಕರ್ತರು ಬೇಕಾಗಿದೆ. ಈ ಸಂಸ್ಥೆಗಳ ಜತೆಗೆ ಯೋಜನೆಯ ಕಾಲಾವಧಿಯಲ್ಲಿ ಮೂರು ಸಂಸ್ಥೆಗಳನ್ನು ಸ್ಥಾಪಿಸಬೇಕೆಂದಿದೆ. ರೇಡಿಯಂ ಮತ್ತು ಇಲೆಕ್ಟ್ರಾನಿಕ್ಸ ರಿಸರ್ಚ ಇನ್‌ಸ್ಟಿಟ್ಯೂಟ, ಮೆಕ್ಯಾನಿಕಲ್ ಇಂಜಿನಿಯರಿಂಗ ರಿಸರ್ಚ ಇನ್‌ಸ್ಟಿಟ್ಯೂಟ; ಇದು ಗುಡಿಕೈಗಾರಿಕೆ, ಕಿರಿಉದ್ಯಮಗಳಿಗೆ ಯಾಂತ್ರಿಕ, ತಾಂತ್ರಿಕ ಸಲಹೆ ಕೊಡುವುದು; ಉಪಕರಣಗಳ ಪ್ರಯೋಗಮಾಡಿ ಕೊಡುವುದು. ಮೂರನೆಯದು ಸೆಂಟ್ರಲ್ ಸಾಲ್ಟ (ಉಪ್ಪು) ರಿಸರ್ಚ ಸ್ಟೇಶನ್.

ಔದ್ಯೋಗಿಕ ಉತ್ಪಾದನೆಯು ಮಧ್ಯಮ ತರಗತಿಯ ಮತ್ತು ಕಿರಿ ಉದ್ಯಮಗಳಿಂದಾಗಿರುವುದರಿಂದ ಅವುಗಳಿಗೆ ಸ್ವತಂತ್ರ ಸಂಶೋಧನೆಯ ವ್ಯವಸ್ಥೆಯು ಅನುಕೂಲವಿಲ್ಲದಾಗಿದೆ. ಅವುಗಳಿಗೆ ಮೇಲ್ಕಾಣಿಸಿದ ಸಂಸ್ಥೆಗಳಿಂದ ಪ್ರಯೋಗಜ್ಞಾನ ದೊರೆಯುವಂತೆ ಮಾಡಬೇಕೆಂದಿದೆ. ಇದುವರೆಗೆ ಸಂಶೋಧನೆಯು ಆರ್ಥಿಕ ಹೊಣೆಗಾರಿಕೆ ಕೇಂದ್ರದ್ದು ಆಗಿದ್ದಿತು; ಹೆಚ್ಚಿನ ಪ್ರಮಾಣದಲ್ಲಿ ಇದು ಮುಂದರಿಯುವುದು ಕೂಡ. ಆದರೆ ದೊಡ್ಡ ಉದ್ಯಮಗಳ ಔದ್ಯೋಗಿಕ ಸಂಶೋಧನೆಯ ಕಡೆಗೆ ಹೆಚ್ಚು ಲಕ್ಷ್ಯ ಹಾಕುವುದು ಅವಶ್ಯವಿದೆ. ರಾಷ್ಟ್ರೀಯ ಸಂಶೋಧನ ಕೇಂದ್ರಗಳಿಗೆ ಔದ್ಯಮಿಕ ಸಂಸ್ಥೆಗಳು ಧನಸಹಾಯ ಮಾಡಿವೆ. ಈ ಕೆಳಗಿನ ಸಂಸ್ಥೆಗಳಿಗೆ ಸರಕಾರವು ಧನಸಹಾಯ ಮಾಡುವುದು:

(೧) ದಿ ಅಹಮ್ಮದಾಬಾದ ಟೆಕ್‌ಸ್ಟಾಯಿಲ್ ಇಂಡಸ್ಟ್ರೀಜ ರಿಸರ್ಚ ಅಸೋಸಿಯೇಶನ್, ಅಹಮ್ಮದಾಬಾದ.

(೨) ದಿ ಸಿಲ್ಕ ಆ್ಯಂಡ ಆರ್ಟ ಸಿಲ್ಕ ಮಿಲ್ಸ ರಿಸರ್ಚ ಅಸೋಸಿಯೇಶನ್, ಮುಂಬಯಿ.

(೩) ದಿ ಸೌಥ ಇಂಡಿಯಾ ಟೆಕ್‌ಸ್ಟಾಯಿಲ್ ಇಂಡಸ್ಟ್ರೀಜ ರಿಸರ್ಚ ಅಸೋಸಿಯೇಶನ್, ಕೋಯಿಮುತ್ತೂರು.

ಉದ್ಯಮಗಳು ಹೆಚ್ಚು ಹೆಚ್ಚು ಸಂಶೋಧನೆಯ ಕಡೆಗೆ ಲಕ್ಷ್ಯ ಹಾಕಿದಂತೆಲ್ಲ ಸಂಶೋಧನೆಗೆ ಹೆಚ್ಚು ಪೋಷಣೆ ದೊರೆವುದು.

ವೈಜ್ಞಾನಿಕ ಸಂಶೋಧನೆಗಳು ಪೂರ್ಣಫಲಕಾರಿಯಾಗಬೇಕಾದರೆ ಅವುಗಳನ್ನು ವ್ಯಾಪಾರೀ ಉತ್ಪಾದನೆಯಲ್ಲಿ ಪರಿವರ್ತಿಸುವಂತೆಯಾಗಬೇಕು. ವಿಶಿಷ್ಟ ಸ್ಥಳದಲ್ಲಿ ಪ್ರಯೋಗಮಾಡಿ ನೋಡಬೇಕು. ಅಲ್ಲಲ್ಲಿ ಇಂತಹ ಮಾರ್ಗದರ್ಶನ ಪ್ರಾಯೋಗಿಕ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ಯೋಜನೆಯಲ್ಲಿದೆ. ಈ ಪ್ರಯೋಗಗಳು ಆದಮೇಲೆಯೂ ಅವುಗಳನ್ನು ವ್ಯಾಪಾರೀ ಸ್ವರೂಪದಲ್ಲಿ ಉತ್ಪಾದಿಸಲು ಸಾಧ್ಯವಾಗುವ ಹಾಗೆ ಇನ್ನೂ ಕಾರ್ಯಮಾಡಬೇಕಾಗಿರುತ್ತದೆ; ಹೊಸ ತಾಂತ್ರಿಕ ಕ್ರಮಗಳನ್ನು ಪ್ರಾತ್ಯಕ್ಷಿಕೆಗಳ ಮುಖಾಂತರ ಸಂಬಂಧಪಟ್ಟವರಿಗೆ ತಿಳಿಸಬೇಕಾಗುವುದು. ಈ ಅವಧಿಯಲ್ಲಿ ಉದ್ಯಮವು ಸರಕಾರದ ಒಡೆತನದಲ್ಲಿ ಪ್ರಾರಂಭಿಸಲ್ಪಡಬೇಕೋ ಖಾಸಗಿ ಉದ್ದಿಮೆದಾರರಿಗೆ ಬಿಡಬೇಕೊ ನಿರ್ಣಯಿಸಲ್ಪಡುವುದು. ಇದರ ಸಲುವಾಗಿ ವಿಚಾರ ವಿನಿಮಯ ಮಾಡಲು ನ್ಯಾಶನಲ್ ರಿಸರ್ಚ ಡೆವಲೊಪ್‌ಮೆಂಟ ಕೊರ್ಪೊರೇಶನ್ ಸ್ಥಾಪಿಸಬೇಕೆಂದು ಮಾಡಲಾಗಿದೆ. ಈ ಎಲ್ಲ ಸಂಸ್ಥೆಗಳನ್ನು ಕಾರ್ಯಕ್ಷಮವಾಗಿ ನಡಸಿ, ಸಂಶೋಧನೆಯ ಫಲಗಳನ್ನು ಉತ್ಪಾದಕರಿಗೆ ಮುಟ್ಟುವಂತೆ ಮಾಡಲು ಅಸಂಖ್ಯ ತಂತ್ರಕುಶಲ ಕಾರ್ಯಕರ್ತರು ಬೇಕಾಗುತ್ತಾರೆ. ಅವರ ಶಿಕ್ಷಣ ತರಬೇತು ಸಾಮಾನ್ಯ ಶಿಕ್ಷಣ ಕಾರ್ಯಕ್ರಮದ ಅಂಗವಾಗಿಯೇ ಮಾಡಲ್ಪಡಬೇಕಾಗುವುದರಿಂದ ಈ ವಿಷಯದ ಬಗ್ಗೆ ಹೆಚ್ಚು ವಿವರವು ಆ ವಿಭಾಗದಲ್ಲಿ ಕೊಡಲಾಗಿದೆ.

## ಪ್ರಕರಣ ಹನ್ನೊಂದು :

# ಅಭಿವೃದ್ಧಿ ಕಾರ್ಯಕ್ರಮಗಳು :
# ಉದ್ಯಮ, ವ್ಯಾಪಾರ-ವಾಣಿಜ್ಯ

### ಔದ್ಯಮಿಕ ಅಭಿವೃದ್ಧಿ ಮತ್ತು ಧೋರಣೆ :

ದೇಶದ ಸಧ್ಯದ ಪರಿಸ್ಥಿತಿಯಲ್ಲಿ ಒಕ್ಕಲುತನದ ಉತ್ಪಾದನೆ ಹೆಚ್ಚಬೇಕೆಂದು ಪ್ರಯತ್ನವು ಕೇಂದ್ರೀಕೃತವಾಗಿಸಲ್ಪಟ್ಟರೂ ಔದ್ಯೋಗಿಕ ಅಭಿವೃದ್ಧಿಯನ್ನು ಕಡೆಗಣಿಸಿಲ್ಲ, ಭಾರತದಂತಹ ದೇಶದಲ್ಲಿ ಕೃಷಿ ಮತ್ತು ಉದ್ಯಮಗಳಲ್ಲಿ ಯಾವ ರೀತಿಯ ಏಟಾಟ ಉಂಟಾಗುವುದು ಸಾಧ್ಯವಿಲ್ಲ. ಅವುಗಳ ಅಭಿವೃದ್ಧಿಯ ಪೂರಕ ಮತ್ತು ಪೋಷಕವಾಗುವುದು. ಕೃಷಿಯ ಉತ್ಪಾದನೆಯಿಂದ ಬರುವ ಕಚ್ಚಾ ಸರಕು ಉದ್ಯಮಗಳಲ್ಲಿ ತೊಡಗದಿದ್ದರೆ ಕೃಷಿಗೆ ಅವಶ್ಯಕವಾಗಿದ್ದ ಜೋರು ಇಲ್ಲದೆ ಉತ್ಪಾದನೆಯು ಪ್ರಗತಿಮುಖವಾಗಿ ಉಳಿವುದಿಲ್ಲ; ಆದುದರಿಂದ ಅಭಿವೃದ್ಧಿಹೊಂದುವ ಕೃಷಿಗೆ ಔದ್ಯಮಿಕ ವಿಕಾಸವು ಆವಶ್ಯಕವಾದ ಸನ್ನಿವೇಶವೆಂಬುದನ್ನು ಮರೆಯಲಾಗದು.

ಭಾರತವು ಔದ್ಯೋಗಿಕವಾಗಿ ಹಿಂದುಳಿದಿದೆ. ೧೯೪೮-೪೯ರಲ್ಲಿಯು ರಾಷ್ಟ್ರೀಯ ಆದಾಯದಲ್ಲಿಯು ೬·೬ ಶತಾಂಶದಷ್ಟು ಮಾತ್ರ ಔದ್ಯೋಗಿಕ ವಿಭಾಗದ ಉತ್ಪನ್ನವಿದ್ದಿತೆಂದು ಕಂಡುಬಂದುದು ಇದಕ್ಕೆ ಸಾಕ್ಷಿಯಾಗಿದೆ; ಉದ್ಯಮಗಳಲ್ಲಿ ತೊಡಗಿದ ಕಾರ್ಮಿಕರ ಸಂಖ್ಯೆ ೨೪ ಲಕ್ಷ ಮಾತ್ರ — ಅಂದರೆ ದುಡಿಯುವ ಜನಸಂಖ್ಯೆಯ ೧·೮ ಶತಾಂಶ ಮಾತ್ರ. ಒಟ್ಟಿನಲ್ಲಿ ಔದ್ಯೋಗಿಕ ಉತ್ಪತ್ತಿಯು ವಿಶಾಲವ್ಯಾಪ್ತಿಯುಳ್ಳದ್ದೆಂದು ಅನ್ನಿಸಿದರೂ ಉಳಿದ ಮುಂದುವರಿದ ದೇಶಗಳಲ್ಲಿಯ ಅಂಕಿಗಳನ್ನು ನೋಡಿದರೆ ಪ್ರತಿ ತಲೆಗೆ ನಮ್ಮಲ್ಲಿ ಬರುವ ಅಂಶವು ತೀರ ಕೆಳಮಟ್ಟದ್ದು ಎಂದು ಕಂಡುಬರುವುದು.

ಮೊದಲ ಮಹಾಯುದ್ಧದಕಿಂತ ಮುಂಚೆ ಇಲ್ಲಿ ಬೆಳೆದ ಉದ್ಯಮಗಳೆಂದರೆ ಅರಿವೆ ಮತ್ತು ಸಣಬಿನ ಸರಕುಗಳ ಉದ್ಯಮಗಳು. ಅವುಗಳಿಗೆ ಸ್ವಾಭಾವಿಕವಾದ ಸೌಕರ್ಯವೂ ಇದ್ದಿತು ಅನ್ನಬಹುದು. ಎರಡನೆಯ ಯುದ್ಧದ ಮೊದಲಿನ ಕಾಲಾವಧಿಯಲ್ಲಿ ಈ ಉದ್ಯಮ ಸಂರಕ್ಷಣಾ ಧೋರಣೆಯ ಮೂಲಕ ಅರಿವೆ, ಕಬ್ಬಿಣ ಉಕ್ಕು, ಕಾಗದ, ಸಕ್ಕರೆ ಈ ಉದ್ಯಮಗಳು ವಿಶೇಷವಾಗಿ ವಿಕಾಸಹೊಂದಿದುವು. ಅದರಂತೆಯೇ, ಸಿಮೆಂಟು, ಕಡ್ಡಿಪೆಟ್ಟಿಗೆ, ಗ್ಲಾಸು, ವನಸ್ಪತಿ ಮತ್ತು ಸಾಬೂಣ ಈ ಉದ್ಯಮಗಳು ಬೆಳೆದುವು. ಎರಡನೆಯ ಮಹಾಯುದ್ಧವು ಉದ್ಯಮಗಳ ವಿಕಾಸಕ್ಕೆ ಪುಟವು ಕೊಟ್ಟಿತು. ಈ ಮೊದಲೆ ಬೆಳೆದಿದ್ದ ಕಬ್ಬಿಣ, ಉಕ್ಕು, ಅರಿವೆ, ಕಾಗದ, ಸಿಮೆಂಟು ಕಾರಖಾನೆಗಳು ಪರಮಾವಧಿ ಉತ್ಪಾದನೆಯ ಶಕ್ತಿಯನ್ನು ೧೯೩೯–೪೫ರ ಕಾಲಾವಧಿಯಲ್ಲಿ ಪಡೆದುವು. ರಸಾಯನಗಳು, ಔಷಧಿಗಳು ಕೂಡ ವ್ಯಾಪ್ತಿಯನ್ನು ಪಡೆದುವು. ಇಂಜಿನು, ಮೋಟಾರು, ಹಡಗು ಕಟ್ಟುವುದು, ಸಾಯಿಕಲ್ಲು, ಹೊಲಿಗೆ ಯಂತ್ರ, ಡಾಯಿಸೆಲ್ ಇಂಜಿನುಗಳು, ಗಿರಣಿ ಯಂತ್ರಗಳು, ಬೇರಿಂಗುಗಳು, ಕೃತ್ರಕ ರೇಶಿಮೆ ಉದ್ಯಮಗಳು ಏರಿಕೆಯಲ್ಲಿ ಬಂದುವು.

ಇದುವರೆಗೆ ಬಳಕೆಯ ಸರಕುಗಳ ಉತ್ಪಾದನೆ ಮಾಡುವ ಉದ್ಯಮಗಳ ಕಡೆಗೇ ಲಕ್ಷ್ಯ ಪೂರೈಸಲಾಗಿದ್ದಿತು. ಈ ಉದ್ಯಮಗಳಿಂದ ಉತ್ಪಾದಿಸಲಾಗುವ ಅರಿವೆ, ಸಕ್ಕರೆ, ಸಾಬೂಣ, ಕಡ್ಡಿಪೆಟ್ಟಿಗೆ, ಉಪ್ಪು, ಇವು ಹೆಚ್ಚುಕಡಿಮೆ ದೇಶದ ಬೇಡಿಕೆಯನ್ನು ಪೂರೈಸುವುವು. ಇನ್ನು ಬಂಡವಲು ಸರಕುಗಳ ಉತ್ಪಾದಕ ಸರಕುಗಳ ಕಡೆಗೆ ಲಕ್ಷ್ಯ ಹಾಕುವುದವಶ್ಯವಿದೆ. ಕಬ್ಬಿಣ ಉಕ್ಕುಗಳ ಉದ್ಯಮಗಳ ಉತ್ಪಾದನೆಯು ದೇಶದ ಬೇಡಿಕೆಯ ೫೦ ಶತಾಂಶ ಮಾತ್ರ ಪೂರೈಸುವುವು. ಯಂತ್ರ ಸಾಮಗ್ರಿಗಳು ಹೆಚ್ಚು ಹೆಚ್ಚಾಗಿ ತಯಾರಾಗಬೇಕಾಗಿವೆ. ವಿದ್ಯುಚ್ಛಕ್ತಿಯ ವಿಕಾಸ ಯೋಜನೆಯನ್ನು ಕೈಕೊಂಡ ನಮ್ಮ ದೇಶಕ್ಕೆ ಆ ಯಂತ್ರಸಾಧನಗಳನ್ನು ಪರದೇಶದಿಂದಲೇ ತರಿಸಬೇಕಾಗುವುದು. ಅದರಂತೆ ಔಷಧಿ, ಬಣ್ಣ, ಸಜೀವ ರಾಸಾಯನಿಕಗಳು, ಇವುಗಳ ಉತ್ಪಾದನೆ ಇದೀಗ ಪ್ರಾರಂಭವಾಗಿದ್ದುದರಿಂದ ಪರದೇಶದ ಮೇಲೆ ಅವಲಂಬನ ಇನ್ನೂ ತಪ್ಪಿಲ್ಲ. ಉದ್ಯಮದಲ್ಲಿ ವಿಶೇಷ ಪ್ರಗತಿ ಸಾಧಿಸಬೇಕಾದರೆ ಈ ಕೊರತೆ ತುಂಬಿಕೊಳ್ಳುವುದು ಅನಿವಾರ್ಯವಾಗಿದೆ.

ಉದ್ಯಮ ವಿಭಾಗದಲ್ಲಿ ಸರಕಾರೀ ಮತ್ತು ಖಾಸಗೀ ಎಂದು ವಿಭಾಗ ಮಾಡಬೇಕಾಗುವುದು. ಮದ್ದು ಗುಂಡು, ಶಸ್ತ್ರಾಸ್ತ್ರಗಳ ಉತ್ಪಾದನವಂತೂ ಸರಕಾರದ ಒಡೆತನದಲ್ಲಿಯೇ ಆಗಬೇಕಾಗುವುದು. ಕಲ್ಲಿದ್ದಲಿ, ಕಬ್ಬಿಣ, ಉಕ್ಕು, ವಿಮಾನ, ಹಡಗು, ಟೆಲಿಫೋನು, ರೇಡಿಯೊ ಮುಂತಾದ ಉದ್ಯಮಗಳ ವಿಕಾಸದ ಕಡೆಗೆ ಸರಕಾರವು ತನ್ನ ಲಕ್ಷ್ಯ ಹಾಕುತ್ತಿದೆ. ಖಾಸಗಿ ಉದ್ದಿಮೆದಾರರಿಂದ ಒರುವ ಸಹಕಾರವನ್ನು ಸ್ವೀಕರಿಸಿ ಹೆಚ್ಚಿನ ಕಾರ್ಯ ಭಾರವನ್ನು ಸರಕಾರವು ಹೊತ್ತುಕೊಳ್ಳುತ್ತದೆ. ಇನ್ನುಳಿದ ಉದ್ಯಮಗಳನ್ನು ಖಾಸಗೀ ಉದ್ದಿಮೆದಾರರಿಗೆ ಬಿಡಲಾಗಿದೆ. ಆದರೆ ರಾಷ್ಟ್ರದ ಹಿತದ ದೃಷ್ಟಿಯಿಂದ ಅವಶ್ಯಕವೆನ್ನಿಸುವ ನಿಯಂತ್ರಣ-ನಿರ್ದೇಶನವನ್ನು ಮಾಡಲಾಗುವುದು ಈ ಔದ್ಯೋಗಿಕ ಧೋರಣೆ ಮತ್ತು ರಚನೆಯಲ್ಲಿ ರಾಷ್ಟ್ರದ ಅವಶ್ಯಕತೆಗಳನ್ನು ಪೂರೈಸುವುದು ಸಾಧ್ಯವಿದೆ. ಅವಶ್ಯವೆನ್ನಿಸಿದ ಉದ್ಯಮಗಳನ್ನು ಮಾತ್ರ ರಾಷ್ಟ್ರೀಕರಿಸುವ ಧೋರಣೆ ಇದೆ. ಖಾಸಗಿ ಉದ್ದಿಮೆಗಳು ರಾಷ್ಟ್ರದ ಉತ್ಪಾದನದಲ್ಲಿ ಮಹತ್ವದ ಪಾತ್ರ ವಹಿಸಲು ಶಕ್ಯವಿದೆ. ಆದರೆ ಸ್ವತಂತ್ರ ಭಾರತದ ಸಂವಿಧಾನದಲ್ಲಿ ಮೂಡಿಸಿದ ರಾಷ್ಟ್ರದ ಸರ್ವನಾಗರಿಕರ ಹಿತ ಅಭಿವೃದ್ಧಿಯ ದೃಷ್ಟಿ ಇಟ್ಟುಕೊಳ್ಳಬೇಕಾದುದು ಅಗತ್ಯವಾಗಿದೆ.

ಮೇಲ್ಕಾಣಿಸಿದ ಧೋರಣೆಯನ್ನು ಕಾರ್ಯಕಾರಿ ಮಾಡಲು ೧೯೫೧ರ ಇಂಡಸ್ಟ್ರೀಜ (ಅಭಿವೃದ್ಧಿ ಮತ್ತು ಕ್ರಮವಿನ್ಯಾಸ) ಆ್ಯಕ್ಟು ಸರಕಾರಕ್ಕೆ ಸಹಾಯಕವಾಗಿದೆ. ಅದು ೩೭ ಉದ್ದಿಮೆಗಳಿಗೆ ಅನ್ವಯಿಸುವುದು: ಬಳಕೆಯ ಸರಕುಗಳ ಉದ್ದಿಮೆಗಳು; ಬಂಡವಲು ಸರಕು ಉತ್ಪಾದಕ ಸರಕುಗಳ ಉದ್ದಿಮೆ; ಚಾಲಕ ಶಕ್ತಿ—ವಿದ್ಯುತ್, ಕಲ್ಲಿದ್ದಲಿ, ಕಲ್ಲೆಣ್ಣೆ ಮುಂತಾದ ಉತ್ಪಾದಿಸುವ ಉದ್ದಿಮೆಗಳು; ಯಂತ್ರ ಮತ್ತು ಯಾಂತ್ರಿಕ ಉಪಕರಣಗಳನ್ನು ಉತ್ಪಾದಿಸುವ ಉದ್ದಿಮೆಗಳು; ವಿಮಾನ, ಟ್ರ್ಯಾಕ್ಟರು, ಮೋಟರು, ವಿದ್ಯುತ್ ಉಪಕರಣಗಳು, ಘನರಸಾಯನ, ರಾಸಾಯನಿಕ ಗೊಬ್ಬರ; ಮದ್ದು-ಗುಂಡು-ಶಸ್ತ್ರಾಸ್ತ್ರ ಮುಂತಾದ ಉತ್ಪಾದನೆಯ ಉದ್ದಿಮೆಗಳಿಗೆ ಆ ಆ್ಯಕ್ಟು ಅನ್ವಯಿಸುವುದು. ಈ ಉದ್ದಿಮೆಗಳ ಅಭಿವೃದ್ಧಿ, ವಿಕಾಸ, ಕ್ರಮವಿನ್ಯಾಸಕ್ಕಾಗಿ ಸಲಹೆ ನೀಡಲು ಆ ಕಾನೂನು ಪ್ರಕಾರ ಒಂದು ಕೇಂದ್ರ ಸಲಹಾ ಸಮಿತಿಯ ಏರ್ಪಾಡು ಮಾಡಲಾಗಿದೆ. 'ಉದ್ದಿಮೆಗಳ ಒಡೆಯರು,

ಕಾರ್ಮಿಕರು, ಬಳಕೆಗಾರರು, ಕಚ್ಚಾಸರಕು ಉತ್ಪಾದಕರು ಇವರ ಪ್ರತಿನಿಧಿಗಳು ಈ ಸಮಿತಿಯಲ್ಲಿರುವರು. ಈ ಸಮಿತಿ ಖಾಸಗಿ ಮತ್ತು ಸರಕಾರೀ ಒಡೆತನದ ಉದ್ದಿಮೆಗಳ ನಡುವೆ ಸಹಕಾರ ಸಂಪರ್ಕವನ್ನು ಕಾಯ್ದುಕೊಳ್ಳುವುದು.

ವಿಕಾಸ ಯೋಜನೆಯಲ್ಲಿ ಪ್ರಾಥಮಿಕತೆಯ ವಿಚಾರವು ಸದ್ಯದ ಪರಿಸ್ಥಿತಿಯಲ್ಲಿ ಆವಶ್ಯಕವಾಗಿದೆ. ದೇಶದಲ್ಲಿ ಉಪಲಬ್ಧವಿದ್ದ ಕಚ್ಚಾ ಸರಕು, ದೇಶಕ್ಕೆ ಬಳಕೆಗೆ ಬೇಕಾಗಿರುವ ಆವಶ್ಯಕ ಸರಕು ಅಸ್ತಿತ್ವದಲ್ಲಿದ್ದ ಉದ್ದಿಮೆಗಳ ಸ್ಥಿತಿ, ಮುಂತಾದವುಗಳ ಮೇಲೆ ವಿಕಾಸದ ಮತ್ತು ಅಭಿವೃದ್ಧಿಯ ಪ್ರಾಥಮಿಕತೆ ಅವಲಂಬಿಸಿದೆ. ಈಗಾಗಲೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೈಕೊಂಡ ಔದ್ಯೋಗಿಕ ಯೋಜನೆಗಳನ್ನು ಪೂರ್ತಿಗೊಳಿಸುವುದು ಮೊದಲನೆಯ ಕೆಲಸವಾಗಿದೆ. ಅದಲ್ಲದೆ, ಈ ಕೆಳಗಿನವುಗಳಿಗೆ ಪ್ರಾಶಸ್ತ್ಯ ಕೊಡಲಾಗಿದೆ:

೧. ಸಣಬು, ಪ್ಲಾಯವುಡ್, ಅರಿವೆ, ಸಕ್ಕರೆ, ಸಾಬಾಣ, ವನಸ್ಪತಿ, ಬಣ್ಣ ಮತ್ತು ವಾರ್ನಿಸುಗಳ ಉದ್ದಿಮೆಗಳು.

೨. ಕಬ್ಬಿಣ, ಉಕ್ಕು, ಅಲ್ಯೂಮಿನಿಯಂ, ಸಿಮೆಂಟು, ರಾಸಾಯನಿಕ ಗೊಬ್ಬರಗಳು, ಘನರಸಾಯನಗಳು, ಯಂತ್ರೋಪಕರಣಗಳ ಉದ್ದಿಮೆಗಳು.

೩. ಇದ್ದವುಗಳನ್ನು ಭದ್ರಗೊಳಿಸುವುದು, ಮತ್ತು ಮೇಲ್ಕಾಣಿಸಿದ ಉದ್ಯಮಗಳ ಬೆಳೆಗೆಗೆ ಇದ್ದ ಕೊರತೆಗಳನ್ನು ತುಂಬುವುದು.

ಇದರಿಂದ ಇದ್ದ ಸಾಧನಸಾಮಗ್ರಿ ಸಂಪತ್ತಿಯ ಸಕಾಲದ ಸದುಪಯೋಗವಾಗುವುದು ಮತ್ತು ಸದ್ಯದ ಬೇಡಿಕೆಗಳು ಪೂರೈಸಲ್ಪಟ್ಟು ರಾಷ್ಟ್ರದ ಜೀವನಮಟ್ಟದಲ್ಲಿ ಪ್ರಗತಿಯಾಗುವುದು.

ಪಂಚವಾರ್ಷಿಕ ಯೋಜನೆಯ ಕಾರ್ಯದ ಪ್ರಾರಂಭದಲ್ಲಿ ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರದಲ್ಲಿ ಅನೇಕ ಔದ್ಯೋಗಿಕ ಘಟಕಗಳಲ್ಲಿ ವಿಶೇಷ ವೆಚ್ಚಮಾಡಲ್ಪಟ್ಟಿದ್ದಿತು. ಆದರೆ ಕಾರ್ಯಯೋಜನೆ ಪೂರ್ತಿಯಾಗಿರಲಿಲ್ಲ. ಅದರಲ್ಲಿ ತೊಡಗಿಸಿದ ಹಣದ ಪ್ರತಿಫಲ ಬರಬೇಕಾದರೆ ಅವು ಎಷ್ಟು ಬೇಗ ಪೂರ್ತಿಯಾದಷ್ಟು ಒಳಿತು. ಹೊಸದಾಗಿ ಯಾವುದಾದರೂ

ಉದ್ಯಮ ಪ್ರಾರಂಭವಾಗಬೇಕಿದ್ದರೆ ಅದು ಮೇಲೆ ವಿವರಿಸಿದ ಪ್ರಾಥಮಿಕತೆಯ ಪಟ್ಟಿಯಲ್ಲಿಯದು ಇರಬೇಕು. ಈ ಮಾತು ಈಗಾಗಲೇ ಪ್ರಾರಂಭಿಸಲ್ಪಟ್ಟ ಉದ್ಯಮಗಳಿಗಲ್ಲವೆಂದು ಬೇರೆ ಹೇಳಲಿಕ್ಕೆ ಕಾರಣವಿಲ್ಲ. ಇದ್ದ ಉದ್ಯಮ ಗಳನ್ನು ಅವುಗಳ ಪೂರ್ಣಶಕ್ತಿಯ ಉಪಯೋಗವಾಗುವಂತೆ ಮಾಡಿ ಬಳಕೆಯ ಸರಕುಗಳ ಹೆಚ್ಚಿನ ಉತ್ಪಾದನೆಯಾಗಬೇಕಾಗಿದೆ.

ಸಾರ್ವಜನಿಕ ಕ್ಷೇತ್ರದಲ್ಲಿಯ ಉದ್ಯಮಗಳ ವಿಕಾಸ ಯೋಜನೆಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ೯೪ ಕೋಟಿ ರೂಪಾಯಿ ವೆಚ್ಚ ಮಾಡ ಬೇಕೆಂದಿದೆ. ಇವರಲ್ಲಿಯ ಸುಮಾರು ೮೩ ಕೋಟಿ ರೂಪಾಯಿ ವೆಚ್ಚವು ಕೇಂದ್ರದ ಅಂಕಿತದಲ್ಲಿದ್ದ ಉದ್ಯಮಗಳಿಗಾಗಿ ತೆಗೆದಿಡಲಾಗಿದೆ. ಕಬ್ಬಿಣ ಉಕ್ಕಿನ ಉದ್ಯಮಕ್ಕೆ ೩೦ ಕೋಟಿ ರೂಪಾಯಿ; ಇದರಲ್ಲಿ ೧೫ ಕೋಟಿ ರೂಪಾಯಿ ಸುಮಾರು, ದೇಶೀಯ ಮತ್ತು ಪರದೇಶೀಯ ಬಂಡವಲಿನಿಂದ ಬರಬಹುದೆಂದು ಎಣಿಸಲಾಗಿದೆ. ವಿಶಾಖಾಪಟ್ಟಣದಲ್ಲಿ ಹಡಗು ಕಟ್ಟುವುದಕ್ಕೆ, ವಿದ್ಯುತ್ ಉಪಕರಣಗಳ ಉತ್ಪಾದನೆಗೆ, ಯಂತ್ರೋಪಕರಣಗಳ ಉತ್ಪಾದನೆಗೆ ಯೋಗ್ಯವಾದ ಉದ್ಯಮಗಳಲ್ಲಿ ಉಳಿದ ವೆಚ್ಚದ ಬಹುಭಾಗವು ಹೋಗುತ್ತದೆ. ರಾಜ್ಯಸರಕಾರಗಳ ಔದ್ಯಮಿಕ ಯೋಜನೆಗಳಲ್ಲಿ ಮಧ್ಯಪ್ರದೇಶದ ವೃತ್ತಪತ್ರ ಕಾಗದದ ಯೋಜನೆಯು, ಮೈಸೂರಿನ ಕಬ್ಬಿಣ ಉಕ್ಕು ಉದ್ಯಮವು ಇವು ಮುಖ್ಯವಾಗಿವೆ.

ಖಾಸಗೀ ಕ್ಷೇತ್ರದಲ್ಲಿಯೂ ಉದ್ಯಮಗಳ ವಿಕಾಸಕ್ಕೆ ೨೩೩ ಕೋಟಿ ರೂಪಾಯಿ ಬೇಕಾಗಬಹುದೆಂದು ಎಣಿಸಲಾಗಿದೆ. ಇದಲ್ಲದೆ ೧೫೦ ಕೋಟಿ ರೂಪಾಯಿ ಈಗಿದ್ದ ಯಂತ್ರಗಳನ್ನು ಬದಲಿಸಲು ಇಲ್ಲವೆ ಆಧುನಿಕೀಕರಣ ಮಾಡಲು ತೆಗೆದಿಡಲಾಗಿದೆ. ಕಬ್ಬಿಣ ಉಕ್ಕುಗಳ ಉದ್ಯಮಕ್ಕೆ ೪೩ ಕೋಟಿ ರೂಪಾಯಿ, ಪೆಟ್ರೋಲಿಯಂ ಶುದ್ಧೀಕರಣಕ್ಕೆ ೬೪ ಕೋಟಿ ರೂಪಾಯಿ, ಸಿಮೆಂಟಗಾಗಿ ೧೫·೪ ಕೋಟಿ ರೂಪಾಯಿ, ಅಲ್ಯೂಮಿನಿಯಂಗಾಗಿ ೯ ಕೋಟಿ ರೂಪಾಯಿ, ರಾಸಾಯನಿಕ ಗೊಬ್ಬರ, ಘನರಸಾಯನಗಳು, ಶಕ್ತಿಮದ್ಯಾರ್ಕ ಗಳಿಗಾಗಿ ೧೨ ಕೋಟಿ ರೂಪಾಯಿ. ಹೀಗೆ ಅದು ವಿತರಣವಾಗುವುದು. ಖಾಸಗಿ ಉದ್ಯಮಗಳಲ್ಲಿ ಹಣ ತೊಡಗಿಸುವ ಬಗ್ಗೆ ಸರಕಾರವು ನಿರ್ದೇಶನ ಪ್ರಭಾವ ಬೀರಬಹುದಾದರೂ ಪ್ರತ್ಯಕ್ಷ ಕ್ರಮವನ್ನು ಹೇಳಲಾರದು.

ಸಾರ್ವಜನಿಕ ಮತ್ತು ಖಾಸಗೀ ಉದ್ಯಮಗಳನ್ನು ಜತೆಗೂಡಿಸಿ ನೋಡಿದರೆ, ಸುಮಾರು ೨೬ ಶತಾಂಶ ಕಬ್ಬಿಣ, ಉಕ್ಕು ಆಲ್ಯೂಮಿನಿಯಂಕ್ಕೆ, ೨೦ ಶತಾಂಶ ಪೆಟ್ರೋಲಿಯಂ ಶುದ್ಧೀಕರಣಕ್ಕೆ, ೧೬ ಶತಾಂಶ ಇಂಜನಿಯರಿಂಗ ಉದ್ಯಮಗಳಿಗೆ, ೮ ಶತಾಂಶ ಘನರಸಾಯನ, ರಾಸಾಯನಿಕ ಗೊಬ್ಬರ ಮತ್ತು ಔಷಧಿಗಳಿಗೆ ವೆಚ್ಚವಾಗುವುದು. ಉಳಿದವುಗಳಲ್ಲಿ ಕಡಿಮೆ ಶತಾಂಶಗಳು ಇವೆ: ಟೆಕ್ಸ್ಟಾಯಿಲ್ ೬ ಶತಾಂಶ, ಸಿಮೆಂಟು ೫ ಶತಾಂಶ, ಕಾಗದ ವೃತ್ತಪತ್ರಕಾಗದ ಮುಂತಾದ್ದು ೪ ಶತಾಂಶ.

ಬಳಕೆಯ ಸರಕುಗಳ ಉದ್ಯಮಗಳ ವಿಕಾಸದಿಂದ ಹೆಚ್ಚು ಉತ್ಪಾದನವಾಗುವುವು. ಈ ಕೆಳಗಿನ ಸರಕುಗಳು ಇಷ್ಟು ಹೆಚ್ಚು ಉತ್ಪಾದನವಾಗುವುವು.

ಅರಿವೆ ೧೮,೭೨೦ ಲಕ್ಷ ಯಾರ್ಡು, ಸಕ್ಕರೆ ೩,೮೪,೦೦೦ ಟನ್ನು, ಉಪ್ಪು ೪,೨೯,೦೦೦ ಟನ್ನು, ಕಾಗದ ಮತ್ತು ರಟ್ಟು ೮೬,೦೦೦ ಟನ್ನು, ಕಾಜು (ಹಾಳೆಗಳಾಗಿ) ೨೦,೧೫೦ ಟನ್ನು, ಶಾಕತೈಲಗಳು ೧,೮೨,೧೦೦ ಟನ್ನುಗಳು. ಇವಲ್ಲದೆ ಸಾಯಕಲ್ಲು, ಹೊಲಿಗೆ ಯಂತ್ರ. ಡಿ. ಡಿ. ಟಿ., ಪೆನಿಸಿಲಿನ್, ಆರೊಮಾಯಸೀನ್ ಮುಂತಾದವುಗಳ ಉತ್ಪಾದನೆಯೂ ಹೆಚ್ಚುವುದು.

ಖಾಸಗೀ ಮತ್ತು ಸಾರ್ವಜನಿಕ ಉದ್ಯಮಗಳ ವಿಕಾಸಾಭಿವೃದ್ಧಿಗೆ ಒಟ್ಟು ೭೦೭ ಕೋಟಿ ಬಂಡವಲು ಅಗತ್ಯವೆಂದು ಅಂದಾಜು ಮಾಡಲಾಗಿದೆ. ಇದನ್ನು ದೇಶದಲ್ಲಿಯ ಮತ್ತು ಪರದೇಶಿ ಬಂಡವಲಿನಿಂದ ಕೂಡಿಸಲಾಗುವುದು. ಪರದೇಶದ ಬಂಡವಲಿಗೆ ಸ್ವಾಗತವಿದೆ. ಅದು ಹೆಚ್ಚು ಹೆಚ್ಚಾಗಿ ಬಂದಂತೆಲ್ಲ ಬಂಡವಲು ಸರಕುಗಳು, ತಾಂತ್ರಿಕ ಪರಿಣತರೂ ದೊರೆಯುವುವು. ಪರದೇಶದ ಬಂಡವಲು ಆಕರ್ಷಿಸಬೇಕಾದರೆ, ತಕ್ಕ ಲಾಭಾಂಶದ ಆಶ್ವಾಸನವೂ ಸಮಾನ ಆದರವೂ ಕೊಡಲ್ಪಡುವುದು ಅವಶ್ಯವಿದೆ; ಸರಕಾರದ ಧೋರಣೆಯ ಮೂಲಕ ಈ ಬಗೆಯ ಆಶ್ವಾಸನ ಕೊಡಲಾಗಿದೆ. ಪರದೇಶದ ಬಂಡವಲನ್ನು ಹೆಚ್ಚಿನ ಪ್ರಾಥಮಿಕತೆಯುಳ್ಳ ಉದ್ಯಮಗಳಿಗೆ ಹೊರಳಿಸುವುದು ಅಗತ್ಯ. ಅಂತರರಾಷ್ಟ್ರೀಯ ಬ್ಯಾಂಕಿನಿಂದಲೂ ಸಾಲವಾಗಿ ಹಣವನ್ನು ಪಡೆಯಲೂ ಬೇಕಾಗಬಹುದು.

ಇದುವರೆಗೆ ಉದ್ಯಮಗಳು ಭಾರತದಲ್ಲಿ ಕೆಲವೊಂದು ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿವೆ. ಸಮತೂಕದ ಅಭಿವೃದ್ಧಿಯಾಗಬೇಕಾದರೆ ಔದ್ಯೋಗಿಕ ದೃಷ್ಟಿಯಿಂದ ಹಿಂದುಳಿದ ಪ್ರದೇಶಗಳಲ್ಲಿ ಉದ್ಯಮಗಳನ್ನು ಪ್ರಾರಂಭಿಸುವುದು ಅವಶ್ಯವೆನ್ನಿಸುವುದು. ೧೯೫೧ರ ಇಂಡಸ್ಟ್ರೀಜ ಆ್ಯಕ್ಟದ ಪ್ರಕಾರ ಉದ್ಯಮಗಳ ಸ್ಥಳಗಳನ್ನು ಕ್ರಮವಾಗಿಸಲು ಸರಕಾರಕ್ಕೆ ಅಧಿಕಾರ ದೊರೆತಿದೆ. ಆದರೆ ಇಂತಹ ವ್ಯಾಪಕ ಬದಲಾವಣೆಯು ಅಲ್ಪಾವಧಿಯಲ್ಲಿ ಆಗುವುದು ಸಾಧ್ಯವಿಲ್ಲ. ಬ್ಯಾಂಕಿಂಗ ಮತ್ತು ಸಂಪರ್ಕ ಸಾರಿಗೆ ಮುಂತಾದ ಸೌಕರ್ಯಗಳಿದ್ದ ಈಗಿನ ಔದ್ಯಮಿಕ ಕ್ಷೇತ್ರಗಳನ್ನು ಬಿಟ್ಟು ಬೇರೆಡೆಯಲ್ಲಿ ಉದ್ಯಮಗಳನ್ನು ಪ್ರಾರಂಭಿಸಲು ಖಾಸಗಿ ಉದ್ದಿಮೆದಾರರು ಒಪ್ಪುವುದಿಲ್ಲ. ಅಲ್ಲದೆ ಈ ಪಂಚವಾರ್ಷಿಕ ಯೋಜನೆಯ ಕಾಲಾವಧಿಯಲ್ಲಿ ಇದ್ದ ಉದ್ಯಮಗಳನ್ನು ಅಭಿವೃದ್ಧಿಗೊಳಿಸುವುದೇ ಕಾರ್ಯವಾಗಿದೆ. ಆದರೆ ವಿವಿಧೋದ್ದೇಶ ಯೋಜನೆಗಳು ಪೂರ್ತಿಯಾಗಿ ವಿದ್ಯುಚ್ಛಕ್ತಿಯು ಹೆಚ್ಚಾಗಿ ದೊರೆಯತೊಡಗಿದ ಹಾಗೆ ಪಂಜಾಬ, ಓರಿಸಾ, ಬಿಹಾರ ಮುಂತಾದ ಕಡೆಗಳಲ್ಲಿ ಹೆಚ್ಚು ಹೆಚ್ಚಾಗಿ ಉದ್ಯಮಗಳು ಪ್ರಾರಂಭವಾಗುವ ಯೋಗವಿದೆ.

## ಪರದೇಶ ವ್ಯಾಪಾರ ಮತ್ತು ವಾಣಿಜ್ಯ ಧೋರಣೆ

ದೇಶದಲ್ಲಿ ಔದ್ಯೋಗಿಕ ಅಭಿವೃದ್ಧಿ ವಿಕಾಸವಾದ ಹಾಗೆಲ್ಲ ಪರದೇಶ ವ್ಯಾಪಾರ ಮತ್ತು ವಾಣಿಜ್ಯ ಧೋರಣೆಯಲ್ಲಿ ಪ್ರಭಾವಿಯಾದ ಬದಲಾವಣೆಗಳು ಉಂಟಾಗುವವು. ಯುದ್ಧದಕಿಂತ ಮೊದಲು ಭಾರತವು ಸಾಲಗಾರ ರಾಷ್ಟ್ರವಾಗಿತ್ತು. ಆದರೆ ಯುದ್ಧ ಮುಗಿಯುವ ಹೊತ್ತಿಗೆ ಭಾರತವು ಹಿಂದಿನ ಸಾಲಮೂಲವನ್ನೆಲ್ಲ ತೀರಿಸಿತಲ್ಲದೆ, ೧೬೦೦ ಕೋಟಿ ರೂಪಾಯಿಗಳಷ್ಟು ಸ್ಟರ್ಲಿಂಗದಲ್ಲಿ ಉಳಿತಾಯವಾಯಿತು. ಆದರೆ ಯುದ್ಧೋತ್ತರ ಕಾಲದಲ್ಲಿ ಯುನಾಯಿಟೆಡ ಕಿಂಗಡಮ್‌ದ ತೊಡಕುಗಳು ನಮ್ಮ ಸ್ಟರ್ಲಿಂಗ ಉಳಿತಾಯವನ್ನು ಪಡೆಯಲು ಅಡ್ಡಿಯಾದುವು. ಯುದ್ಧಕಾಲವಲ್ಲಿಯ ಕೊರತೆಗಳ ಮೂಲಕ ಯುದ್ಧೋತ್ತರ ಕಾಲದ ಭಾರತದಲ್ಲಿ ಬೇಡಿಕೆ ಹೆಚ್ಚು ಹೆಚ್ಚಾಗ ತೊಡಗಿತು. ಆಯಾತದ ಬೇಡಿಕೆಗಳು ಹೆಚ್ಚಾಗಿದ್ದು ನಿರ್ಯಾತದ ಸರಕುಗಳು ತೀರ ಕಡಿಮೆಯಾಗಿದ್ದುವು. ಬೆಳೆವ ಜನಸಂಖ್ಯೆಯೂ ದೇಶದ ವಿಭಜನೆಯೂ

ಈ ಅವಸ್ಥೆಗೆ ಕಾರಣಗಳೆಂದು ಹೇಳಬಹುದು. ಭಾರತದಲ್ಲಿ ಆಹಾರ ಮತ್ತು ಕಚ್ಚಾ ಸರಕುಗಳ ಕೊರತೆ ವಿಶೇಷವಾಯಿತು; ಸಣಬು, ಹತ್ತಿ ಮತ್ತು ತೊಗಲುಗಳಲ್ಲಿ ಇದರ ಪರಿಣಾಮ ಎದ್ದು ಕಾಣುವಂತಿತ್ತು. ಈ ಸರಕುಗಳ ನಿರ್ಯಾತದ ಮಾತು ಹಾಗಿರಲಿ, ಆಯಾತ ಮಾಡಿಕೊಳ್ಳುವ ಪ್ರಸಂಗ ಬಂದಿತು. ಆದರೆ ಅದಕ್ಕೆ ಸಮತೂಕ ತರುವ ಹಾಗೆ ನಿರ್ಯಾತ ಮಾಡುವ ಸರಕುಗಳು ಇರಲಿಲ್ಲ ನಮ್ಮ ದೇಶದಲ್ಲಿ. ದೇಶದ ಆಯಾತ ನಿರ್ಯಾತದ ಆಗಿನ ಪರಿಸ್ಥಿತಿಯನ್ನು ಈ ಕೋಷ್ಟಕದಿಂದ ಕಾಣಬಹುದು:

| | ನಿರ್ಯಾತ | | | ಆಯಾತ | | |
|---|---|---|---|---|---|---|
| | ಆಹಾರ, ಕುಡಿತ, ತಂಬಾಕು | ಕಚ್ಚಾ ಸರಕು | ಸಿದ್ಧ ಸರಕು | ಆಹಾರ ತಂಬಾಕು | ಕಚ್ಚಾ ಸರಕು | ಸಿದ್ಧ ಸರಕು |
| ಯುದ್ಧಪೂರ್ವ (೧೯೩೮–೩೯) | ೧೦೦·೦ | ೧೦೦·೦ | ೧೦೦·೦ | ೧೦೦·೦ | ೧೦೦·೦ | ೧೦೦·೦ |
| ಯುದ್ಧೋತ್ತರ (೧೯೪೭–೪೮) | ೮೩·೭ | ೪೧·೭ | ೯೨·೫ | ೧೩೮·೬ | ೧೧೬·೯ | ೭೨·೦ |
| ವಿಭಜನಾನಂತರ | ೯೫·೭ | ೩೦·೭ | ೧೦೬·೪ | ೧೪೫·೯ | ೧೪೬·೯ | ೧೮೫·೦ |

ವ್ಯಾಪಾರದ ದಿಕ್ಕು ಕೂಡ ಬದಲಾಗಿದೆ. ಯುದ್ಧಪೂರ್ವದಲ್ಲಿ ಭಾರತದ ಪರದೇಶ ವ್ಯಾಪಾರವು ಡಾಲರ ಪ್ರದೇಶದೊಡನೆ ಇತ್ತು ಮತ್ತು ಅನುಕೂಲ ಪ್ರಮಾಣದಲ್ಲಿತ್ತು. ಆದರೆ ಯುದ್ಧಾನಂತರ ಜರ್ಮನಿ ಮತ್ತು ಜಪಾನಗಳ ವ್ಯಾಪಾರದಲ್ಲಿ ಇಳಿಕೆಯಾದ್ದರಿಂದ ಡಾಲರ ಪ್ರದೇಶದ ವ್ಯಾಪಾರವು ನೂರಕ್ಕೆ ಎರಷ್ಟು ಹೆಚ್ಚಾಯಿತು; ಮತ್ತು ನಮ್ಮ ದೇಶದ ಕಚ್ಚಾ ಸರಕುಗಳು ನಿರ್ಯಾತಕ್ಕೆ ಹೆಚ್ಚಾಗಿ ಉಪಲಬ್ಧವಿಲ್ಲದ್ದೂ ಮತ್ತು ಹೆಚ್ಚಾಗಿ ಆಹಾರ ಮತ್ತು ಯಂತ್ರಸಾಮಗ್ರಿ ಆಯಾತ ಮಾಡಬೇಕಾಗಿ ಬಂದುದೂ ಪರದೇಶದ ವ್ಯಾಪಾರ ಪ್ರತಿಕೂಲ ಪ್ರಮಾಣದಲ್ಲಿ ನಡೆಯಲು ಕಾರಣವಾದುವು. ಯೋಜನೆಯಿಂದ ಈ ಪರಿಸ್ಥಿತಿಯ ಮೇಲೆ ಪ್ರಭಾವ ಬೀರುವ ಹಾಗಿದೆ. ಒಕ್ಕಲುತನ ಉತ್ಪಾದನೆಯನ್ನು ಹೆಚ್ಚಿಸಬೇಕೆಂದು ಮಾಡಿದುದರಿಂದ ಅದು ಸಾಧ್ಯವಾದ ಹಾಗೆಲ್ಲ ಆಹಾರ, ಹತ್ತಿ ಮತ್ತು ಸಣಬು ಇವುಗಳ ಆಯಾತವು ಪ್ರಾಗತಿಕವಾಗಿ ಕಡಿಮೆ

ಯಾಗುವುದು. ಇದರಿಂದ ಹತ್ತಿ ಮತ್ತು ಸಣಬಿನ ಸಿದ್ಧ ಸರಕುಗಳ ನಿರ್ಯಾತವು ಹೆಚ್ಚಾಗತೊಡಗುವುದು. ಯೋಜನೆಯ ಕಾಲಾವಧಿಯಿಂದ್ಲ ಹೊಲಿಗೆಯಂತ್ರ, ಬ್ಯಾಟರಿ, ಬಾಯಿಸಿಕಲ್ಲು, ಔಷಧಗಳು ನಿರ್ಯಾತಕ್ಕೂ ಅನುಕೂಲವುಳ್ಳ ಸರಕುಗಳಾಗುವುವು. ಈ ಸರಕುಗಳು ಈಗಾಗಲೆ ಅಲ್ಪ ಪ್ರಮಾಣದಲ್ಲಿ ಆಗ್ನೇಯೇಶಿಯಾ ದೇಶಗಳಿಗೆ ನಿರ್ಯಾತವಾಗುತ್ತಲಿವೆ. ಈ ಉದ್ಯಮಗಳು ವಿಕಾಸವಾದಂತೆಲ್ಲ ಈ ಸರಕುಗಳ ನಿರ್ಯಾತವು ಹೆಚ್ಚುತ್ತ ಹೋಗುವುದು. ಜಪಾನ ಮತ್ತು ಜರ್ಮನಿಗಳ ಪುನರುತ್ಥಾನವು ಮತ್ತು ಛೆಕೊಸ್ಲೊವೆಕಿಯ, ಸ್ವೀಡನಗಳೊಡನೆ ಬೆಳೆಸಲಾದ ವ್ಯಾಪಾರೀ ಸಂಬಂಧವು ಬಂಡವಲು-ಸರಕನ್ನು ಪಡೆಯಲು ಅನುವುಮಾಡಿಕೊಟ್ಟು ಸದ್ಯದ ವಿಷಮತೂಕದ ಪರದೇಶದ ವ್ಯಾಪಾರವನ್ನು ಸಮತೂಕ ಉಳ್ಳದ್ದಾಗಿಸುವುದು.

ಯೋಜನೆಯ ಕಾಲಾವಧಿಯಲ್ಲಿ ಆಯಾತ ನಿರ್ಯಾತಗಳು ನಿಯಂತ್ರಿಸಲ್ಪಡಲೇಬೇಕಾಗುವುದು. ನಿಯಂತ್ರಣಗಳಿಲ್ಲದಿದ್ದರೆ ದೇಶವು ತನ್ನಲ್ಲಿಯ ಕಚ್ಚಾ ಸರಕುಗಳ ಸದುಪಯೋಗವನ್ನು ಸರಿಯಾಗಿ ಮಾಡಿಕೊಳ್ಳುವ ಹವ್ಯಾಸ ತೋರಿಸುವುದಿಲ್ಲ. ಒಟ್ಟಿನಲ್ಲಿ ನಿರ್ಯಾತ ವ್ಯಾಪಾರ ಹೆಚ್ಚಿಸುವುದರ ಕಡೆಗೆ ಒಲವು ಇರಬೇಕೆಂಬುದು ಧ್ವನಿತವಾಗುತ್ತದೆ. ಕೇವಲ ಡಾಲರ ಪ್ರದೇಶಗಳಿಗಲ್ಲ; ಎಲ್ಲ ದೇಶಗಳಿಗೂ ನಿರ್ಯಾತ ಹೆಚ್ಚಬೇಕು. ಸಾಧ್ಯವಾದಷ್ಟು ಮಟ್ಟಿಗೆ ಕೈಕೊಂಡ ಉಪಾಯಗಳು ನಿರಂತರವಾಗುವಂತಾದರೆ ಆಯಾತ ನಿರ್ಯಾತಗಳಲ್ಲಿ ದೇಶಕ್ಕೆ ಅನುಕೂಲವಾದ ಸಮತೂಕ ಉಂಟಾಗುವುದು.

## ಸಾರಿಗೆ ಸಂಪರ್ಕ

ಔದ್ಯೋಗಿಕ ಅಭಿವೃದ್ಧಿ ವಿಕಾಸಗಳಿಗೆ ಸಾರಿಗೆಸಂಪರ್ಕದ ಬೆಳೆಗೆಯು ಆವಶ್ಯಕವಾದುದು. ಭಾರತದಂತಹ ವಿಶಾಲದೇಶದಲ್ಲಿ ಸಾರಿಗೆ ಸಂಪರ್ಕವು ವಿಕಾಸವಾದಷ್ಟು, ಕಚ್ಚಾ ಸರಕು ಕಾರಖಾನೆಗೂ ಸಿದ್ಧ ಸರಕು ಸಾರ್ವಜನಿಕರಿಗೂ ಸಕಾಲದಲ್ಲಿ ಮುಟ್ಟುವಂತಾಗುವುದು. ಸಾರಿಗೆಯ ಸೌಕರ್ಯವು ಔದ್ಯೋಗೀಕರಣದಲ್ಲಿ ಮಹತ್ವದ ಪಾತ್ರ ವಹಿಸುವುದು.

**ರೈಲ್ವೆ:**

ಕಳೆದ ಇಪ್ಪತ್ತು ವರ್ಷಗಳಲ್ಲಿ ನಮ್ಮ ದೇಶದ ರೈಲ್ವೆಗಳ ಮೇಲೆ ಬಿದ್ದ ಭಾರವು ಅತಿಯಾಗಿದೆ. ಭಾರ ತಡೆದುಕೊಳ್ಳದೆ ಮುಗ್ಗರಿಸುವ ಸ್ಥಿತಿಯೂ ಬಂದಿತ್ತು. ಸವೆದುಹೋದ ಇಂಜಿನು, ವಾಗೀನು, ಪ್ರವಾಸಿಕರ ಡಬ್ಬಿಗಳನ್ನು ಸಕಾಲದಲ್ಲಿ ದುರಸ್ತಿಯನ್ನೂ ಮಾಡುವುದಾಗಲಿಲ್ಲ; ಬದಲು ಮಾಡಲೂ ಆಗಿದ್ದಿಲ್ಲ. ಈ ಶತಕದ ನಾಲ್ಕನೆಯ ದಶಕದಲ್ಲಿ ಆರ್ಥಿಕ ಮುಗ್ಗಟ್ಟು ಈ ಸ್ಥಿತಿಯನ್ನುಂಟುಮಾಡಿತು. ಆದಾಯವು ಸೊರಗಿತು. ಸವಕಳಿ ತಡೆಯು ಲಿಲ್ಲ. ಆರ್ಥಿಕಪರಿಸ್ಥಿತಿಯು ಚೇತರಿಸಿಕೊಳ್ಳಬೇಕೆಂದು ಮೊಗವೆತ್ತಲಿಕ್ಕಿತ್ತು ವಾಗಲೇ ಮಹಾಯುದ್ಧ ಬಂದಿತು. ಹೊತ್ತ ನೊಗ ಇಳಿಸದೆ ಎಳೆಯ ಬೇಕಾಗಿಬಂತು. ಯುದ್ಧ ಮುಗಿಯಿತು, ಇನ್ನೇನು ಎಂದು ಉಸ್ಸೆಂದು ವಿಶ್ರಾಂತಿಪಡೆಯಬೇಕೆಂದು ಹಂಚಿಕೆಹಾಕಿರುವ ಸಮಯದಲ್ಲಿ ದೇಶದ ವಿಭಜನೆಯಾಯಿತು. ಹಳೆಯವಾಗಿದ್ದ ಇಂಜಿನುಗಳು ೧೦೫೦, ಮುರಿದುಹೋಗಿದ್ದ ಡಬ್ಬಿ ೫೫೭೪, ಕೆಲಸಕ್ಕೆ ಬಾರದ ಹಾಗಿದ್ದ ೨೧೪೮೯ ವಾಗೀನುಗಳು- ೧೯೫೫ರ ಮಾರ್ಚ ಕೊನೆಗೆ ಇದ್ದುವೆಂಬುದು ಅವುಗಳ ಸ್ಥಿತಿಯನ್ನು ಸೂಚಿಸುತ್ತದೆ. ಆದರೆ ವರುಷಕ್ಕೆ ೧೯೦ ಇಂಜಿನು, ೬೫೦ ಡಬ್ಬಿ, ೫೦೭೦ ವಾಗೀನುಗಳನ್ನು ಮಾತ್ರ ಹೊಸದಾಗಿಸಲು ಸಾಧ್ಯವಿತ್ತೆಂಬ ಸಂಗತಿಯಿಂದ ಒಟ್ಟಿನಲ್ಲಿ ರೈಲ್ವೆಯ ಹದಗೆಟ್ಟ ಸ್ಥಿತಿಯ ಕಲ್ಪನೆ ಬರುವುದು. ೧೯೫೬ರಷ್ಟರಲ್ಲಿ ೨೧೯೨ ಇಂಜಿನು ಗಳನ್ನು, ೮೩೩೫ ಡಬ್ಬಿಗಳನ್ನು, ೪೭೫೩೩ ವಾಗೀನುಗಳನ್ನು ಬದಲುಮಾಡ ಬೇಕಾಗಿ ಬರುವುದೆಂಬುದನ್ನು ನೆನೆದರೆ ಈ ಯೋಜನೆಯ ಕಾಲಾವಧಿಯಲ್ಲಿ ಏನು ಕಾರ್ಯ ಮಾಡಬೇಕಾಗುವುದೆಂಬುದರ ಎಣಿಕೆಯು ಆದೀತು. ರೈಲ್ವೆ ಮಾರ್ಗದ ದುರಸ್ತಿಯೂ ಆಗಬೇಕೆಂಬುದನ್ನು ಮರೆಯಲಾಗದು. ಸದ್ಯಕ್ಕೆ ಸುಮಾರು ೩೦೦೦ ಮೈಲುದ್ದ ಮಾರ್ಗಗಳ ಮೇಲೆ ರೈಲುಗಳ ವೇಗ ವನ್ನು ಕಡಿಮೆಮಾಡಬೇಕಾಗಿ ಬಂದಿದೆ— ಈ ಕಾರಣಕ್ಕಾಗಿ. ಪ್ರವಾಸಿಕರ ಸಂಖ್ಯೆಯೂ ಸರಕುಗಳ ಸಾಗಾಟವೂ ಹೆಚ್ಚುವುದರಲ್ಲಿದೆಯೆಂಬ ಸಂಗತಿಯು ಸಮಸ್ಯೆಯ ಬೃಹದಾಕಾರವನ್ನು ಸ್ಪಷ್ಟವಾಗಿ ಚಿತ್ರಿಸುವುದು. ಪ್ರವಾಸಿಕರ ಅದರಲ್ಲಿಯೂ ಮೂರನೆಯ ವರ್ಗದ ಪ್ರವಾಸಿಕರ ಪ್ರವಾಸಸೌಕರ್ಯ ಹೆಚ್ಚಿಸಬೇಕೆಂಬ ಕೂಗು ಸಮಸ್ಯೆಯನ್ನು ಇನ್ನೂ ಜಟಿಲಮಾಡಿದೆ.

ಕಳೆದ ನಾಲ್ಕು ವರುಷಗಳಲ್ಲಿ ರೈಲ್ವೆ ಸೌಕರ್ಯದ ಬೇಡಿಕೆಯು ಹೆಚ್ಚಾಗಿದೆ. ಪೂರೈಕೆ ಮಿತವಾಗಿದೆ. ದೇಶದಲ್ಲಿಯ ತಯಾರಿಕೆಯೂ ಪರಿಮಿತವಾಗಿದ್ದು ಪರದೇಶದ ಪೂರೈಕೆಯೂ ಸಾಕಷ್ಟು ಆಗಿಲ್ಲ. ದೇಶದಲ್ಲಿಯ ಉತ್ಪಾದನೆಯು ವಿಸ್ತರಣವು ಆಗಬೇಕೆಂಬುದು ಸ್ಪಷ್ಟವಿದೆ. ಯೋಜನೆಯು ಕಾಲಾವಧಿಯಲ್ಲಿ ಚಿತ್ತರಂಜನ ಇಂಜಿನು ಕಾರಖಾನೆಯಿಂದ ೨೬೮ ಇಂಜಿನುಗಳು, ಟಾಟಾ ಕಂಪನಿಯಿಂದ ೧೭೦ ಇಂಜಿನುಗಳು ತಯಾರಾಗುವುವು. ಡಬ್ಬಿಗಳು, ವಾಗೀನುಗಳು ತಯಾರಿಸಲ್ಪಡಲು ಸಿದ್ಧತೆಯನ್ನು ದೇಶದಲ್ಲಿ ಮಾಡಲಾಗಿದ್ದರೂ ಯೋಜನೆಯ ಕಾಲಾವಧಿಯಲ್ಲಿ ಒಟ್ಟು ೬೪೧ ಇಂಜಿನುಗಳು, ೧೨೪೫ ಡಬ್ಬಿಗಳು, ೧೯೧೪೩ ವಾಗೀನುಗಳನ್ನು ಆಯಾತ ಮಾಡಲಿಕ್ಕೆ ಬೇಕಾಗುವುದು. ಯೋಜನೆಗೆ ಅನುಸರಿಸಿ ಕಾರ್ಯ ಮಾಡಬೇಕೆಂದಾಗ ರೈಲ್ವೆಗಳಿಗೆ ವರುಷಕ್ಕೆ ೮೦ ಕೋಟಿ ರೂಪಾಯಿಯಂತೆ ೪೦೦ ಕೋಟಿ ರೂಪಾಯಿಗಳು ಬೇಕಾಗುವುವು. ಇದರಲ್ಲಿ ೨೦ ಕೋಟಿ ರೂಪಾಯಿಗಳನ್ನು ಹೊಸ ಮಾರ್ಗರಚನೆಗೆ ತೆಗೆದಿಟ್ಟುದನ್ನು ಬಿಟ್ಟರೆ ಉಳಿದೆಲ್ಲವೂ ಹಳೆಯದನ್ನು ಹೊಸದಾಗಿಸಲು ಬೇಕಾಗುವುದು. ಈ ೪೦೦ ಕೋಟಿಗಳಲ್ಲಿ ಕೇಂದ್ರವು ೮೦ ಕೋಟಿ ಕೊಡುವುದು. ಉಳಿದುದು ರೈಲ್ವೆಯ ಸಂಪತ್ತಿನಿಂದಲೇ ಒದಗಿ ಬರಬೇಕಾಗುವುದು. ಮೂಲ ಉದ್ದಿಮೆಗಳಿಗೆ, ಅನುಷಂಗಿಕ ಸಾಗಣೆಗೆ, ಪ್ರತ್ಯೇಕ ೫೦ ಕೋಟಿ ರೂಪಾಯಿಗಳ ವ್ಯವಸ್ಥೆಯು ಯೋಜನೆಯಲ್ಲಿ ಮಾಡಲಾಗಿದ್ದರಲ್ಲಿಂದ ರೈಲ್ವೆಗಳಿಗೆ ಸ್ವಲ್ಪ ಭಾಗ ದೊರೆವುದು.

## ಹಡಗುಗಳು

ಯುದ್ಧದ ಕಾಲದಕಿಂತ ಮೊದಲು ಭಾರತೀಯ ಒಡೆತನದಲ್ಲಿದ್ದ ಹಡಗುಗಳ ಒಟ್ಟು ಭಾರವು ೧೨೫೦೦೦ ಟನ್ನುಗಳಷ್ಟಿತ್ತು. ೧೯೪೬ರಲ್ಲಿ ನೊಂದಾಯಿಸಿದ ಭಾರವು ೧೦೮೦೦೦ ಟನ್ನುಗಳಷ್ಟು ಇತ್ತು. ೧೯೫೦ರಲ್ಲಿ ಒಟ್ಟು ನೊಂದಾಯಿಸಿದ ಭಾರವು ೩೬೨೧೫೦ ಟನ್ನುಗಳಿಗೆ ಏರಿತು. ೧೯೫೧ರಲ್ಲಿ ನೊಂದಾಯಿಸಿದ, ಒಟ್ಟು ೨೧೬,೨೦೨ ಟನ್ನುಗಳ ಭಾರವುಳ್ಳ ೬೩ ಹಡಗುಗಳು ಕರಾವಳಿ ಸಾಗಣೆಯಲ್ಲಿ ಇದ್ದುವು. ಮತ್ತು ೧೬೩೫೦೫ ಟನ್ನು ಭಾರವುಳ್ಳ ೨೪ ಭಾರತೀಯ ಒಡೆತನದ ಹಡಗುಗಳು ಸಾಗರೋತ್ತರ ಸಾಗಣೆಯಲ್ಲಿ

ಇದ್ದುವು. ಕರಾವಳಿಯ ವ್ಯಾಪಾರ ಸಾರಿಗೆಯನ್ನು ಭಾರತೀಯ ಹಡಗುಗಳಿಗೆ ಮೀಸಲಾಗಿಡಬೇಕೆಂದು ಕೇಂದ್ರ ಸರಕಾರವು ನಿರ್ಣಯಿಸಿದೆ. ಆದುದರಿಂದ ಹೆಚ್ಚು ಹಡಗುಗಳನ್ನು ಕಟ್ಟುವುದು ಅತ್ಯವಸರದ ಆವಶ್ಯಕತೆಯಾಗಿದೆ. ಅದನ್ನು ಮನದೆಂದು ಹಾಕಿದ ಕಾರ್ಯಕ್ರಮದ ಪ್ರಕಾರ ೧೯೫೫–೫೬ರಷ್ಟರಲ್ಲಿ ಒಟ್ಟು ಹಡಗುಗಳ ಭಾರ ೬೦೦,೦೦೦ ಟನ್ನುಗಳಿಗೆ ಏರುವುದು. ಇವುಗಳಲ್ಲಿ ೩೦೦,೦೦೦ ಟನ್ನುಗಳಷ್ಟು ಭಾರ ವ್ಯಾಪ್ತಿಯಾಗುವಷ್ಟು ಹಡಗುಗಳು ಕರಾವಳಿಯ ವ್ಯಾಪಾರಕ್ಕೆ ನೋಂದಾಯಿಸಲಾಗುವುದು. ಇದಕ್ಕಾಗಿ ಹಡಗುಗಳ ಕಂಪನಿಗೆ ೪ ಕೋಟಿ ರೂಪಾಯಿಗಳಷ್ಟು ಸಾಲ ಕೊಡುವ ಏರ್ಪಾಡು ಮಾಡಿದ್ದು, ಹಡಗುಗಳ ಕಂಪನಿಗಳು ೨ ಕೋಟಿ ರೂಪಾಯಿಗಳ ವರೆಗೆ ಸಾಲ ಎತ್ತಲು ಆವಕಾಶ ಕಲ್ಪಿಸಿಕೊಡಲಾಗಿದೆ. ಸಾಗರೋತ್ತರ ವ್ಯಾಪಾರಕ್ಕಾಗಿ ಕನಿಷ್ಠ ೧೦೦,೦೦೦ ಟನ್ನುಗಳಷ್ಟಾದರೂ ಹೆಚ್ಚಿಸಬೇಕೆಂದು ಮಾಡಲಾಗಿದೆ. ಇದಕ್ಕೆ ಕೇಂದ್ರದಿಂದ ೬-೫ ಕೋಟಿ ಸಾಲದ ವ್ಯವಸ್ಥೆಯೂ ೨-೨ ಕೋಟಿ ರೂಪಾಯಿ ಕಂಪನಿಗಳೇ ಸಾಲ ಎತ್ತುವ ಅವಕಾಶವೂ ಮಾಡಿಕೊಡಲಾಗಿದೆ. ಈಸ್ಟರ್ನ ಶಿಪಿಂಗ ಕಾರ್ಪೋರೇಶನ್‌ದವರಿಗೆ ೬೦.೦೦೦ ಟನ್ನುಗಳ ಹೆಚ್ಚಳವು ಬೇಕಾಗಿದೆಯಾದ್ದರಿಂದ ಅದಕ್ಕಾಗಿ ಕೇಂದ್ರ ಸರಕಾರವು ೪.೪ ಕೋಟಿ ರೂಪಾಯಿ ವಂತಿಗೆ ಕೊಡುವುದು. ಇವಲ್ಲದೆ, ಎಣ್ಣೆ ಸಂಚಯ ಮಾಡುವ ಹಡಗುಗಳನ್ನು ಕೂಡ ಪಡೆಯಲಾಗುವುದು. ಸಾಗರೀಯ ಇಂಜಿನಿಯರರು ಮುಂತಾದ ಕೆಲಸಗಾರರ ತರಬೇತಿಗಾಗಿ ೧.೧೦ ಲಕ್ಷ ರೂಪಾಯಿಯ ವ್ಯವಸ್ಥೆ ಮಾಡಲಾಗಿದೆ

## ಬಂದರಗಳು

ಕಲಕತ್ತಾ, ಮುಂಬಯಿ, ಮದ್ರಾಸ, ಕೋಚೀನ ಮತ್ತು ವಿಶಾಖಾಪಟ್ಟಣದಲ್ಲಿ ಬಂದರಗಳು ವರುಷಕ್ಕೆ ಸದ್ಯಕ್ಕೆ ೨೦೦ ಲಕ್ಷ ಟನ್ನುಗಳಷ್ಟು ಸರಕನ್ನು ಏರಿಸಿಳಿಸುವ ಸಾಮರ್ಥ್ಯವುಳ್ಳವಾಗಿವೆ. ದೇಶೀಯ ನೌಕೆಗಳಿಂದ ಬರುವ ಪೆಟ್ರೋಲಿಯಂ ಮತ್ತು ಬೇರೆ ಸರಕುಗಳು ಇದರಲ್ಲಿ ಸೇರಿಲ್ಲ. ಸಾಗಾಟವು ಹೆಚ್ಚುತ್ತಲಿದೆ. ವಿಭಜನೆಯಿಂದ ಆದ ಬಂದರದ ಕೊರತೆ ತುಂಬಿಕೊಳ್ಳುವುದು ಅತ್ಯಗತ್ಯವಾಗಿದೆ. ಈಗಿದ್ದ ಐದು ಹಿರಿ ಬಂದರಗಳಲ್ಲಿ ವಿಸ್ತರಣವೂ

ಆಧುನಿಕೀಕರಣವೂ ಮಾಡಲಿದ್ದು ಅದಕ್ಕಾಗಿ ೨೯·೨೭ ಕೋಟಿ ರೂಪಾಯಿ ವೆಚ್ಚವಾಗುವುದು. ಇದಲ್ಲದೆ ಹೊಸದಾಗಿ ರಚನೆಯಾಗುತ್ತಲಿರುವ ಕಾಂಡ್ಲಾಕ್ಕೆ ೧೨·೦೫ ಕೋಟಿ ರೂಪಾಯಿ ವೆಚ್ಚವಾಗುವುದು. ಎಣ್ಣೆಯ ಶುದ್ಧೀಕರಣ ಸೌಕರ್ಯ ಒದಗಿಸಿಕೊಡುವುದಕ್ಕಾಗಿ ೮ ಕೋಟಿ ರೂಪಾಯಿ ವೆಚ್ಚವಾಗುವುದು. ಈ ಎಲ್ಲ ಯೋಜನೆಗಳು ಪೂರ್ತಿಯಾಗುವಷ್ಟರಲ್ಲಿ ಒಟ್ಟು ೫೪·೨೨ ಕೋಟಿ ರೂಪಾಯಿಗಳ ವೆಚ್ಚವಾಗುವುದು. ೧೯೫೧–೫೨ರಲ್ಲಿ ಬಂದರದ ಅಧಿಕಾರಿಗಳು ವೆಚ್ಚ ಮಾಡಿದ ೪·೯೦ ಕೋಟಿ ರೂಪಾಯಿಗಳು ಇದರಲ್ಲಿ ಸೇರಿವೆ. ೧೯೫–ರಲ್ಲಿ ಕಾಂಡ್ಲಾದಲ್ಲಿ ೧೨೨,೦೦೦ ಟನ್ನು ಸರಕು ಏರಿಳಿಸಲ್ಪಟ್ಟರೆ ೧೯೫೬ರ ಮುಂದೆ ವಾರ್ಷಿಕವಾಗಿ ೮೫೦,೦೦೦ ಟನ್ನು ಸರಕುಗಳ ವ್ಯವಸ್ಥೆ ಮಾಡುವುದು.

## ನಾಗರಿಕ ವಿಮಾನ ಸಾರಿಗೆ

೧೯೫೦–೫೧ರ ವರೆಗೆ ನಾಗರಿಕ ವಿಮಾನ ಸಾರಿಗೆಯ ಮೇಲೆ ಬಂಡವಲು ವೆಚ್ಚವು ಸುಮಾರು ೧೦ ಕೋಟಿ ರೂಪಾಯಿಗಳಷ್ಟಿತ್ತು. ವಿಮಾನ ಕಂಪನಿಗಳು ಅನೇಕವಿದ್ದು ಅವುಗಳಲ್ಲಿ ಕೆಲವು ಆರ್ಥಿಕ ದೃಷ್ಟಿಯಿಂದ ಭದ್ರವಾಗಿರುವುವೆಂದು ಕಂಡುಬಂದಿದೆ. ವಿಮಾನ ಸಾರಿಗೆ ವಿಚಾರಣಾ ಸಮಿತಿಯು ಈ ಎಲ್ಲ ಕಂಪನಿಗಳು ಒಂದುಗೂಡಿಸಲ್ಪಡಬೇಕೆಂದು ಸೂಚನೆ ಮಾಡಿತು. ಆ ಒಂದುಗೂಡಿಸಲ್ಪಟ್ಟ ಘಟಕದಲ್ಲಿ ಸರಕಾರಕ್ಕೆ ನಿಯಂತ್ರಣಾಧಿಕಾರವುಳ್ಳ ಹಿತಸಂಬಂಧ ಉಂಟಾಗುವಂತಿರಬೇಕೆಂದೂ ಸೂಚನೆ ಮಾಡಿತು. ಈ ಸೂಚನೆಗಳನ್ನು ಕಾರ್ಯಕಾರಿ ಮಾಡಲು ಎಲ್ಲ ವ್ಯವಸ್ಥೆ ಮಾಡಲಾಗಿದೆ. ನಾಗರಿಕ ವಿಮಾನ ಸಾರಿಗೆಯು ರಾಷ್ಟ್ರೀಕರಿಸಲ್ಪಟ್ಟಿತೆಂಬ ಸುದ್ದಿಯು ಮೊನ್ನೆ ಮೊನ್ನೆ ಪ್ರಕಟವಾಗಿದೆ.

## ರಾಜಮಾರ್ಗಗಳು

ಸದ್ಯಕ್ಕೆ ಇರುವ ರಾಜಮಾರ್ಗಗಳ ವ್ಯವಸ್ಥೆಯು ಆವಶ್ಯಕತೆಗಿಂತ ತೀರ ಕಡಿಮೆಯಿದೆ. ೧೯೪೩ರಲ್ಲಿ ವರದಿ ಮಾಡಲ್ಪಟ್ಟ –ನಾಗಪುರ ವರದಿಯೊಂದು

ಕರೆಯಲಾಗುವ– ವರದಿಯಲ್ಲಿ ಈಗಿರುವ ೬೭೪೦೦ ಮೈಲುಗಳ ಪಕ್ಕಾ ಮಾರ್ಗ ೧೨,೨೦೦೦ ಮೈಲುಗಳಷ್ಟು ಆಗುವಂತೆ ಮಾಡಬೇಕೆಂದು ಹೇಳಲಾಗಿದ್ದಿತು. ೧೨೨೦೦೦ ಮೈಲುಗಳಷ್ಟು ಇದ್ದ ಕಚ್ಚಾ ಮಾರ್ಗವು ೨೦೭೫೦೦ ಮೈಲಿನಷ್ಟು ವಿಸ್ತರಿಸಲ್ಪಡಬೇಕೆಂದು ಹೇಳಲಾಗಿದ್ದಿತು. ಇದರಿಂದ ಒಕ್ಕಲುತನಾಭಿವೃದ್ಧಿಯಾಗಿದ್ದ ಯಾವುದೇ ಹಳ್ಳಿಯಿಂದ ಮುಖ್ಯಮಾರ್ಗವು ೫ ಮೈಲಿನಕಿಂತಲೂ ಹೆಚ್ಚು ದೂರದಲ್ಲಿ ಉಳಿಯಬಾರದೆಂಬ ಉದ್ದೇಶವಿದೆ. ಆಗ ಅಂದಾಜು ಮಾಡಲಾದ ೩೭೨ ಕೋಟಿ ರೂಪಾಯಿಗಳ ವೆಚ್ಚವು ಇಂದಿನ ಬೆಲೆಯ ಸ್ಥಿತಿಯಲ್ಲಿ ೭೪೪ ಕೋಟಿ ರೂಪಾಯಿಗಳಾಗಿದೆ. ಈ ಕಾರ್ಯವು ಐದು ವರ್ಷಗಳಲ್ಲಿ ಮಾಡಬೇಕೆಂದಿರದೆ ಹತ್ತು ವರುಷಗಳ ಕಾಲಾವಧಿಯಲ್ಲಿ ಪೂರ್ತಿಗೊಳಿಸುವ ಹಾಗೆ ಯೋಜಿಸಲ್ಪಟ್ಟಿದೆ. ಇದಕ್ಕೆ ಕಾರಣಗಳೂ ಇವೆ.

ನಾಗಪೂರ ವರದಿಯ ಪ್ರಕಾರ ಮಾರ್ಗಗಳು, ರಾಷ್ಟ್ರೀಯ ರಾಜಮಾರ್ಗಗಳು, ರಾಜ್ಯದ ರಾಜಮಾರ್ಗಗಳು, ಮತ್ತು ಜಿಲ್ಲಾ ಮತ್ತು ಹಳ್ಳಿಯ ಮಾರ್ಗಗಳು ಎಂದು ವರ್ಗೀಕರಿಸಲಾಗಿದೆ. ರಾಷ್ಟ್ರೀಯ ರಾಜಮಾರ್ಗಗಳ ಉದ್ದಳತೆ ೩೪೦೦ ಮೈಲುಗಳಷ್ಟಿದೆ. ಇದರ ಸುವ್ಯವಸ್ಥೆಯ ಹೊಣೆಯನ್ನು ಕೇಂದ್ರ ಸರಕಾರವು ವಹಿಸಿಕೊಂಡಿದೆ. ಕಳೆದೈದು ವರುಷಗಳಲ್ಲಿ ೧೬೦ ಮೈಲು ಹೊಸಮಾರ್ಗ, ೧೭ ದೊಡ್ಡ ಸೇತುವೆಗಳು, ಅಸಂಖ್ಯ ಸಣ್ಣ ಸೇತುವೆಗಳು ಕಟ್ಟಲಾಗಿದ್ದು ೧೩೧೫ ಮೈಲುಗಳಷ್ಟು ಮಾರ್ಗವು ಸುಧಾರಿಸಲಾಗಿದೆಯಲ್ಲದೆ, ೩೨೦ ಮೈಲುಗಳಷ್ಟು ಮಾರ್ಗ ೧೮ ದೊಡ್ಡ ಸೇತುವೆಗಳ ರಚನೆಯಲ್ಲಿದೆ. ಪಂಚವಾರ್ಷಿಕ ಯೋಜನೆಯಲ್ಲಿ, ಈಗ ರಚನೆಯಾಗುತ್ತಿರುವ ಕಾರ್ಯವನ್ನು ಮುಗಿಸುವ ಏರ್ಪಾಡು ಇದೆಯಲ್ಲದೆ, ೬೫೦ ಮೈಲು ಹೊಸಮಾರ್ಗ, ೪೩ ದೊಡ್ಡ ಸೇತುವೆಗಳು, ಮತ್ತು ಅನೇಕ ಸಣ್ಣ ಸೇತುವೆಗಳನ್ನು ಕಟ್ಟುವ ಅನುಕೂಲತೆ ಕಲ್ಪಿಸಲಾಗಿದೆ. ಇದಲ್ಲದೆ ೨೦೦೦ ಮೈಲುಗಳಷ್ಟು ಮಾರ್ಗದ ಸುಧಾರಣೆಯಾಗಬೇಕಿದ್ದು ಇದರಲ್ಲಿ ಎರಡು ಮೂರಾಂಶ ಕೆಲಸ ೧೯೫೫–೫೬ರಷ್ಟರಲ್ಲಿ ಪೂರ್ತಿಯಾಗುವುದು. ರಾಷ್ಟ್ರೀಯ ರಾಜಮಾರ್ಗಗಳಿಗಾಗಿ ಕೇಂದ್ರಯೋಜನೆಯಲ್ಲಿ ೨೭ ಕೋಟಿ ರೂಪಾಯಿಗಳ ವ್ಯವಸ್ಥೆ ಮಾಡಲಾಗಿದೆ. ಕೇಂದ್ರವು ಒಪ್ಪಿಕೊಂಡ ಹೊಣೆಯ ಪ್ರಕಾರ ಬೇರೆ ಕೆಲವು ರಾಜಮಾರ್ಗಗಳಿಗಾಗಿ ಪ್ರತ್ಯೇಕ ೪ ಕೋಟಿ

ರೂಪಾಯಿ ತೆಗೆದಿಡಲಾಗಿದೆ. ಸೆಂಟ್ರಲ್ ರೋಡ ರಿಸರ್ಚ ಇನ್‌ಸ್ಟಿಟ್ಯೂಟಕ್ಕೆ ೩೦ ಅ ಲಕ್ಷ ರೂಪಾಯಿಗಳನ್ನು ವಿನಿಯೋಗಿಸಲಾಗಿರಿಸಲಾಗಿದೆ.

ರಾಜ್ಯದಲ್ಲಿಯ ಮಾರ್ಗಗಳಿಗಾಗಿ ಈಗ ರಾಜ್ಯದವರೇ ವೆಚ್ಚ ಮಾಡು ತ್ತಿದ್ದಾರೆ. ಇವರಿಗೆ ಸೆಂಟ್ರಲ್ ರೋಡ ಫಂಡದಿಂದ ಸಹಾಯಧನವೂ ದೊರೆಯುತ್ತದೆ. ರಾಜ್ಯಗಳ ಯೋಜನೆಯ ಪ್ರಕಾರ ೧೯೫೫-೫೬ರಷ್ಟರಲ್ಲಿ 'ಅ' ರಾಜ್ಯಗಳಲ್ಲಿ ಈಗಿದ್ದ ೧೦೦೦೭ ಮೈಲುಗಳ ಮಾರ್ಗವು ೧೨೮೫೩ ಮೈಲು ಗಳಷ್ಟಾಗುವುದು; ಮತ್ತು 'ಬ' ರಾಜ್ಯಗಳಲ್ಲಿ ೭೫೮೭ ರಿಂದ ೮೭೩೯ ರಷ್ಟು ಆಗುವುದು. 'ಕ' ರಾಜ್ಯಗಳಲ್ಲಿ ಹೊಸ ಮಾರ್ಗರಚನೆಯು ಏರ್ಪಾಡು ನಡೆದಿದೆ. ಎಲ್ಲ ರಾಜ್ಯಗಳಲ್ಲಿಯ ಮಾರ್ಗಸೌಕರ್ಯ ವಿಸ್ತರಣಕ್ಕಾಗಿ ೭೩.೫ ಕೋಟಿ ರೂಪಾಯಿ ತೆಗೆದಿಡಲಾಗಿದೆ. ಹಳ್ಳಿಗಳ ಮಾರ್ಗರಚನೆಗೆ ಹೆಚ್ಚು ಲಕ್ಷ್ಯವನ್ನು ರಾಜ್ಯಸರಕಾರಗಳು ಹಾಕಬೇಕೆಂದು ಯೋಜನಾ ಸಮಿ ತಿಯು ನಿರ್ದೇಶಿಸಿದೆ. ಕೆಲವು ಹಳ್ಳಿಗಳಲ್ಲಿ ಹಳ್ಳಿಗರ ಸಹಕಾರದಿಂದ ಈಗಾಗಲೇ ಮಾರ್ಗ ರಚಿತವಾಗುತ್ತಲಿವೆ. ಇದಕ್ಕಾಗಿ ಸೆಂಟ್ರಲ್ ರೋಡ ಫಂಡದಿಂದ ೧೫ ಲಕ್ಷ ರೂಪಾಯಿ ಕೊಡಲಾಗಿದೆ.

## ಮಾರ್ಗಸಾರಿಗೆ

ಸದ್ಯಕ್ಕೆ ಮೋಟರ ಸಾರಿಗೆ ಮಾಡುವ ೪೭೬೭೫ ಕಂಪನಿಗಳಿದ್ದು ಅವುಗಳಲ್ಲಿ ೪೬೦೦೦ ಕಂಪನಿಗಳು ಚಿಕ್ಕವಿವೆ, ೬ ರಕಿಂತ ಹೆಚ್ಚು ವಾಹನಗಳು ಅವರಲ್ಲಿ ಇಲ್ಲ. ರಾಜ್ಯ ಸಂಚಾಲಿತ ಸೇವೆಯು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿದೆ. ಸಾರ್ವಜನಿಕ ಮಾರ್ಗಸಾರಿಗೆಗಾಗಿ ೧೬.೧೩ ಕೋಟಿ ರೂಪಾಯಿಯ ವ್ಯವಸ್ಥೆ ಮಾಡಲಾಗಿದೆ. ರಾಜ್ಯಗಳ ಸರಕಾರದ ವತಿಯಿಂದ ಸಾರಿಗೆ ವ್ಯವಸ್ಥೆ ನಡೆಸಬೇಕೆಂಬ ಬಗ್ಗೆ ತಕ್ಕ ವ್ಯವಸ್ಥೆಯಾಗಿದ್ದು ಬೇಗನೆ ಕಾರ್ಯರೂಪದಲ್ಲಿ ಇಳಿಯುವುದು.

## ಸಂಪರ್ಕ

ಅಂಚೆ, ತಂತಿ, ಟೆಲಿಫೋನ ಮತ್ತು ರೇಡಿಯೋ ಸಂಪರ್ಕಕ್ಕಾಗಿ ಯೋಜನೆಯಲ್ಲಿ ೫೦ ಕೋಟಿ ರೂಪಾಯಿಗಳ ವ್ಯವಸ್ಥೆಯಾಗಿದೆ. ಇದರಿಂದ

೨೦೦೦ ಜನವಸತಿಯಿರುವ ಪ್ರತಿಯೊಂದು ಹಳ್ಳಿಗೆ ಅಂಚೆಕಚೇರಿಯ ವ್ಯವಸ್ಥೆ ಉಂಟಾಗುವುದು; ದೊಡ್ಡ ಪಟ್ಟಣಗಳಲ್ಲಿ ಟೆಲೆಫೋನಿನ ಹೆಚ್ಚಿನ ಸೌಕರ್ಯ ಉಂಟಾಗುವುದು.

ಈ ಎಲ್ಲ ಬಗೆಯ ಸಾರಿಗೆ ಸಂಪರ್ಕಗಳ ಸೌಕರ್ಯ ಒದಗಿಬರುವ ಕಾಲಕ್ಕೆ ಔದ್ಯಮಿಕ ವಿಕಾಸಾಭಿವೃದ್ಧಿಯು ಆಗುತ್ತಲಿರುವುದರಿಂದ ಒಂದು ಮತ್ತೊಂದನ್ನು ಪೋಷಿಸುವುದು. ಒಂದರಿಂದ ಮತ್ತೊಂದು ಪೋಷಣೆ ಪಡೆಯುವಂತೆಯೂ ಆಗಿ ಒಟ್ಟಿನಲ್ಲಿ ದೇಶದ ಜೀವನದಲ್ಲಿ ಹೊಸಚೇತನ ಕಂಡುಬರುವುದು.



## ಪ್ರಕರಣ ಹನ್ನೆರಡು

# ಅಭಿವೃದ್ಧಿ ಕಾರ್ಯಕ್ರಮಗಳು: ಸಮಾಜ ಕಲ್ಯಾಣ

### ಆರೋಗ್ಯ

ಉಳಿದ ದೇಶಗಳನ್ನು ನೋಡಿದರೆ, ಭಾರತದಲ್ಲಿ ಹುಟ್ಟಿದ ಮಗುವಿಗೆ ದೀರ್ಘ ಜೀವನಾವಧಿಯ ಅನುಕೂಲ ಕಡಿಮೆಯೆಂದು ಕಂಡುಬರುವುದು. ೧೯೫೧ರ ಗಣತಿಯ ಪ್ರಕಾರ ಸರಾಸರಿ ಆಯುರ್ಮಾನವು ಗಂಡಸಿಗೆ ೩೨.೪೫ ಮತ್ತು ಹೆಂಗಸಿಗೆ ೩೧.೬೭ ವರುಷವೆಂದು ಕಂಡುಬಂದಿದೆ. ಸಾವಿನಲ್ಲಿಯ ಸುಮಾರು ೪೦ ಶತಾಂಶದಷ್ಟು ಸಾವು ೧೦ ವರುಷದ ಒಳಗಿನ ವಯಸ್ಸಿನಲ್ಲಿ ಆಗುತ್ತದೆಂದು ಕಂಡುಬಂದಿದೆ. ಇದರಲ್ಲಿಯ ಅರ್ಧದಷ್ಟು ಮರಣ ಒಂದು ವರ್ಷದ ವಯಸ್ಸಿನ ಒಳಗೆಯೆ ಆಗುತ್ತಿದೆ. ಪ್ರತಿ ಸಾವಿರ ಸಜೀವ ಹೆರಿಗೆಗಳಲ್ಲಿ ೨೦ ಬಾಣಂತಿಯರ ಮರಣವಾಗುವುದು. ವರುಷಕ್ಕೆ ಸುಮಾರು ೨೦೦,೦೦೦ ಹೆಂಗಸರು ಹೆರಿಗೆಯಿಂದ ಸಾಯುತ್ತಾರೆ. ರೋಗಾದಿಗಳಿಂದಲೂ ಹೆಚ್ಚಿನ ಮರಣಗಳು— ೫ ಶತಾಂಶ ವಾರ್ಷಿಕವಾಗಿ ಆಗುತ್ತವೆ. ವರುಷಕ್ಕೆ ಸುಮಾರು ೧೦೦೦ ಲಕ್ಷ ಜನರಿಗೆ ಮಲೇರಿಯಾ ಬರುತ್ತಿದ್ದು ಇದರಲ್ಲಿ ೧೦ ಲಕ್ಷ ಜನರು ಸಾಯುತ್ತಾರೆಂದು ಕಾಣುತ್ತದೆ. ವರುಷಕ್ಕೆ ಸುಮಾರು ೨೫ ಲಕ್ಷ ಜನರಿಗೆ ಕ್ಷಯ ಬೇನೆ ಕಂಡುಬರುತ್ತಿದ್ದು ಅದರಲ್ಲಿ ೫೦೦,೦೦೦ ಜನರು ಸಾಯುತ್ತಾರೆ. ಈ ಎಲ್ಲ ಬಗೆಯ ಸಾವನ್ನು ತಡೆಯಬಹುದಾಗಿದೆ.

ಆರೋಗ್ಯವು ಹೀನಾಯವಾಗಿರಲಿಕ್ಕೆ ಆರೋಗ್ಯಕರ ವಾತಾವರಣವಿಲ್ಲದಿರುವುದೇ ಕಾರಣ. ವಸತಿಯ ಸಾಕಷ್ಟು ಸೌಕರ್ಯವಿಲ್ಲ; ಒಳ್ಳೆಯ ನೀರಿನ ಪೂರೈಕೆ ಇಲ್ಲ; ಮಲ ಹೊರಗೆ ಸಾಗಿಸುವ ವ್ಯವಸ್ಥೆಯಿಲ್ಲ. ಮೇಲಾಗಿ ಸತ್ವಯುತ ಆಹಾರವಿಲ್ಲದ್ದರಿಂದ ನಿರೋಧ ಶಕ್ತಿಯು ಕೆಳಮಟ್ಟದಲ್ಲಿರುವುದು. ವೈದ್ಯಕೀಯ ಚಿಕಿತ್ಸೆಯ ಅನುಕೂಲಕೆ ಕಡಿಮೆ. ಈ ಕೋಷ್ಟಕ ನೋಡಿರಿ:

| ವೈದ್ಯಕೀಯ ಸಹಾಯಕರು | ಭಾರತದ ಜನಸಂಖ್ಯೆಗೆ | ಯುನೈಟಿಡ್ ಕಿಂಗಡಂ ಜನಸಂಖ್ಯೆಗೆ |
|---|---|---|
| ಒಬ್ಬ ಡಾಕ್ಟರ | ೬೩೦೦ | ೧೦೦೦ |
| ಒಬ್ಬ ನರ್ಸ (ದಾಯಿ) | ೪೩೦೦೦ | ೩೦೦ |
| ಒಬ್ಬ ಆರೋಗ್ಯಾಧಿಕಾರಿ | ೪೦೦೦೦೦ | ೪೭೧೦ |
| ಒಬ್ಬ ಸೂಲಗಿತ್ತಿ | ೬೦೦೦೦ | ೬೧೮ |
| ಒಬ್ಬ ದಂತವೈದ್ಯ | ೩೦೦೦೦೦ | ೨೭೦೦ |
| ಒಬ್ಬ ಔಷಧಿಜ್ಞ | ೪೦,೦೦,೦೦೦ | ೩ ಡಾಕ್ಟರರಿಗೊಬ್ಬ |

ಭಾರತದಲ್ಲಿಯ ಇದ್ದ ಡಾಕ್ಟರರಲ್ಲಿ ೭೨ ಶತಾಂಶ ಡಾಕ್ಟರರು ಪಟ್ಟಣ ಪ್ರದೇಶಲ್ಲಿದ್ದಾರೆಂಬುದು ಮನನಾರ್ಹವಾಗಿದೆ. ಹೆಚ್ಚು ಜನ ವೈದ್ಯಕೀಯ ಸಹಾಯಕರು ತರಬೇತು ಹೊಂದುವುದು ಅತ್ಯಾವಶ್ಯಕವಾಗಿದೆ. ದೇಶದ ಬೇಡಿಕೆ ಪೂರೈಸುವಷ್ಟು ವೈದ್ಯಕದ ಶಾಲಾಕಾಲೇಜುಗಳೂ ಇಲ್ಲ. ೧೯೪೯ರಲ್ಲಿ ಪ್ರತಿ ೨೪೦೦೦ ಪಟ್ಟಣನಿವಾಸಿಗಳಿಗೆ ಒಂದರಂತೆ, ಪ್ರತಿ ೫೦೦೦೦ ಗ್ರಾಮನಿವಾಸಿಗಳಿಗೆ ಒಂದರಂತೆ ಸಂಸ್ಥೆಗಳು ಇದ್ದುವು.

ಪರಿಸ್ಥಿತಿಯು ಹೀಗಿರುವಾಗ ಪಂಚವಾರ್ಷಿಕ ಯೋಜನೆಯಲ್ಲಿ ಈ ಪ್ರಾಥಮಿಕತೆಯು ಕಾರ್ಯಕ್ರಮವಿಟ್ಟುಕೊಳ್ಳಲಾಗಿದೆ: (೧) ನೀರಿನ ಪೂರೈಕೆ; ಆರೋಗ್ಯ ವ್ಯವಸ್ಥೆ; (೨) ಮಲೇರಿಯಾನಿಯಂತ್ರಣ; (೩) ಗ್ರಾಮಾಂತರ ಗಳಲ್ಲಿ ಸಂಚಾರಿ ವೈದ್ಯಕ ಘಟಕಗಳಿಂದ ಅನಾರೋಗ್ಯ ನಿರೋಧಕ ಚಟು ವಟಿಕೆಗಳು; (೪) ತಾಯಿ ಮತ್ತು ಮಕ್ಕಳಿಗೆ ಆರೋಗ್ಯ ಸೇವೆ; (೫) ಆರೋಗ್ಯ ತರಬೇತು ಮತ್ತು ಶಿಕ್ಷಣ; (೬) ಔಷಧಿಗಳಲ್ಲಿ ಸ್ವಯಂಪೂರ್ಣತೆ; (೭) ಕುಟುಂಬಯೋಜನೆ—ಜನಸಂಖ್ಯೆ ನಿಯಂತ್ರಣ. ಈ ಎಲ್ಲ ಕಾರ್ಯ ಗಳಿಗಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೂಡಿ ೯೯.೫೫ ಕೋಟಿ ರೂಪಾಯಿ ವೆಚ್ಚಮಾಡುವುವು; ಇದರಲ್ಲಿ ೧೭-೮೭ ಕೋಟಿ ಕೇಂದ್ರ ಸರಕಾರದ ವಂತಿಗೆ ಇರುತ್ತದೆ. ಈ ವೆಚ್ಚದಲ್ಲಿಯ ಬಹುಭಾಗವನ್ನು ಆಸ್ಪತ್ರಿ-ಔಷಧಿ ವಿತರಣಾಲಯಗಳಿಗೆ ಕೊಡಲಾಗಿದೆ. ಸುಮಾರು ೪೦ ಶತಾಂಶ ವೈದ್ಯಕ ಶಿಕ್ಷಣ ತರಬೇತಿಗಾಗಿ ಇಡಲಾಗಿದೆ. ಎಷ್ಟು ಸಂಸ್ಥೆಗಳು ಮತ್ತು ಎಷ್ಟು ಜನ ತರಬೇತಿ ಪಡೆದವರು ಎಂಬುದು ಇದರಿಂದ ತಿಳಿವುದು:

| ಹೆಸರು | ೧೯೫೦–೫೧ | ೧೯೫೫–೫೬ | ಶತಾಂಶ ಹೆಚ್ಚಳ |
|---|---|---|---|
| ಡಾಕ್ಟರು | ೨೫೦೪ | ೨೭೮೨ | ೧೧.೧ |
| ಕಂಪೌಂಡರು | ೮೯೪ | ೧೬೨೧ | ೮೧.೩ |
| ನರ್ಸುಗಳು | ೨೨೧೨ | ೩೦೦೦ | ೩೫.೬ |
| ಸೂಲಗಿತ್ತಿಯರು | ೧೪೦೭ | ೧೯೩೨ | ೩೭.೩ |
| ವೈದ್ಯರು—ಹಕೀಮರು | ೯೧೪ | ೧೧೧೭ | ೨೨.೨ |
| ಆಸ್ಪತ್ರೆಗಳು | ೨೦೧೪ | ೨೦೬೨ | ೨.೪ |
| ಔಷಧಿ ವಿತರಣ ಕೇಂದ್ರಗಳು: (ಪಟ್ಟಣ) | ೧೩೫೮ | ೧೬೯೫ | ೨೪.೮ |
| ,, (ಗ್ರಾಮ) | ೫೨೨೯ | ೫೮೪೦ | ೧೧.೭ |
| ಆಸ್ಪತ್ರೆಯಲ್ಲಿ ಹಾಸುಗೆಗಳು | ೧೦೬೪೭೫ | ೧೧೭೨೨೨ | ೧೦.೧ |
| ,, ಔಷಧಿವಿತರಣ ಕೇಂದ್ರ: ಪಟ್ಟಣ | ೨೦೧೩ | ೨೨೨೩ | ೧೦.೪ |
| ,, ,, ಗ್ರಾಮ | ೫೦೬೬ | ೫೫೮೨ | ೧೦.೨ |

ಇವಲ್ಲದೆ ಕ್ಷಯರೋಗ ಚಿಕಿತ್ಸಾ ಕೇಂದ್ರಗಳು, ಆರೋಗ್ಯಧಾಮಗಳು, ಮೋಹರೋಗ ಚಿಕಿತ್ಸಾಲಯಗಳು ಕುಷ್ಠರೋಗಿಕೇಂದ್ರಗಳು, ಪ್ರತಿಯೊಂದು ರಾಜ್ಯದಲ್ಲಿ ಹೆಚ್ಚಾಗುವುವು.

## ನೀರಿನ ಪೂರೈಕೆ

ಭಾರತದ ಪಟ್ಟಣಗಳಲ್ಲಿಯ ೬ ಶತಾಂಶ ಪಟ್ಟಣಗಳಿಗೆ ಮಾತ್ರ ಸಂರಕ್ಷಿತ ನೀರಿನ ಪೂರೈಕೆ ಇದೆ. ಇದು ಪಟ್ಟಣ ಜನಸಂಖ್ಯೆಯ ೪೬.೫ ಶತಾಂಶಕ್ಕೆ ಪೂರೈಸುವುದು. ೧೦೦೦೦೦ ದಕಿಂತ ಹೆಚ್ಚಿಗೆ ಜನವಸತಿಯುಳ್ಳ ಪಟ್ಟಣಗಳಲ್ಲಿಯೂ ೨೩ ಪಟ್ಟಣಗಳಿಗೆ ಮಾತ್ರ ಗಟಾರಗಳ ವ್ಯವಸ್ಥೆಯಿದೆ. ಅರ್ಧವ್ಯವಸ್ಥೆಯಿಂದ ೧೨ ಪಟ್ಟಣಗಳಿವೆ. ಒಟ್ಟು ಜನಸಂಖ್ಯೆಯ ೩ ಶತಾಂಶಕ್ಕೆ ಈ ಸೌಕರ್ಯವಿದ್ದಂತಾಯಿತು. ಈ ಕಾರ್ಯಗಳಿಗಾಗಿ ರಾಜ್ಯಸರಕಾರಗಳ ಯೋಜನೆಯಲ್ಲಿ ೨೩.೪೯ ಕೋಟಿ ರೂಪಾಯಿ ಅನುಕೂಲಿಸಲಾಗಿದೆ. ಇದರಲ್ಲಿ

೧೨·೧೨ ಕೋಟಿ ಪಟ್ಟಣಗಳ ನೀರಿನ ಪೂರೈಕೆಗಾಗಿ ಇದೆ. ಸ್ಥಾನಿಕ ಸಂಸ್ಥೆಗಳಿಗೆ ಸಾಲಕೊಡುವುದಕ್ಕೊಂದು ಕೇಂದ್ರಯೋಜನೆಯಲ್ಲಿ ಈ ಕಾರ್ಯಗಳಿಗಾಗಿ ೩೦ ಕೋಟಿ ರೂಪಾಯಿ ತೆಗೆದಿಡಲಾಗಿದೆ. ಇದರಲ್ಲಿ ೧೦ ಕೋಟಿ ರೂಪಾಯಿ ನೀರಿನ ಪೂರೈಕೆಯ ವ್ಯವಸ್ಥೆಗೆಂದು ಗುರುತಿಸಲಾಗಿದೆ. ಶ್ರಮ ಮತ್ತು ಧನಗಳ ಮೂಲಕ ಸಾರ್ವಜನಿಕ ಸಹಕಾರವು ಒದಗಿಬಂದರೆ ಈಗ ತೆಗೆದಿಡಲಾಗಿದ್ದ ಹಣದಿಂದ ಬಹುಮಹತ್ವದ ಕಾರ್ಯ ಸಾಧಿಸಿದಂತಾಗುವುದು.

## ಮಲೇರಿಯಾ

ದೇಶವ್ಯಾಪಿಯಾದ ಕಾರ್ಯಕ್ರಮದಿಂದ ಮಲೇರಿಯಾ ನಿಯಂತ್ರಣ ಮಾಡಬೇಕೆಂದು ಮಾಡಲಾಗಿದೆ. ಕ್ರಿಮಿನಾಶಕ ಔಷಧಿ ತುಷಾರಿಸುವ, ಮಲೇರಿಯಾ ವಿರೋಧೀ ಔಷಧಿಗಳನ್ನು ವಿತರಿಸುವ ವ್ಯವಸ್ಥೆಯಿಂದ ೨೦೦೦ ಲಕ್ಷ ಜನರಿಗೆ ಸೌಕರ್ಯಸೇವೆ ದೊರೆವುದು. ಈಗಾಗಲೆ ಇದ್ದ ಡಿ. ಡಿ. ಟಿ. ಕಾರಖಾನೆಯಲ್ಲದೆ ಇನ್ನೊಂದು ಕಾರಖಾನೆಯನ್ನು ಸ್ಥಾಪಿಸುವುದೂ ಯೋಜನೆಯಲ್ಲಿದೆ. ಈಗ ಹಾಕಿಕೊಂಡ ಕಾರ್ಯಕ್ರಮಕ್ಕಾಗಿ ಮೂರುವರೆ ವರುಷದಲ್ಲಿ ೧೫ ಕೋಟಿ ರೂಪಾಯಿ ವೆಚ್ಚವಾಗುವುದು. ಇದರಲ್ಲಿ ರಾಜ್ಯ ಸರಕಾರಗಳ ಪಂತಿಗೆ ೫ ಕೋಟಿ ಇದೆ.

## ಕ್ಷಯ

ಇದರಿಂದ ಉಂಟಾಗುವ ಹಾವಳಿಯನ್ನು ಅನುಲಕ್ಷಿಸಿ ವಿಶೇಷ ಪರಿಹಾರೋಪಾಯಗಳನ್ನು ಮಾಡಬೇಕಾಗಿದೆ ಈ ಪ್ರಾಥಮಿಕತೆಯುಳ್ಳ ಕಾರ್ಯಕ್ರಮವನ್ನು ಅಣಿಗೊಳಿಸಲಾಗಿದೆ. (೧) ಬಿ ಸಿ. ಜಿ. ಚುಚ್ಚುವುದು; (೨) ವೈದ್ಯಕೀಯ ಸೇವೆ; (೩) ತರಬೇತು ಮತ್ತು ಪ್ರಾತ್ಯಕ್ಷಿಕೆ ಕೇಂದ್ರಗಳು (೪) ಚಿಕಿತ್ಸೆಗಾಗಿ ಪ್ರತ್ಯೇಕಿಸುವ ಏರ್ಪಾಡು; (೫) ಗುಣವಾದ ಬೇನಿಗರ ಆರೈಕೆ.

ಬಿ. ಸಿ. ಜಿ. ಚುಚ್ಚುವ ಕಾರ್ಯಕ್ರಮಕ್ಕೆ ಪ್ರಪಂಚದ ಆರೋಗ್ಯ ಸಂಸ್ಥೆಯಿಂದಲೂ ಅಂತರರಾಷ್ಟ್ರೀಯ ಮಕ್ಕಳ ಫಂಡಿನಿಂದಲೂ ಸಹಾಯ ಪಡೆಯುವ

ಒಪ್ಪಂದವನ್ನು ಕೇಂದ್ರ ಸರಕಾರವು ಮಾಡಿಕೊಂಡಿದೆ. ಈ ಕಾರ್ಯಕ್ರಮದಿಂದ ೧೫–೨೦ ವರುಷಗಳಲ್ಲಿ ಕ್ಷಯರೋಗದ ಮರಣಗಳ ಸಂಖ್ಯೆಯನ್ನು ಈಗಿನ ೫,೦೦,೦೦೦ ಸಂಖ್ಯೆಯು ಒಂದು ಐದಾಂಶಕ್ಕೆ ತರಬಹುದೆಂದು ಎಣಿಸಲಾಗಿದೆ. ಅಂತರರಾಷ್ಟ್ರೀಯ ಸಹಾಯ ನಿಧಿಯಿಂದ ದಿಲ್ಲಿ, ತ್ರಿವೇಂದ್ರಂ ಮತ್ತು ಪಾಟ್ನಾಗಳಲ್ಲಿ ಮೂರು ಕ್ಷಯರೋಗ ನಿದಾನ ಕೇಂದ್ರಗಳನ್ನು ಸ್ಥಾಪಿಸಲಾಗುವುದು. ಅಲ್ಲದೆ ಆರೋಗ್ಯಧಾಮಗಳನ್ನು ೩೭ರಿಂದ ೪೬ಕ್ಕೆ ಹೆಚ್ಚಿಸುವುದು, ಆಸ್ಪತ್ರೆಗಳನ್ನು ೪೮ರಿಂದ ೫೦ಕ್ಕೆ ಹೆಚ್ಚಿಸುವುದು, ಚಿಕಿತ್ಸಾ-ಲಯಗಳನ್ನು ೧೨೭ರಿಂದ ೧೮೦ಕ್ಕೆ ಮುಟ್ಟಿಸುವುದು, ಬಿ. ಸಿ. ಜಿ. ಕಾರ್ಯಕರ್ತರ ಗುಂಪುಗಳನ್ನು ೭೩ ರಿಂದ ೧೩೭ಕ್ಕೆ ಒಯ್ಯುವುದು ಯೋಜನೆಯ ಅವಕಾಶದಲ್ಲಿದೆ. ಈ ಎಲ್ಲ ಕಾರ್ಯಕ್ಕೆ ೪.೩೧ ಕೋಟಿ ರೂಪಾಯಿ ವೆಚ್ಚವಾಗುವುದು.

ಸತ್ವಯುತ ಆಹಾರದ ಕೊರತೆಯು, ವಿಷಮ ಆಹಾರದ ರೀತಿಯು ದೇಶದಲ್ಲಿದೆ. ಉತ್ಪಾದಿತವಾಗುವ ಆಹಾರವು ಪರಿಮಾಣದಲ್ಲಿಯೂ ಕೊರತೆಯುಳ್ಳದ್ದಾಗಿದೆ. ಗುಣಸತ್ವದಲ್ಲಿಯೂ ಕೊರತೆಯುಳ್ಳದ್ದಾಗಿದೆ. ಯೋಗ್ಯ ಸಮತೂಕ ಆಹಾರ ಪಡೆಯಲು ಬಹುಸಂಖ್ಯಾಕರಿಗೆ ಆರ್ಥಿಕ ನೆಲೆಗಟ್ಟು ಇಲ್ಲ. ಆದಾಯದ ಪರಿಮಾಣದಿಂದ ನೋಡಿದರೆ ೩೦ ಶತಾಂಶದಕಿಂತ ಹೆಚ್ಚು ಜನ ಸರಿಯಾದ ಆಹಾರ ಪಡೆಯಲಾರರು. ವಿಷಮ ಆಹಾರದ ಪರಿಸ್ಥಿತಿಯು ಮಕ್ಕಳ ಮೇಲೆ ಪರಿಣಾಮ ಮಾಡುತ್ತದೆ. ಹೆಂಗೆ ಮತ್ತು ಮಕ್ಕಳ ಕಲ್ಯಾಣ ಕೇಂದ್ರಗಳ ಮುಖಾಂತರ ಈ ಬಗ್ಗೆ ಕಾಳಜಿ ವಹಿಸಬೇಕೆಂದು ಮಾಡಿದೆ. ಜೀವನಸತ್ವ, ಆಹಾರದ ಯೀಸ್ಟ, ಶಾರ್ಕಲಿವರ ಎಣ್ಣೆ ಮುಂತಾದವುಗಳನ್ನು ಒದಗಿಸುವ ಯೋಜನೆಮಾಡಬೇಕೆಂದಿದೆ. ಆರೋಗ್ಯ ಸೇವೆಯಲ್ಲಿ ಹೆಂಗೆ ಮತ್ತು ಮಕ್ಕಳ ಆರೋಗ್ಯಕ್ಕೆ ಹೆಚ್ಚು ಮಹತ್ವಕೊಡುವ ಏರ್ಪಾಡು ಮಾಡಲಾಗಿದೆ. ಸಮಾಜದ ಎಲ್ಲ ವರ್ಗಗಳಿಗೆ ಆರೋಗ್ಯದ ಶಿಕ್ಷಣಕೊಡಬೇಕೆಂದು ಯೋಜನಾ ಸಮಿತಿಯು ಸೂಚನೆಯಿದೆ. ದೃಕ್ ಶಿಕ್ಷಣ, ಚಲಚಿತ್ರ, ರೇಡಿಯೊ, ಪತ್ರಿಕೆ, ಶಾಲೆಕಾಲೇಜು, ಪ್ರದರ್ಶನ, ವಾಚನಾಲಯ ಮುಂತಾದ ಕೇಂದ್ರಗಳಿಂದ ಆರೋಗ್ಯಶಿಕ್ಷಣ ಪ್ರಚಾರಮಾಡುವ ಹವಣಿಕೆ ನಡೆದಿದೆ.

## ವೈದ್ಯಕದ ಶಿಕ್ಷಣ ಮತ್ತು ಸಂಶೋಧನೆ

ಎಂ. ಬಿ. ಬಿ. ಎಸ್. ಪದವಿಗಾಗಿ ತರಬೇತುಗೊಳಿಸುವ ೩೦ ಕಾಲೇಜುಗಳು ಈಗ ದೇಶದಲ್ಲಿವೆ. ಇವಲ್ಲದೆ ನಾಲ್ಕು ವೈದ್ಯಕ ಶಾಲೆಗಳೂ ಇವೆ. ಈ ಶಾಲೆಗಳನ್ನು ಕಾಲೇಜುಗಳಾಗಿ ಮಾರ್ಪಡಿಸುವ ವಿಚಾರ ನಡೆದಿದೆ. ಇಂಡಿಯನ್ ಮೆಡಿಕಲ್ ಕೌನ್ಸಿಲದವರು ಒಪ್ಪಿದ ಸಮಾನಶಿಕ್ಷಣ ತರಗತಿಯು ಎಲ್ಲೆಡೆಯಲ್ಲಿಯೂ ದೊರೆವಂತೆ ಮಾಡಬೇಕೆಂದಿದೆ. ಈಗ ಈ ಕಾಲೇಜುಗಳು ವರುಷಕ್ಕೆ ೨೫೦೦ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುವು; ವರುಷಕ್ಕೆ ೧೬೦೦ ಪದವೀಧರರು ಆಗುವರು. ಈ ಐದು ವರುಷದ ಕೊನೆಗೆ ವರುಷಕ್ಕೆ ೪೦೦೦ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವಷ್ಟು ವ್ಯಾಪ್ತಿ ಬೆಳೆಯಿಸಬೇಕೆಂದು ಮಾತಲಾಗಿದೆ. ಎಲ್ಲ ಆಸ್ಪತ್ರೆಗಳಲ್ಲಿ ದಾಯಿಗಳಿಗೆ ಶಿಕ್ಷಣ ಕೊಡುವ ವ್ಯವಸ್ಥೆ ಮಾಡಲಾಗಿದೆ

ರಾಜ್ಯಗಳ ಮತ್ತು ಕೇಂದ್ರದ ಆದಾಯದಲ್ಲಿ ವೈದ್ಯಕದ ಸಂಶೋಧನೆಗಾಗಿ ಪ್ರತ್ಯೇಕ ವೆಚ್ಚದ ಏರ್ಪಾಡಾಗಬೇಕು. ಈ ಹಣವನ್ನು ಕಾಲೇಜುಗಳಲ್ಲಿಯ ಸಂಶೋಧನ ಕೇಂದ್ರಗಳಿಗೆ ವೆಚ್ಚ ಮಾಡಬೇಕು. ಕೇಂದ್ರ ಮತ್ತು ರಾಜ್ಯ ಸಂಶೋಧನ ಸಂಸ್ಥೆಗಳು ವಿಶೇಷ ವಿಷಯಗಳ ಬಗ್ಗೆ, ಸಾಮಾಜಿಕ ವಾತಾವರಣದಿಂದ ಉಂಟಾಗುವ ಆರೋಗ್ಯ ಮತ್ತು ರೋಗಗಳ ಬಗ್ಗೆ ಸಂಶೋಧನೆ ಮಾಡಬೇಕು. ದೇಶೀಯ ಮತ್ತು ಇತರ ವೈದ್ಯಕ ಪದ್ಧತಿಗಳ ಬಗ್ಗೆ ಸಂಶೋಧನೆ ನಡೆಸಲು ಪಂಚವಾರ್ಷಿಕ ಯೋಜನೆಯಲ್ಲಿ ೩೭.೫ ಲಕ್ಷ ರೂಪಾಯಿಯ ವ್ಯವಸ್ಥೆ ಮಾಡಲಾಗಿದೆ. ಮತ್ತು ಜಾಮನಗರದಲ್ಲಿ ಒಂದು ಕೇಂದ್ರ ಸಂಶೋಧನ ಸಂಸ್ಥೆಯನ್ನು ಪ್ರಾರಂಭಿಸಲಾಗಿದೆ. ಭಾರತೀಯ ವನಸ್ಪತಿಗಳ ಹೆಸರು, ಗುಣಧರ್ಮ, ಲಭ್ಯಸ್ಥಳ, ಬೆಳೆಯಲು ಯೋಗ್ಯವಾದ ಪ್ರದೇಶ, ಇವುಗಳ ಬಗ್ಗೆ ಸುದ್ದಿ ಸಂಗತಿಗಳನ್ನು ಕಲೆಹಾಕಲು ನಿರೀಕ್ಷಣೆಯ ವ್ಯವಸ್ಥೆ ಮಾಡಲಾಗಿದೆ. ಆಯುರ್ವೇದದ ಪದ್ಧತಿಯನ್ನು ಪದವಿ ಅಭ್ಯಾಸಗಳಲ್ಲಿ ಸೇರಿಸುವುದಕ್ಕೆ ಯೋಗ್ಯ ವೈಜ್ಞಾನಿಕ ಪರೀಕ್ಷಣ, ಪ್ರಯೋಗಗಳು ಆಗಬೇಕಾಗಿದೆ. ಆಯುರ್ವೇದದ ಜತೆಗೆ ಆಧುನಿಕ ವೈಜ್ಞಾನಿಕ ಜ್ಞಾನವೂ ಅಗತ್ಯ. ಅವೆರಡನ್ನೂ ಹೊಂದಿಸಿಕೊಂಡು ಹೋಗುವ ಅಭ್ಯಾಸಕ್ರಮವು

ಸಿದ್ಧವಾಗಬೇಕಾಗಿದೆ. ಈ ದೇಶೀಯ ಪದ್ಧತಿಗಳಲ್ಲಿಯ ಸಂಶೋಧನೆ ಶಿಕ್ಷಣ ಗಳಿಗಾಗಿ ೬೫·೨೩ ಲಕ್ಷ ರೂಪಾಯಿಯ ವ್ಯವಸ್ಥೆ ಮಾಡಲಾಗಿದೆ. ಆಯಾ ಪದ್ಧತಿಗಳ ರೋಗನಿದಾನ ಚಿಕಿತ್ಸೆಗಳಿಗೆ ಬೇಕಾಗುವ ಔಷಧಿ ಮತ್ತು ಉಪ ಕರಣಗಳನ್ನು ಸಿದ್ಧಪಡಿಸಲೂಬೇಕಾಗಿದೆ. ಜನನ-ಮರಣ-ಜೀವನಗಳ ಅಂಕೆ ಸಂಖ್ಯೆಗಳನ್ನು ವಿಶಿಷ್ಟ ಉಪಯುಕ್ತತೆಯ ದೃಷ್ಟಿಯಿಂದ ಕಲೆಹಾಕುವ ಕಾರ್ಯವೂ ನಡೆಯಬೇಕು.

## ಕುಟುಂಬ ಯೋಜನೆ

ದೇಶದ ಹಿತದ ದೃಷ್ಟಿಯಿಂದ, ಆಯಾ ಕುಟುಂಬಗಳ ಹಿತದ ದೃಷ್ಟಿ ಯಿಂದ ಕುಟುಂಬ ವ್ಯಾಪ್ತಿಯನ್ನು ಪರಿಮಿತಗೊಳಿಸುವ ಯೋಜನೆಯು ಆಗು ವುದು ಅವಶ್ಯವಿದೆ. ಒಳ್ಳೆಯ ಆರೋಗ್ಯಕ್ಕಾಗಿ, ಸುಖಸಾಧನೆಗಾಗಿ, ಮಕ್ಕಳ ಸಂಖ್ಯೆಯಲ್ಲಿ ಮಿತಿಯೂ ಮಕ್ಕಳ ನಡುವಿನ ಯೋಗ್ಯ ಅಂತರವೂ ಸಾಧಿಸಲ್ಪಡ ಬೇಕಾದ ವಿಷಯಗಳಾಗಿವೆ. ಇವು ಸಾರ್ವಜನಿಕ ಆರೋಗ್ಯದ ಕಾರ್ಯಕ್ರಮ ಗಳ ಅಂಗವಾಗಿವೆ. ಇದು ಯಶಸ್ವಿಯಾಗಬೇಕಾದರೆ, ಸಾಂಪ್ರದಾಯಿಕ ದೃಷ್ಟಿಯಲ್ಲಿ ಬದಲಾವಣೆಯಾಗಬೇಕು; ಭಾವಿಕತನ ದೂರಾಗಬೇಕು. ಅದಕ್ಕೆ ತಕ್ಕಂತಹ ಸಾಮಾಜಿಕ ಶಿಕ್ಷಣ, ಪ್ರಚಾರ ನಡೆಯಬೇಕು. ಯಾರಿಗೆ ಕುಟುಂಬ ಪರಿಮಿತಗೊಳಿಸಬೇಕೆಂದು ಇಚ್ಛೆಯಿದೆಯೋ ಅಂತಹ ದಂಪತಿಗಳಿಗೆ ಅಲ್ಲಲ್ಲಿ ಸರಕಾರದ ಆಸ್ಪತ್ರಿಗಳಲ್ಲಿ ಯೋಗ್ಯ ಸಲಹೆ ಸೌಕರ್ಯ ಒದಗಿಸಬೇಕು. ಬೇರೆ ಬೇರೆ ಪದ್ಧತಿಯ ಕುಟುಂಬ ಯೋಜನೆಗಳ ವಿಚಾರ ಸಮಾಜದಲ್ಲಿಯ ಬೇರೆ ಬೇರೆ ವರ್ಗಕ್ಕೆ ದೊರೆವಂತೆಯಾಗಬೇಕು. ಆರ್ಥಿಕ, ಸಾಮಾಜಿಕ, ಮತ್ತು ಜನಸಂಖ್ಯೆಯ ಕ್ರಿಯೆ-ಪ್ರತಿಕ್ರಿಯೆಗಳ ಅಭ್ಯಾಸ ನಡೆಯಬೇಕು. ಈ ಕಾರ್ಯಗಳಿಗಾಗಿ ಕೇಂದ್ರ ಸರಕಾರವು ೬೫ ಲಕ್ಷ ರೂಪಾಯಿಗಳನ್ನು ಆರೋಗ್ಯ ಮಂತ್ರಿಶಾಖೆಯಲ್ಲಿ ವ್ಯವಸ್ಥೆ ಮಾಡಿದೆ.

## ಶಿಕ್ಷಣ

ಪ್ರಜಾಪ್ರಭುತ್ವದ ಯಶಸ್ಸು, ಸಹಕಾರಿ ಭಾವದ ಬೆಳಗೆ, ಶಿಸ್ತಿನ ನಾಗರಿಕತ್ವ, ಮತ್ತು ಸಾರ್ವಜನಿಕ ವ್ಯವಹಾರಗಳಲ್ಲಿ ಸಾಮಾನ್ಯ ನಾಗರಿಕನು

ಭಾಗಿಯಾಗುವ ಅವನ ಸಮರ್ಥತೆ ಇವುಗಳ ಮೇಲೆ ಅವಲಂಬಿಸಿದೆ. ಈ ದೃಷ್ಟಿಯಲ್ಲಿ ನಾಗರಿಕರ ಸಿದ್ಧತೆಯಾಗುವ ಹಾಗೆ ಅವರಿಗೆ ಶಿಕ್ಷಣ ದೊರೆಯಬೇಕು. ಕರ್ತವ್ಯಬುದ್ಧಿಯು ಜಾಗೃತವಾಗುವಂತಹ ಶಿಕ್ಷಣಪದ್ಧತಿ ಬೇಕು. ಆದರೆ ಸದ್ಯಕ್ಕಿದ್ದ ಶಿಕ್ಷಣದ ಸೌಕರ್ಯವು ತಕ್ಕಷ್ಟು ಇಲ್ಲ. ಅದು ೬–೧೧ ವಯಸ್ಸಿನ ಬಾಲಕರಲ್ಲಿಯ ೪೦ ಶತಾಂಶ ಮಕ್ಕಳಿಗೆ, ೧೧–೧೭ ವಯಸ್ಸಿನವರಲ್ಲಿಯ ಬಾಲಕರಿಗೆ ೧೦ ಶತಾಂಶ, ೧೭–೨೩ ವಯಸ್ಸಿನ ಗುಂಪಿನಲ್ಲಿ ಬರುವವರಲ್ಲಿಯ ೦·೯ ಶತಾಂಶದಷ್ಟು ಯುವಕರಿಗೆ ಶಿಕ್ಷಣ ಕೊಡುವ ಹಾಗಿದೆ. ೧೪ ವಯಸ್ಸಿನ ವರೆಗಿನ ಎಲ್ಲ ಮಕ್ಕಳಿಗೂ ಶಿಕ್ಷಣವು ದೊರೆಯಲೇಬೇಕೆಂದು ಸಂವಿಧಾನವು ಹೇಳಿದೆ; ಹತ್ತು ವರುಷದ ಕಾಲಾವಧಿಯನ್ನು ಹಾಕಿದೆ. ಈಗಿನ ಶಿಕ್ಷಣವ್ಯವಸ್ಥೆಯು ತಲೆಭಾರವಾಗಿದೆಯೆಂದು ಒಂದೇ ಶಬ್ದದಲ್ಲಿ ಹೇಳಬಹುದು. ಪುಸ್ತಕ ಜ್ಞಾನದ ಕಡೆಗೆ ಒಲವು ಹೆಚ್ಚಾಗಿ ವ್ಯಾವಹಾರಿಕ ಬುದ್ಧಿಯ ವಿಕಾಸವಾಗದೆ ಹೋಗುತ್ತಿದೆ. ದೇಶಕ್ಕೆ ಅವಶ್ಯಕವಾಗುವ ಶಿಕ್ಷಣ ಪಡೆವ ಇಲ್ಲವೆ ಕೊಡುವ ಅನುಕೂಲತೆ ಇಲ್ಲ. ಮನದೊಲವಿನ ವಿಚಾರವಂತೂ ದೂರೇ ಉಳಿಯಿತು. ಬೇರೆ ಬೇರೆ ರಾಜ್ಯಗಳಲ್ಲಿ ಶಿಕ್ಷಣಸತ್ವದಲ್ಲಿ ಭಿನ್ನತೆಯಿದೆ. ಹಳ್ಳಿ ಪಟ್ಟಣಗಳಲ್ಲಿ ಸಮಾನ ಸೌಕರ್ಯದ ವಿತರಣವಾಗಿಲ್ಲ. ಹಳ್ಳಿಗಳಲ್ಲಿ ಶಿಕ್ಷಣದ ಸೌಕರ್ಯವಿಲ್ಲವೆನ್ನಿಸುವ ಹಾಗೆ ಇದೆ. ಹೆಣ್ಣು ಮಕ್ಕಳ ಶಿಕ್ಷಣವು ಎಲ್ಲ ದೃಷ್ಟಿಯಿಂದಲೂ ಅಲಕ್ಷಿಸಲ್ಪಟ್ಟಿದೆ. ತರಬೇತಿ ಪಡೆದ ಶಿಕ್ಷಕರ ಸಂಖ್ಯೆ ತೀರ ಕಡಿಮೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ದೇಶದ ಅವಶ್ಯಕತೆಗೆ ತಕ್ಕಂತೆ ತುಸು ಮಾರ್ಪಾಟು ಅಲ್ಲಲ್ಲಿ ಆಗಲಿದೆ, ಆಗಿದೆಯೆಂದು ಕಂಡುಬಂದರೂ ವ್ಯಾಪಕವಾದ ಸಮಸ್ಯೆಯು ಹಾಗೆಯೆ ಉಳಿದಿದೆ.

ರಾಷ್ಟ್ರೀಯ ಪದ್ಧತಿಯ ಶಿಕ್ಷಣ ಕೊಡಲು ೬–೧೪ ವಯಸ್ಸಿನ ಗುಂಪಿಗೆ ಸಾರ್ವತ್ರಿಕ ಶಿಕ್ಷಣಕ್ಕೆ ವರುಷಕ್ಕೆ ೪೦೦ ಕೋಟಿ ರೂಪಾಯಿ ಬೇಕಾಗುವವು. ಶಿಕ್ಷಕರನ್ನು ತರಬೇತುಗೊಳಿಸಲು ಇನ್ನೂ ೨೦೦ ಕೋಟಿ ರೂಪಾಯಿಗಳು ಬೇಕು. ೨೬೨ ಕೋಟಿ ರೂಪಾಯಿಗಳು ಅವಶ್ಯಕ ಕಟ್ಟಡಗಳಿಗಾಗಿ ಬೇಕಾಗುವುವು. ಇತ್ತೀಚೆ ಶಿಕ್ಷಣದ ಪ್ರಸಾರ ಹೆಚ್ಚಾಗಿದೆಯೆಂದು ಕೇಳಿಬಂದರೂ ೧೯೪೯–೫೦ರಲ್ಲಿ ಶಿಕ್ಷಣದ ವೆಚ್ಚವು ಕೇವಲ ೧೦೦ ಕೋಟಿ ರೂಪಾಯಿ ಇತ್ತು. ಈ ಐದು ವರುಷಗಳಲ್ಲಿ ೧೫೬ ಕೋಟಿ ರೂಪಾಯಿ ಶಿಕ್ಷಣಕ್ಕೆ ವೆಚ್ಚವಾಗ

ಬೇಕೆಂದು ಯೋಜನೆಯಲ್ಲಿ ವ್ಯವಸ್ಥೆ ಮಾತಲಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಈ ವೆಚ್ಚ ತೀರ ಕಡಿಮೆಯೆಂದು ಕಂಡರೂ ಹೆಚ್ಚು ಅನುಕೂಲ ಮಾತ್ರ ಇಲ್ಲದಾಗಿದೆ. ಸಾರ್ವಜನಿಕರು ಇನ್ನೂ ಹೆಚ್ಚು ಸಹಕಾರ ಕೊಡಬೇಕೆಂದು ಕೋರಿದೆ; ಹಾಗೆ ಅವರು ಕೊಡುವರೆಂಬ ಭರವಸೆಯೂ ಕಂಡುಬರುತ್ತಿದೆ. ಪೂರ್ತ್ಯಕೆಯಲ್ಲಿ ಕೊರತೆ ಇರುವುದರಿಂದ ವೆಚ್ಚದಲ್ಲಿ ಪ್ರಾಥಮಿಕತೆಯ ಪಟ್ಟಿ ಸಿದ್ಧವಾಗಲೇ ಬೇಕಾಗುತ್ತದೆ. ಶಿಕ್ಷಣಪದ್ಧತಿಯಲ್ಲಿಯ ಸುಧಾರಣೆಗೆ, ಶಿಕ್ಷಕರ ತರಬೇತಿಗೆ ಶಿಕ್ಷಣಸಾಹಿತ್ಯಸಿದ್ಧತೆಗೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕೆಂದು ಮಾಡಿದುದಕ್ಕೆ ಅವು ಶಿಕ್ಷಣಾಕ್ರಮದಲ್ಲಿ ಮೂಲ ಬಂಡವಲದ ಸರಕು ಆಗುವು ವೆಂಬುದೆ ಕಾರಣವಾಗಿದೆ. ಈಗಿದ್ದ ಶಿಕ್ಷಣಸಂಸ್ಥೆಗಳಲ್ಲಿಯ ಸತ್ವ, ಶಿಸ್ತು ಹೆಚ್ಚಾಗುವಂತೆ ನೋಡಿಕೊಳ್ಳುವುದೂ ಮಹತ್ವದ ಮಾತಾಗಿದೆ

ಶಿಕ್ಷಣವು ಸಂವಿಧಾನದ ಪ್ರಕಾರ ರಾಜ್ಯಗಳ ಹೊಣೆಯಾಗಿದೆ. ಅದರ ಧೋರಣೆ ರೂಪಿಸುವ, ಸಂಬಂಧೀಕರಿಸುವ ಕಾರ್ಯವನ್ನು ಮಾತ್ರ ಕೇಂದ್ರವು ಮಾಡುವುದು. ಸಾರ್ವಜನಿಕರ ಸಹಕಾರ ಹೆಚ್ಚುವಹಾಗೆ ಶಿಕ್ಷಣವು ಪ್ರಾಥಮಿಕ, ಕೆಳಮಾಧ್ಯಮಿಕ ಅವಸ್ಥೆಗಳಲ್ಲಿ ಸ್ಥಾನಿಕಸಂಸ್ಥೆಗಳಿಗೆ ಹೆಚ್ಚುಹೆಚ್ಚಾಗಿ ವಹಿಸುವ ವಿಕೇಂದ್ರೀಕರಣದ ಧೋರಣೆಯನ್ನು ಅನುಸರಿಸುವುದು ಅಗತ್ಯವಾಗಿದೆ. ಗ್ರಾಮಗಳಲ್ಲಿಯ ಜನಕ್ಕೆ ಉಚ್ಚಶಿಕ್ಷಣ ಕೊಡುವುದು ಸದ್ಯದ ಮಹತ್ವದ ಪ್ರಶ್ನೆಯಾಗಿದೆ. ಗ್ರಾಮವಿದ್ಯಾಪೀಠಗಳನ್ನು ರಚಿಸುವ ಸೂಚನೆ ಮುಂದೆ ಬಂದಿದೆ. ಮಾಧ್ಯಮಿಕ ಮತ್ತು ಉಚ್ಚಶಿಕ್ಷಣ ಪದ್ಧತಿಯಲ್ಲಿ ವಿಶೇಷ ಬದಲಾವಣೆಯಾಗಬೇಕೆಂದು ವಿಶ್ವವಿದ್ಯಾಲಯ ಸಮಿತಿಯು ವರದಿ ಮಾಡಿದೆ. ನಿರಕ್ಷರಿಗಳ ನಾಡಾದ ಭಾರತದಲ್ಲಿ ಪ್ರೌಢಶಿಕ್ಷಣವು ಸಮಾಜಶಿಕ್ಷಣದ ಮಹತ್ವದ ಅಂಗವಾಗಿದೆ. ಶಾಲೆಕಾಲೇಜುಗಳ ವಿದ್ಯಾರ್ಥಿಗಳು ಈ ಭಾಗದಲ್ಲಿ ವಿಶೇಷ ಸಹಕಾರ ಕೊಡುವ ಅನುಕೂಲತೆಯುಳ್ಳವರಾಗಿದ್ದಾರೆ ಕಳೆದ ಐದು ವರುಷಗಳಿಂದ ದೇಶದಲ್ಲಿ ತಾಂತ್ರಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡಲಾ-ಗುತ್ತಿದೆ. ಈ ವಿಭಾಗ ಬೆಳೆದ ಹಾಗೆಲ್ಲ ವಿವಿಧ ಉದ್ಯಮಗಳಿಗೆ ತಂತ್ರಕುಶಲ, ಯಂತ್ರಕುಶಲ ಕಾರ್ಮಿಕರು ದೊರೆಯುವರು. ಅದು ಉದ್ಯಮಗಳ ಕಾರ್ಯ ಕ್ಷಮತೆಯನ್ನು ಹೆಚ್ಚಿಸುವುದು. ಸ್ತ್ರೀಶಿಕ್ಷಣವು ಅಲಕ್ಷಿಸಲ್ಪಟ್ಟ ವಿಭಾಗ ವಾಗಿದೆ. ಸ್ತ್ರೀಸಹಜ ಶಿಕ್ಷಣ ದೊರೆವ ಜೊತೆಗೆ ಅವರಿಗೆ ಸಾಮಾನ್ಯ ಶಿಕ್ಷಣವೂ

ದೊರೆವ ಹಾಗೆ ಮಾಡಿದರೆ ನಾಗರಿಕತ್ವದ ಹೊಣೆಗಾರಿಕೆಯನ್ನು ಸರಿಯಾಗಿ ನಿರ್ವಹಿಸಲು ಅನುಕೂಲವಾಗುವುದು.

ಈ ಎಲ್ಲ ದೃಷ್ಟಿಯಿಂದ ಅಲ್ಲಲ್ಲಿ ಯೋಜನೆ ಪ್ರಯೋಗಗಳನ್ನು ನಡೆಸಲಾಗುತ್ತಿದೆ. ಕೇಂದ್ರವು ಮೀಸಲಾಗಿರಿಸಿದ ೬೯ ಕೋಟಿಯಲ್ಲಿ ೨೦ ಕೋಟಿ ವಿಶ್ವವಿದ್ಯಾಲಯಪೂರ್ವದ ಶಿಕ್ಷಣಕ್ಕೆ, ೨.೯೨ ಕೋಟಿ ವಿಶ್ವವಿದ್ಯಾಲಯ ಶಿಕ್ಷಣಕ್ಕೆ, ೧೧ ಕೋಟಿ ವೈಜ್ಞಾನಿಕ ತಾಂತ್ರಿಕ ಶಿಕ್ಷಣಕ್ಕೆ, ೧ ಕೋಟಿ ಯುವಕ ಶಿಬಿರಗಳು, ಶ್ರಮಶಿಬಿರಗಳಿಗೆ, ವಿಭಾಗಿಸಲಾಗಿದೆ. ೪ ಕೋಟಿ ಸಮಾಜ ಕಲ್ಯಾಣಕ್ಕಾಗಿ ಇಟ್ಟಿದೆ. ಆಯಾ ರಾಜ್ಯಗಳಲ್ಲಿಯ ಆದಾಯ ಒಲವುಗಳ ಪ್ರಕಾರ ಆಯಾ ಕಾರ್ಯಕ್ರಮದಲ್ಲಿ ಅವರು ಹೆಚ್ಚು ಹೊಣೆಗಾರಿಕೆ ವಹಿಸಬಹುದಾಗಿದೆ. ರಾಜ್ಯಗಳು ಒಟ್ಟು ೧೧೭ ಕೋಟಿ ರೂಪಾಯಿಗಳ ವೆಚ್ಚದ ಅಂದಾಜುಮಾಡಿವೆ. ಈ ಎಲ್ಲ ಕಾರ್ಯದ ಪರಿಣಾಮವಾಗಿ ಐದು ವರ್ಷದ ಕೊನೆಗೆ ಪ್ರಾಥಮಿಕ ಶಿಕ್ಷಣದಲ್ಲಿ ೧೭ ಶತಾಂಶ ವಿದ್ಯಾರ್ಥಿಗಳು ಹೆಚ್ಚಾಗುವರು. ಮಾಧ್ಯಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳು ೧೮ ಶತಾಂಶ ಹೆಚ್ಚುವರು. ತಾಂತ್ರಿಕ ಔದ್ಯೋಗಿಕ ಶಾಲೆಗಳಲ್ಲಿ ೫೭ ಶತಾಂಶ ಹೆಚ್ಚುವರು. ನೂರಕ್ಕೆ ೧೫ರಷ್ಟು ಪ್ರಾಥಮಿಕ ಶಿಕ್ಷಕರು, ೫೪ ಶತಾಂಶ ಮೂಲೋದ್ಯೋಗ ಶಿಕ್ಷಕರು ಹೆಚ್ಚಾಗುವರು.

## ಕಾರ್ಮಿಕರು

ಕಾರ್ಮಿಕರ ಸಮಸ್ಯೆಗಳನ್ನು ಎರಡು ದೃಷ್ಟಿಯಿಂದ ನೋಡಬೇಕು: ಕಾರ್ಮಿಕವರ್ಗದ ಕಲ್ಯಾಣ ಮತ್ತು ದೇಶದ ಆರ್ಥಿಕ ಸ್ಥಿರತೆ ಮತ್ತು ಪ್ರಗತಿ. ಕಾರ್ಮಿಕರ ಮೂಲಭೂತ ಅವಶ್ಯಕತೆಗಳಾದ ಆಹಾರ, ಅರಿವೆ, ವಸತಿ ಪೂರೈಸಲ್ಪಡಬೇಕು. ಆರೋಗ್ಯಸೇವೆ, ಸಾಮಾಜಿಕ ಭದ್ರತೆ, ಶಿಕ್ಷಣಾನುಕೂಲತೆ, ವಿನೋದವಿಹಾರ ಸೌಕರ್ಯ ಇವುಗಳನ್ನು ಅವನು ಪಡೆಯಬೇಕು. ಕೆಲಸದ ಪರಿಸರವು ಅವನ ಆರೋಗ್ಯವನ್ನು ರಕ್ಷಿಸುವಂತೆ ಮತ್ತು ಉಳಿದ ಅಪಘಾತಗಳಿಂದ ಸಂರಕ್ಷಿಸುವಂತೆ ಇರಬೇಕು. ಗೌರವಾದರದಿಂದ ಅವನನ್ನು ನಡೆಸಿಕೊಳ್ಳಬೇಕು. ಅವನಿಗೆ ಯಾವುದೇ ಅನ್ಯಾಯವಾದರೆ ನಿಷ್ಪಕ್ಷಪಾತ ನ್ಯಾಯವಿಚಾರಣೆಗೆ ಅವಕಾಶವಿರಬೇಕು. ತನ್ನ ಹಕ್ಕು ಹಿತಸಂಬಂಧ

ಗಳನ್ನು ಕಾಯ್ದುಕೊಳ್ಳಲು ಸಂಘಟನೆ ಮಾಡಿಕೊಂಡು ನ್ಯಾಯಬದ್ಧ ಸಾಧನಗಳನ್ನು ಅನುಸರಿಸುವ ಆಸ್ಪದವಿರಬೇಕು. ಸಾಮಾನ್ಯವಾಗಿ ಈ ಎಲ್ಲ ಹಕ್ಕುಗಳು ಸಂವಿಧಾನದಲ್ಲಿ ಆಶ್ವಾಸಿತವಾಗಿವೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಅವುಗಳ ಬಗ್ಗೆ ಜಾಗರೂಕವಾಗಿವೆ. ಫ್ಯಾಕ್ಟರಿ, ಟ್ರೇಡ್ ಯುನಿಯನ್, ಹಾಗೂ ಅಪಾಯ ಮತ್ತು ಮರಣಗಳಿಗಾಗಿ ಪರಿಹಾರಗಳು ಬಹು ಕಾಲದಿಂದಲೂ ನಡೆದುಬಂದಿವೆ. ಸ್ವಾತಂತ್ರ್ಯದ ನಂತರ ಪ್ರಗತಿಯು ಭರದಿಂದ ಸಾಗಿದೆ. ವಸತಿ ಮತ್ತು ಭೂಮಿ ಇಲ್ಲದ ಒಕ್ಕಲುತನ ಕಾರ್ಮಿಕರಿಗಾಗಿ ಎಂದು ೬·೭೪ ಕೋಟಿ ರೂಪಾಯಿಗಳನ್ನು ಯೋಜನೆಯ ಕಾಲಾವಧಿಯಲ್ಲಿ ವೆಚ್ಚ ಮಾಡಬೇಕೆಂದಿದೆ. ಈ ಉಪಾಯಗಳಿಗಾಗಿ ಕಾರ್ಮಿಕರಿಂದ ಸಮಾಧಾನಕಾರಕ ಪ್ರತಿಕ್ರಿಯೆಯುಂಟಾಗಿದೆ. ಆಂತರಿಕ ಜಗಳಗಳನ್ನು ಆಂತರಿಕವಾಗಿಯೇ ತೀರಿಸಿಕೊಳ್ಳುವ ಭರವಸೆಯುಂಟಾಗತೊಡಗಿದೆ. ಬೆಲೆಗಳ ಏರಿಕೆ, ಉದ್ಯಮಗಳ ಪ್ರಗತಿಯಲ್ಲಿ ತಡೆ ಇಲ್ಲದಿದ್ದರೆ ಕಾರ್ಮಿಕರ ಜೀವನ ಮಟ್ಟವು ಏರಬಹುದಾಗಿತ್ತು.

ಬಂಡವಲುದಾರರು ಮತ್ತು ಕಾರ್ಮಿಕರು ಇವರ ನಡುವೆ ಸಾಮರಸ್ಯವು ಖಾಸಗಿ ಕ್ಷೇತ್ರದ ಔದ್ಯೋಗಿಕ ಪ್ರಗತಿಗೆ ಅವಶ್ಯಕವಾಗಿದೆ. ಔದ್ಯೋಗಿಕ ಶಾಂತಿ ಸಮಾಧಾನದ ಮೇಲೆ ಆರ್ಥಿಕ ಪ್ರಗತಿ ಅವಲಂಬಿಸಿದೆ. ದೇಶದ ಆರ್ಥಿಕ ಆವಶ್ಯಕತೆಗಳನ್ನು ಪೂರೈಸಲು ಯಜಮಾನ-ಸೇವಕ ಸಂಬಂಧವು ಒಂದು ಬಗೆಯ ಪಾಲುಗಾರಿಕೆಯ ಹಾಗೆ. ಶ್ರಮಜೀವನದ ಬಗ್ಗೆ ಗೌರವ ಇರಬೇಕಾದುದು ಅಗತ್ಯ. ವ್ಯಾಜ್ಯಗಳು ಉಂಟಾಗದ ಹಾಗೆ ಯಜಮಾನ ಸೇವಕ ಇವರ ಕರ್ತವ್ಯಗಳು ನಿರ್ದಿಷ್ಟವಾಗಿ ಗೊತ್ತುಮಾಡಲ್ಪಡಬೇಕು. ಉದ್ಯಮದ ಎಲ್ಲ ವರ್ಗದ ನೌಕರರಲ್ಲಿ ಮಧುರ ಬಾಂಧವ್ಯ ಬೆಳೆಯುವಂತೆಯಾಗಬೇಕು. ಪರಸ್ಪರ ತಿಳಿವಳಿಕೆಯಿಂದ ವ್ಯಾಜ್ಯವು ಬಗೆಹರಿಯದಿದ್ದರೆ ಅದನ್ನು ಮಧ್ಯಸ್ಥಗಾರರ ಸಹಾಯದಿಂದ ಬಗೆಹರಿಯಿಸಬೇಕು.

ಸರಕಾರದ ಒಡೆತನವಿದ್ದ ಉದ್ಯಮಗಳಲ್ಲಿ ವೈಯಕ್ತಿಕ ಲಾಭದ ಆಸೆಯ ಪ್ರಶ್ನೆಯೆ ಇಲ್ಲ. ಅದಕ್ಕಾಗಿ ದುರ್ಲಾಭದ ಪ್ರಶ್ನೆಯೂ ಬರಲಾರದು. ಆದ ಲಾಭವು ಯಾವುದೇ ವ್ಯಕ್ತಿಯದಲ್ಲ; ದೇಶದ್ದು. ಇಲ್ಲಿ ನೌಕರನು ಒಂದು

ಬಗೆಯಿಂದ ಯಜಮಾನನೂ ಅಹುದು. ಹೆಚ್ಚುಹೆಚ್ಚು ಒಳ್ಳೆಯ ಕೆಲಸ ಮಾಡಿದಂತೆ ಅವನಿಗೆ ಒಳ್ಳೆಯದೇ ಆಗುವುದು. ಖಾಸಗಿ ಸಂಸ್ಥೆಗಳಕಿಂತ ಇಲ್ಲಿಯ ವೇತನ ಕಡಿಮೆಯಾಗಿರಕೂಡದು. ಇಲ್ಲಿಯ ಕಾರ್ಯವ್ಯವಸ್ಥೆಯು ಉಳಿದವರಿಗೆ ಮಾದರಿಯಾಗಿರಬೇಕು. ಸಂಚಾಲಕವರ್ಗದಲ್ಲಿ ಕಾರ್ಮಿಕರ ಪ್ರತಿನಿಧಿಗಳೂ ಇರಬೇಕು. ಕಾರ್ಮಿಕರ ಕಾನೂನುಗಳಿಂದ ಬರುವ ಲಾಭ ವೆಲ್ಲವೂ ಇವರಿಗೆ ದೊರೆಯಬೇಕು. ಸಾಮಾಜಿಕ ಭದ್ರತೆಯ ಸೌಕರ್ಯಗಳೂ ದೊರೆಯಬೇಕು.

## ವಸತಿ

ಇದುವರೆಗೆ ಮನೆಗಳು ಖಾಸಗಿ ಪ್ರಯತ್ನಗಳ ಮೂಲಕ ಕಟ್ಟಲ್ಪಡುತ್ತಿದ್ದುವು. ಆದರೆ ದೇಶದಲ್ಲಿಯ ಬೆಳೆಯುತ್ತಿರುವ ವಸತಿಸೌಕರ್ಯದ ಬೇಡಿಕೆಗೆ ತಕ್ಕಂತೆ ಖಾಸಗಿ ಪ್ರಯತ್ನದ ಫಲವು ಪೂರೈಸದಾಗಿದೆ. ಇದಕ್ಕೆ ಅನೇಕ ಕಾರಣಗಳು ಇವೆ. ಬಾಡಿಗೆ ನಿಯಂತ್ರಣವು ಮುಖ್ಯ ಕಾರಣ, ಮತ್ತು ಸರಕಾರವು ವಸತಿಗಳನ್ನು ವಶಪಡಿಸಿಕೊಳ್ಳುವುದೂ ಒಂದು ಕಾರಣ. ಆದರೆ ಮೂಲಕಾರಣ ಯುದ್ಧಜನ್ಯಪರಿಸ್ಥಿತಿಯ ಮೂಲಕ ಸಾಮಾನು ಮತ್ತು ಸಾಧನಗಳ, ಶ್ರಮದ ಕೊರತೆ. ಪಟ್ಟಣಗಳಲ್ಲಿಯ ಜನವಸತಿ ಹೆಚ್ಚಾಗುತ್ತಲೇ ನಡೆದಿದೆ. ವಿಭಜನೆಯ ನಂತರದ ನಿರ್ವಾಸಿತರ ತಂಡವೂ ವಸತಿಯ ಬಿಕ್ಕಟ್ಟನ್ನು ಹೆಚ್ಚಿಸಿತು.

ಸರಕಾರದ ನೌಕರರಿಗೆ ವಸತಿಯ ಏರ್ಪಾಡು ಮಾಡಬೇಕಾಗಿಬಂತು. ಕಡಿಮೆ ಉತ್ಪನ್ನದ ಜನತೆಯು, ಅವರು ಸರಕಾರೀ ನೌಕರರು ಇರದೆ ಇದ್ದರೂ ಅವರಿಗಾಗಿಯೂ ವಸತಿಯ ಏರ್ಪಾಡುಮಾಡಬೇಕಾಗಿ ಬಂತು. ಮುಂಬಯಿಯಲ್ಲಿ ಹೌಸಿಂಗ ಬೋರ್ಡ ಸ್ಥಾಪಿತವಾಗಬೇಕಾಯಿತು. ಅವರು ಈಗಾಗಲೇ ಕಾರ್ಮಿಕರಿಗಾಗಿ ೭೦೦೦ ಮನೆಗಳನ್ನು ಕಟ್ಟಿದ್ದಾರೆ. ೯೦೦೦ ಮನೆಗಳನ್ನು ನಿರ್ವಾಸಿತರಿಗಾಗಿ ಕಟ್ಟಿದ್ದಾರೆ. ಉತ್ತರಪ್ರದೇಶ ರಾಜ್ಯದಲ್ಲಿಯೂ ಈ ಬಗೆಯ ಕಾರ್ಯ ನಡೆದಿದೆ; ಮಧ್ಯಪ್ರದೇಶ, ಹೈದರಾಬಾದ ರಾಜ್ಯಗಳಲ್ಲಿಯೂ ಈ ಪದ್ಧತಿ ಅನುಸರಿಸಲಾಗಿದೆ. ಅಲ್ಲಲ್ಲಿ ಮುನಿಸಿಪಾಲಿಟಿಗಳ ಪರವಾಗಿಯೂ ಮನೆಕಟ್ಟುವ ಕಾರ್ಯ ನಡೆದಿದ್ದು ಅವು ಒಟ್ಟು ೧೬೭೭೧ ಮನೆಗಳಾಗಿವೆ.

ಇಷ್ಟಾದರೂ ಇನ್ನೂ ಕೊರತೆ ಬಹುವಾಗಿದೆ. ೩೧ ಔದ್ಯೋಗಿಕ ಪಟ್ಟಣಗಳಲ್ಲಿಯ ೪,೫೪,೦೦೦ ಕಾರ್ಮಿಕರಿಗೆ ಇನ್ನೂ ವಸತಿಯ ವ್ಯವಸ್ಥೆಯಾಗಬೇಕಾಗಿದೆ. ಇದು ಸಮಸ್ಯೆಯ ವ್ಯಾಪ್ತಿಯನ್ನು ತೋರುವುದು. ಹಳ್ಳಿಗಳಲ್ಲಿ ಜನರು ತಮ್ಮ ತಮ್ಮ ಮನೆಗಳನ್ನು ತಾವೇ ಕಟ್ಟಿಕೊಳ್ಳುವ ಪರಿಪಾಠವಿದ್ದದ್ದರಿಂದ ಅಲ್ಲಿ ಸಮಸ್ಯೆಯು ವ್ಯಾಪಕವಾಗಿಲ್ಲ.

## ಹಿಂದುಳಿದ ವರ್ಗಗಳು

ಸಂವಿಧಾನದಲ್ಲಿ ಎಲ್ಲ ನಾಗರಿಕರಿಗೆ ಸಮಾನ ಸಾಮಾಜಿಕ ನ್ಯಾಯ ದೊರೆವುದೆಂದು ಆಶ್ವಾಸನ ಕೊಡಲಾಗಿದ್ದರೂ ಅದು ವ್ಯವಹಾರದ ಮಟ್ಟಕ್ಕೆ ಇಳಿಯಬೇಕಾದರೆ ಸಾರ್ವಜನಿಕರ ಸಹಕಾರವು ಅತ್ಯವಶ್ಯವಾಗಿದೆ. ಸಮಾಜ ಕಲ್ಯಾಣದ ಆವಶ್ಯಕತೆ, ಹೆಣ್ಣುಮಕ್ಕಳು. ಮಕ್ಕಳು, ಯುವಕರು, ಕುಟುಂಬ, ಹಿಂದುಳಿದ ವರ್ಗದವರು ಇವರಿಗಾಗಿ ಇದೆ. ಹಿಂದುಳಿದ ವರ್ಗದವರು ಕಾರಣಾಂತರಗಳಿಂದ ಹಿಂದುಳಿದಿದ್ದಾರೆ. ಈ ವರ್ಗದಲ್ಲಿ ಹರಿಜನರು, ಕೋಪ್ಪಕಿತ ಪಂಗಡದವರು, 'ಅಪರಾಧಿಕ ತಂಡ'ದವರು ಸಮಾವೇಶವಾಗುತ್ತಾರೆ. ಕೆಲವರಿಗೆ ನಾಗರಿಕತೆಯ ಸಂಪರ್ಕವೂ ಇಲ್ಲದೆ ಗುಡ್ಡಗಾಡಿನಲ್ಲಿರುತ್ತಾರೆ. ಕೆಲವರು ಸಂಚಾರೀ ಜೀವನ ಅನುಸರಿಸುತ್ತಾರೆ. ಸುತ್ತಲೂ ನಾಗರಿಕತೆ ಬೆಳೆಯುತ್ತಿರುವಾಗ ಇವರ ಸಾಂಪ್ರದಾಯಿಕ ಜೀವನವು ಕಷ್ಟಮಯವಾಗುತ್ತಲಿದೆ. ಅವರ ಜೀವನ ರೀತಿಯಲ್ಲಿಯೇ ಅವರೂ ಅವರಿಗೆ ಆಧುನಿಕ ಸೌಕರ್ಯ ಸಾಧನಗಳನ್ನು ಒದಗಿಸುವುದು ಕರ್ತವ್ಯವಾಗಿದೆ.

ಪ್ರಕರಣ ಹದಿಮೂರು

# ಅಭಿವೃದ್ಧಿ ಕಾರ್ಯಕ್ರಮಗಳು, ಪುನರ್ನಿವೇಶನ

## ನಿರ್ವಾಸಿತರ ಪುನರ್ನಿವೇಶನ:

೧೯೪೭ರ ಆಗಸ್ಟದಲ್ಲಿ ದೇಶವಿಭಜನೆಯಾದ ಕೆಲವು ತಿಂಗಳಲ್ಲಿಯೇ ಸುಮಾರು ೫೦ ಲಕ್ಷ ಹಿಂದುಗಳು ಮತ್ತು ಶೀಖರು ಪಶ್ಚಿಮ ಪಾಕಿಸ್ತಾನ ಬಿಟ್ಟು ಬರಬೇಕಾಯಿತು. ಪೂರ್ವ ಪಾಕಿಸ್ತಾನದಿಂದ ೧೫ ಲಕ್ಷ ಹಿಂದುಗಳು ಭಾರತಕ್ಕೆ ಬಂದರು; ೧೯೫೦ರ ಸುಮಾರಕ್ಕೆ ಮತ್ತೆ ೧೦ ಲಕ್ಷ ಹಿಂದುಗಳು ಭಾರತಕ್ಕೆ ಎತ್ತಿ ಬಂದರು. ಪೂರ್ವ ಪಾಕಿಸ್ತಾನದಿಂದ ಜನ ಬರುವುದು ಇನ್ನೂ ನಡೆದೇ ಇದೆ. ಸದ್ಯಕ್ಕೆ ಪಶ್ಚಿಮ ಬಂಗಾಲದಲ್ಲಿ ೨೧ ಲಕ್ಷ ನಿರ್ವಾ-ಸಿತರು ಇದ್ದಾರೆ. ಇವರೆಲ್ಲ ಕಲಕತ್ತೆಯ ಸುತ್ತುಮುತ್ತಲಿನ ಪ್ರದೇಶದಲ್ಲಿ ಇದ್ದಾರೆ. ಇದರಿಂದ ಆ ರಾಜ್ಯದ ಆರ್ಥಿಕ ವ್ಯವಸ್ಥೆಗೆ ದೊಡ್ಡ ಭಾರ ಬಿದ್ದಿದೆ.

ಪಂಜಾಬ, ಪೆಪ್ಸು, ರಾಜಸ್ತಾನ, ದಿಲ್ಲಿ ರಾಜ್ಯಗಳಲ್ಲಿ ಮುಸ್ಲಿಮರು ತೆರವುಮಾಡಿ ಹೋದ ಒಕ್ಕಲುತನ ಭೂಮಿ ಸಾಕಷ್ಟು ಇದ್ದಿತು. ಈ ಪ್ರದೇಶ ವನ್ನು ಭಾರತ ಸರಕಾರವು ವಹಿಸಿಕೊಂಡು, ಅನೇಕ ಉಪಾಯಗಳನ್ನು ಯೋಜಿಸಿ, ಪಶ್ಚಿಮ ಪಾಕಿಸ್ತಾನದ ನಿರ್ವಾಸಿತರಿಗೆ ಗ್ರಾಮಗಳಲ್ಲಿ ಪುನರ್ನಿವೇ-ಶನದ ವ್ಯವಸ್ಥೆ ಮಾಡಿತು. ಪಶ್ಚಿಮಪಾಕಿಸ್ತಾನದಿಂದ ಬಂದ ಪಂಜಾಬಿಗಳನ್ನು ಪಂಜಾಬದಲ್ಲಿ ನೆಲೆಸಲಾಯಿತು. ಪಶ್ಚಿಮಪಾಕಿಸ್ತಾನದಲ್ಲಿ ಇವರು ೩೯ ಲಕ್ಷ ಎಕರೆ ಭೂಮಿ ಬಿಟ್ಟುಬಂದಿದ್ದರು; ಇಲ್ಲಿ ಮುಸ್ಲಿಮರು ಬಿಟ್ಟು ಹೋಗಿದ್ದುದು ೨೪ ಲಕ್ಷ ಎಕರೆ ಭೂಮಿ ಮಾತ್ರ ಇದ್ದಿತು. ಇವರ ನೆಲಸಿಕೆಗೆ ಕಡಿಮೆಯಾದ ೧೫ ಲಕ್ಷ ಎಕರೆಯನ್ನು ಅವರವರ ಅಲ್ಲಿಯ ಆಸ್ತಿಗಾತ್ರದ ಪ್ರಮಾಣದ ಮೇಲೆ ಕಡಿಮೆಮಾಡಲಾಯಿತು. ೧೦ ಎಕರೆ ಇದ್ದವರಿಗೆ ೨೫ ಶತಾಂಶ ಕಡಿತ, ಹೆಚ್ಚು ಇದ್ದವರಿಗೆ ಹೆಚ್ಚು ಕಡಿತ, ತೀರ ಹೆಚ್ಚು ಇದ್ದವರಿಗೆ– ೧೦೦೦ ಎಕರೆ

೧೦ತ ಹೆಚ್ಚು ಇದ್ದವರಿಗೆ ೯೫ ಶತಾಂಶದ ವರೆಗೂ ಕಡಿತ ಮಾಡಲಾಯಿತು. ಈ ೩೪ ಲಕ್ಷ ಎಕರೆಯನ್ನು ಅರೆಶಾಶ್ವತ ಪದ್ಧತಿಯ ಪ್ರಕಾರ ೫ ಲಕ್ಷ ಕುಟುಂಬಗಳಲ್ಲಿ ಹಂಚಲಾಯಿತು. ಹೀಗೆ ಮಾಡುವಾಗ ಸುಮಾರು ೭೬೦೦೦ ಒಕ್ಕಲುತನ ಕುಟುಂಬಗಳನ್ನು ಸ್ಥಾನ ಬಿಡಿಸಬೇಕಾಯಿತು. ಇವರು ದೇಶ ಬಿಟ್ಟು ಹೋದ ಮುಸ್ಲಿಮರ ರೈತರೆಂದೋ ಲಾವಣಿಕಾರರೆಂದೊ ದುಡಿಯುತ್ತಿದ್ದರು. ಇವರಲ್ಲಿ ಕೆಲವರಿಗೆ ಪಶ್ಚಿಮಪಾಕಿಸ್ತಾನದಲ್ಲಿ ಹೊಲಗಳೇನೂ ಇರಲಿಲ್ಲ. ಇವರಲ್ಲಿಯ ಸುಮಾರು ೩೩೦೦೦ ಜನರನ್ನು ಪಂಜಾಬ, ಪೆಪ್ಸುಗಳಲ್ಲಿ ಲಾವಣಿದಾರರೆಂದು ಒಳಗೊಳ್ಳಲಾಗಿದೆ; ಉಳಿದವರನ್ನು ಸಮಾವೇಶಮಾಡಿಕೊಳ್ಳುವ ಬಗ್ಗೆ ಆ ರಾಜ್ಯ ಸರಕಾರಗಳು ಆಶ್ವಾಸನಕೊಟ್ಟಿವೆ.

ಪಶ್ಚಿಮ ಪಾಕಿಸ್ತಾನದಿಂದ ಬಂದ ಪಂಜಾಬಿಗಳಲ್ಲದ ಜನರ ಸಲುವಾಗಿ ಬೇರೆ ವ್ಯವಸ್ಥೆ ಮಾಡಲಾಯಿತು. ೨೭೫೦೦ ಕುಟುಂಬಗಳನ್ನು ರಾಜಸ್ಥಾನದಲ್ಲಿ ನೆಲಿಸಲಾಯಿತು. ೧೯೫೦ರಲ್ಲಿ ೧೨೬೪೫ ಕುಟುಂಬಗಳಿಗೆ ಹೊಲಗಳನ್ನು ಕೊಡಮಾಡಿದರೆ ಅವರಲ್ಲಿ ಕೇವಲ ೪೦೦೦ದಷ್ಟು ಕುಟುಂಬಗಳು ಸ್ವೀಕರಿಸಿದುವು. ಉಳಿದವರು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದ್ದು ಈ ಭೂಮಿ ಸಾಗುಮಾಡುವ ಹವ್ಯಾಸ ಬೇಕಾಗಿದ್ದಿಲ್ಲವೆಂದು ಕಂಡುಬಂದಿತು. ಒಟ್ಟಿನಲ್ಲಿ ಪಶ್ಚಿಮ ಪಾಕಿಸ್ತಾನದಿಂದ ಬಂದ ಒಕ್ಕಲಿಗರು ನೆಲಸಲ್ಪಟ್ಟಂತಾಯಿತು. ೧೯೫೧-೫೨ರ ಕೊನೆಯ ವರೆಗೆ ಈ ಜನರಿಗೆ ಎತ್ತು ಕೊಳ್ಳಲು, ಮೇವು, ಬೀಜ ಒಕ್ಕಲುತನ ಉಪಕರಣಗಳನ್ನು ಕೊಂಡುಕೊಳ್ಳಲು ಸುಮಾರು ೮ ಕೋಟಿ ರೂಪಾಯಿ ಸಾಲ ಕೊಡಲಾಯಿತು.

ಪೂರ್ವಪಾಕಿಸ್ತಾನದಿಂದ ಎತ್ತಿಬಂದ ೪೭೦೦೦೦ ಗ್ರಾಮವಾಸಿ ಕುಟುಂಬಗಳಲ್ಲಿ ೩೩೦೦೦೦ ಕುಟುಂಬಗಳ ಪುನರ್ನೆಲಸುವಿಕೆಯು ಪೂರ್ವದ ರಾಜ್ಯಗಳಲ್ಲಿ ಆಗಿದೆ. ಅವರು ಒಕ್ಕಲುತನ ಮತ್ತು ಆನುಷಂಗಿಕ ವ್ಯವಸಾಯಗಳಲ್ಲಿ ತೊಡಗಿರುವರು. ಇವರಿಗಾದರೂ ಸುಮಾರು ಎಂಟು ಕೋಟಿ ರೂಪಾಯಿಗಳ ಸಹಾಯಧನ ಕೊಡಲಾಗಿದೆ. ೧೯೫೩-೫೪ರಲ್ಲಿ ಇನ್ನೂ ೫೦೦೦೦ ಕುಟುಂಬಗಳನ್ನು, ೧೯೫೪-೫೫ರಲ್ಲಿ ಮತ್ತೆ ೨೫೦೦೦ ಕುಟುಂಬಗಳನ್ನು ಪುನರ್ನೆಲಸುವ ವ್ಯವಸ್ಥೆ ಮಾಡಲಾಗಿದೆ. ಇದಕ್ಕೆ ೧೦ ಕೋಟಿ ರೂಪಾಯಿ ವೆಚ್ಚವಾಗುವುದು.

ಇತ್ತೀಚೆ ಪೂರ್ವಪಾಕಿಸ್ತಾನದಿಂದ ಜನ ಮತ್ತೆ ಎತ್ತಿ ಬರದಿದ್ದರೆ ೧೯೫೩–೫೪ ರಷ್ಟರಲ್ಲಿ ಹಿಂದೆಬಂದಿದ್ದ ಎಲ್ಲ ಗ್ರಾಮ ನಿರ್ವಾಸಿತರನ್ನು ನೆಲೆಸಿದಂತಾಗುತ್ತಿತ್ತು.

ಪಟ್ಟಣವಾಸಿಗಳ ಪುನರ್ನೆಲಸುವಿಕೆ ಜಟಿಲವಾದ ಸಮಸ್ಯೆಯುಂತಿದೆ. ಇಲ್ಲಿಂದ ಹೋದ, ಅಲ್ಲಿಂದ ಬಂದ ಜನರ ಧಂದೆಗಳಲ್ಲಿ ವ್ಯತ್ಯಾಸ ಬಹಳ ಇದೆ. ಪಶ್ಚಿಮ ಪಾಕಿಸ್ತಾನದಿಂದ ಬಂದ ಜನರಲ್ಲಿ ಇದು ಹೆಚ್ಚಾಗಿ ಕಂಡುಬಂತು. ಇಲ್ಲಿಂದ ಪಾಕಿಸ್ತಾನಕ್ಕೆ ಹೋದ ಮುಸ್ಲಿಮರು ಹೆಚ್ಚಾಗಿ ಕಾರ್ಮಿಕರು; ಕೈ ಕೆಲಸದವರು ಆಗಿದ್ದು ಸಣ್ಣ ಆದಾಯದವರು ಆಗಿದ್ದರು. ಅಲ್ಲಿಂದ ಎತ್ತಿ ಬಂದವರು ಔದ್ಯಮಿಕ ಬಂಡವಲುದಾರ, ವ್ಯವಹಾರಸ್ಥ, ಅಂಗಡಿಕಾರ, ಕಾರಕೂನ, ಮುಂತಾದವರು ಆಗಿದ್ದರು. ಅವರ ಜೀವನಮಟ್ಟ ಹೆಚ್ಚಿನದು ಆಗಿದ್ದಿತು. ಪಾಕಿಸ್ತಾನದಿಂದ ಬಂದ ಸುಮಾರು ಇಪ್ಪತ್ತೈದು ಲಕ್ಷ ಜನರಿಗೆ ಪಟ್ಟಣಗಳಲ್ಲಿ ವಸತಿ ಬೇಕಾಗಿದ್ದಿತು. ಸರಕಾರದವರು ವಸತಿಯ ಸೌಕರ್ಯ ಏರ್ಪಾಡು ಮಾಡುವುದರಲ್ಲಿ ತೊಡಗಿ ೧೯೫೨ ರಷ್ಟರಲ್ಲಿ ೧೫೦,೦೦೦ ಮನೆಗಳನ್ನು ಕಟ್ಟಿದರು; ಇದಕ್ಕೆ ೩೮ ಕೋಟಿ ರೂಪಾಯಿ ವೆಚ್ಚವಾಯಿತು. ಮುಂದಿನ ಎರಡು ವರ್ಷಗಳಲ್ಲಿ ಇನ್ನೂ ೨೭ ಕೋಟಿ ರೂಪಾಯಿ ವೆಚ್ಚದಿಂದ ಇನ್ನೂ ೫೦,೦೦೦ ಮನೆಗಳನ್ನು ಕಟ್ಟುವ ವ್ಯವಸ್ಥೆ ಮಾಡಲಾಗಿದೆ. ಈ ಕಾರ್ಯಕ್ರಮ ಪೂರ್ತಿಯಾಗುವಾಗ ಸುಮಾರು ೦ ಲಕ್ಷ ನಿರ್ವಾಸಿತರಿಗೆ ವಸತಿ ಒದಗಿಸಿದಂತಾಗುವುದು. ೧೫ ಲಕ್ಷ ಜನರು ಈಗಾಗಲೇ ಬಿಟ್ಟು ಹೋಗಿದ್ದ ಮುಸ್ಲಿಮರ ಮನೆಗಳಲ್ಲಿ ವಾಸವಾಗಿದ್ದಾರೆ. ತಮ್ಮ ಸ್ವಂತಕ್ಕೆ ತಾವೇ ವ್ಯವಸ್ಥೆ ಮಾಡಿಕೊಂಡ ಜನತೆಯನ್ನು ಲಕ್ಷಿಸಿದರೆ, ಪಶ್ಚಿಮ ಪಾಕಿಸ್ತಾನದಿಂದ ಬಂದ ನಿರ್ವಾಸಿತರು ೧೯೫೩–೫೪ ರಷ್ಟರಲ್ಲಿ ಎಲ್ಲರಿಗೂ ವಸತಿಯ ಏರ್ಪಾಡು ಆದಂತಾಗುವುದು. ಹಾಗೆ ಹೊಸದಾಗಿ ಕಟ್ಟಲಾದ ವಸತಿಗಳು ಈಗಿದ್ದ ನಗರಗಳ ಉಪನಗರಗಳಾಗಿವೆ.

ಇವಲ್ಲದೆ ಬೇರೆ ಹತ್ತು ಪಟ್ಟಣಗಳ ನಿರ್ಮಾಣವೇ ಆಗಿದೆ: ಫರೀದಾಬಾದ, ನಿಲೋಖೇರಿ, ಚಂದಿಗಡ, ಇವು ಪಂಜಾಬದಲ್ಲಿ ರಾಜಪುರಾ, ತ್ರಿಪುರಿ, ಪೆಪ್ಸುವಿನಲ್ಲಿ ಸರದಾರನಗರ, ಉಲ್ಲಾಸನಗರ ಮುಂಬಯಿಯಲ್ಲಿ ಗಾಂಧಿಧಾಮ, ಕಚ್ಛದಲ್ಲಿ ಗೋವಿಂದಪುರಿ ಮತ್ತು ಹಸ್ತಿನಾಪುರ ಉತ್ತರ ಪ್ರದೇಶ

ರಾಜ್ಯದಲ್ಲಿ ಕಟ್ಟಲಾಗಿವೆ. ಇವು ೧೯೫೩–೫೪ರಲ್ಲಿ ಪೂರ್ತಿಯಾಗಿ ೪ ಲಕ್ಷ ಜನಕ್ಕೆ ವಸತಿ, ಉದ್ಯೋಗಗಳನ್ನು ಕಲ್ಪಿಸುತ್ತವೆ. ನೀಲೋಖೇರಿ ಮತ್ತು ಫರೀದಾಬಾದದಲ್ಲಿ ಸ್ವಯಂಸಹಾಯ–ಸಹಕಾರಿ ಪದ್ಧತಿಯ ಪ್ರಯೋಗಗಳು ನಡೆದು ಯಶಸ್ವಿಯಾಗಿವೆ. ಪಶ್ಚಿಮ ಪಾಕಿಸ್ತಾನದಿಂದ ಬಂದಿದ್ದವರಿಗಾಗಿ ೧೯೫೩–೫೪ರ ನಂತರ ಯಾವ ಕಟ್ಟಡಗಳ ರಚನೆ ಕಾರಣವಿಲ್ಲವೆಂದು ಕಂಡುಬರುತ್ತದೆ. ಕೈಯಲ್ಲಿದ್ದ ಚಿಕ್ಕ ಪುಟ್ಟ ಯೋಜನೆಗಳು ಪೂರ್ತಿಯಾಗಲು ಇನ್ನೂ ೪ ಕೋಟಿ ರೂಪಾಯಿ ಬೇಕು. ಪೂರ್ವವಲಯದಲ್ಲಿ ಪೂರ್ಣಿಯಾ ಮತ್ತು ಹಬ್ರಾಬೈಗಜಿಯಲ್ಲಿ ಎರಡು ಹೊಸ ಪಟ್ಟಣಗಳ ನಿರ್ಮಾಣವಾಗಿದೆ.

ನಿರ್ವಾಸಿತರಿಗೆ ನೌಕರಿ ಒದಗಿಸಿ ಕೊಡಲಾಗಿದೆ. ೧೯೫೨ರ ಮಧ್ಯದ ವರೆಗೆ ನೌಕರಿ ವಿನಿಮಯ ಶಾಖೆಯು ೧೬೦೦೦೦ ಪಶ್ಚಿಮ ಪಾಕಿಸ್ತಾನದ ನಿರ್ವಾಸಿತರಿಗೆ, ೩೧೦೦೦ ಪೂರ್ವ ಪಾಕಿಸ್ತಾನ ನಿರ್ವಾಸಿತರಿಗೆ ನೌಕರಿ ಒದಗಿಸಿದೆ. ಗೃಹಶಾಖೆಯಿಂದ ಮತ್ತು ರೈಲ್ವೆಯಿಂದ ಸುಮಾರು ೮೦೦೦೦ ನಿರ್ವಾಸಿತರಿಗೆ ನೌಕರಿ ಕೊಡಲಾಗಿದೆ. ೧೯೫೩ರ ಮಾರ್ಚದ ವರೆಗೆ ೬೦೦ ನಿರ್ವಾಸಿತ ಯುವಕರಿಗೆ ಧಂದೆಯ ಶಿಕ್ಷಣ ಕೊಡಲಾಯಿತು. ಮಾರ್ಚ ೧೯೫೩ರ ವರೆಗೆ ೧೫೮೦೦೦ ಪಶ್ಚಿಮ ಪಾಕಿಸ್ತಾನದ ನಿರ್ವಾಸಿತರಿಗೆ ೪೪೦೦೦ ಪೂರ್ವ ಪಾಕಿಸ್ತಾನ ನಿರ್ವಾಸಿತರಿಗೆ ಉದ್ಯೋಗ ಧಂದೆಗೆ ತಲಾ ೫೦೦೦ದ ವರೆಗೆ ಸಾಲಕೊಡಲಾಯಿತು.

ಮುದುಕರು, ಅಂಗಹೀನರು, ಅನಾಥ ಹೆಂಗಸರು, ಹುಡುಗರು ಆದ ೬೪೦೦೦ ಜನರಿಗೆ ಸರಕಾರವು ಸರಕಾರಿ ಸಂಸ್ಥೆಗಳಿಂದ, ಕಸ್ತೂರಬಾ ನಿಧಿಯಿಂದ ಸಹಾಯ ಸಲ್ಲಿಸಿದೆ.

ಮಾರ್ಚ ೧೯೫೩ರ ವರೆಗೆ ಸರಕಾರವು ಒಟ್ಟಿನಲ್ಲಿ ನಿರ್ವಾಸಿತರಿಗಾಗಿ ೯೦.೫೪ ಕೋಟಿ ರೂಪಾಯಿ ವೆಚ್ಚಮಾಡಿದೆ. ಮುಂದಿನ ಎರಡು ವರುಷಗಳಲ್ಲಿ ಕ್ರಮವಾಗಿ ೩೬.೮೭ ಕೋಟಿ, ೨೯.೧೪ ಕೋಟಿ ವೆಚ್ಚ ಮಾಡುವುದು. ಯೋಜನೆಯ ಕಾಲಾವಧಿ ಪೂರ್ತಿಯಾಗುವಷ್ಟರಲ್ಲಿ ನಿರ್ವಾಸಿತರ ಪುನರ್ನೆಲಸುವಿಕೆ ಪೂರ್ಣವಾಗಿ ಸರಕಾರದವರು ವೆಚ್ಚಮಾಡುವ ವಾರ್ಷಿಕ ಭಾರವು ತೀರ ಕಡಿಮೆಯಾಗುವುದು.

## ಉದ್ಯೋಗ ಕಲ್ಪಿಸುವುದು:

ಸಶಕ್ತರೂ ದುಡಿಯಲು ಮನಸ್ಸಿದ್ದವರೂ ಆದವರಿಗೆ ಉದ್ಯೋಗ ಕಲ್ಪಿಸುವುದು ಪ್ರತಿಯೊಂದು ದೇಶದಲ್ಲಿಯ ಒಂದು ಸಮಸ್ಯೆಯು. ಭಾರತದಂತಹ ಹಿಂದುಳಿದ ದೇಶದಲ್ಲಿ ನಿರುದ್ಯೋಗಿತೆಗೆ ಕಾರಣ ಭೂಮಿಯ ಕೊರತೆ, ಬಂಡವಲು ಉಪಕರಣಗಳ ಅಭಾವ, ಇತರ ಸಾಂಪತ್ತಿಕ ಸಾಮಗ್ರಿಯ ಕೊರತೆ. ಸರಕುಗಳ ಉತ್ಪಾದನೆಯಲ್ಲಿಯ ಕೊರತೆ, ನಿರುದ್ಯೋಗಿತೆಯ ಅಸ್ತಿತ್ವ, ಇವು ಹೊಂದಲಾರದ ಸಂಗತಿಗಳೆಂದು ಅನಿಸಬಹುದು. ಹೆಚ್ಚಾಗಿದ್ದ ಶ್ರಮಿಕರ ಸದುಪಯೋಗ ಮಾಡಿಕೊಂಡು ಸರಕುಗಳ ಉತ್ಪಾದನೆ ಹೆಚ್ಚಿಸುವುದು ಹೇಗೆ ಎಂಬುದೆ ನಮ್ಮ ದೇಶದ ಸಮಸ್ಯೆ. ನಿರುದ್ಯೋಗಿತೆಯ ಬಗ್ಗೆ ವ್ಯಾಪಕವಾದ ವಿವರಗಳುಳ್ಳ ಅಂಕಿಸಂಖ್ಯೆಗಳು ಉಪಲಬ್ಧವಿಲ್ಲದಿದ್ದರೂ ದೊರೆತ ಮಾಹಿತಿಯಿಂದ ಕಾರಕೂನರು, ಕೌಶಲರಹಿತ ಕಾರ್ಮಿಕರು ಇವರಲ್ಲಿ ನಿರುದ್ಯೋಗಿತೆ ಹೆಚ್ಚಾಗಿದೆ ಎಂದು ಕಂಡುಬಂದಿದೆ. ಬೆಳೆಯುತ್ತಿರುವ ಜನಸಂಖ್ಯೆಯೂ ಈ ಸಮಸ್ಯೆಗೆ ಕಾರಣ; ಗ್ರಾಮ ಕೈಗಾರಿಕೆಗಳು ಕಮರಿದುದು, ಕೃಷಿಕವಲ್ಲದ ಉದ್ಯಮಗಳ ಬೆಳೆಗೆಯಾಗದಿರುವುದು, ನಿರ್ವಾಸಿತರು, ಇವೆಲ್ಲವೂ ನಿರುದ್ಯೋಗಿತೆಗೆ ಪೋಷಕವಾಗಿವೆ.

ಗ್ರಾಮಗಳಲ್ಲಿ ಉದ್ಯೋಗ ಕಲ್ಪಿಸುವುದು ಈ ಯೋಜನೆಯ ಒಂದು ಉದ್ದೇಶವಾಗಿದೆ. ಹಿರಿ-ಕಿರಿ ನೀರಾವರಿ ಕಾರ್ಯಗಳು, ಬೀಳುಬಿದ್ದ ಭೂಮಿಯನ್ನು ಮರಳಿ ಪಡೆವುದು, ಗ್ರಾಮ ಕೈಗಾರಿಕೆ, ಗುಡಿ ಕೈಗಾರಿಕೆಗಳನ್ನು ಪುನರುಜ್ಜೀವಿಸುವುದು, ಇವು ಗ್ರಾಮಾಂತರಗಳಲ್ಲಿ ಉದ್ಯೋಗ ಕಲ್ಪಿಸಲು ಸಹಾಯಕವಾಗಿವೆ. ಪಟ್ಟಣಗಳಲ್ಲಿಯ ನಿರುದ್ಯೋಗಿತೆ, ಅರ್ಧೋದ್ಯೋಗಿತೆಯ ಸಮಸ್ಯೆಯೂ ತೀವ್ರವಾಗಿದೆ. ಭೂಮಿಯ ಮೇಲೆ ಹೆಚ್ಚು ಒತ್ತಡ ಬೀಳ ಹತ್ತಿದ ಹಾಗೆ ಜನ ನೌಕರಿಗಾಗಿ ಪಟ್ಟಣಗಳಿಗೆ ಬರುವರು. ಕೌಶಲರಹಿತ ಕೆಲಸ, ಮನೆಗೆಲಸಗಳಿಗೆ ತೀವ್ರ ಸ್ಪರ್ಧೆಯಿದೆ. ಇಲ್ಲಿ ದೊರೆವ ಕೂಲಿ ತೀರ ಕಡಿಮೆ. ಇದ್ದ ದೊಡ್ಡ ಉದ್ಯಮಗಳ ವಿಕಾಸ, ಹೊಸ ಉದ್ಯಮಗಳ ಪ್ರಾರಂಭ ಇದರಿಂದಲೇ ಈ ಸಮಸ್ಯೆಯ ಪರಿಹಾರವಾಗಬೇಕು. ಕಿರಿ ಉದ್ಯಮಗಳ ವಿಕಾಸದ ಬಗ್ಗೆಯೂ ಯೋಜನೆಯಲ್ಲಿ ಆಸ್ಪದ ಕಲ್ಪಿಸಲಾಗಿದೆ.

ಯೋಜನೆಯಿಂದ ಎಷ್ಟು ಪ್ರಮಾಣದಲ್ಲಿ ಉದ್ಯೋಗವು ಹೆಚ್ಚಾಗುವುದು ಎಂಬುದನ್ನು ಇದರಿಂದ ನೋಡಬಹುದು:

| | | |
|---|---|---|
| ೧ | ಸಣ್ಣ ದೊಡ್ಡ ಉದ್ಯಮಗಳು | ೪ ಲಕ್ಷ ಜನರಿಗೆ |
| ೨ | ಹಿರಿ ನೀರಾವರಿ ವಿದ್ಯುತ್ ಯೋಜನೆಗಳು | ೨.೫ ಲಕ್ಷ ಜನರಿಗೆ |
| ೩ | ಒಕ್ಕಲುತನ | |
| | i) ನೀರಾವರಿ ಪ್ರದೇಶದಿಂದ | ೧೪ ಲಕ್ಷ |
| | ii) ಕೆರೆ ದುರಸ್ತಿ | ೧.೫ ಲಕ್ಷ |
| | iii) ಬೀಳು ಭೂಮಿ ಪಡೆವುದರಿಂದ | ೭.೫ ಲಕ್ಷ |
| ೪ | ಕಟ್ಟಡ | ೧ ಲಕ್ಷ |
| ೫ | ಮಾರ್ಗಗಳು | ೨ ಲಕ್ಷ |
| ೬ | ಗುಡಿಕೈಗಾರಿಕೆ | ೨೦+೩೬ ಲಕ್ಷ ಜನರಿಗೆ ಪೂರ್ಣ ಉದ್ಯೋಗ ದೊರೆವುದು. |
| ೭ | ಸಾರಿಗೆ ಮುಂತಾದ ಸೇವೆ | ಹೆಚ್ಚು ಉದ್ಯೋಗ ದೊರೆವುದು ಆದರೆ ಅಂದಾಜು ಸಾಧ್ಯವಾಗಿಲ್ಲ. |

ಯುದ್ಧಜನ್ಯ ಪರಿಸ್ಥಿತಿಯ ಮೂಲಕ, ಕಲಿತವರಿಗೆ ಉದ್ಯೋಗ ದೊರೆಯಿತು. ಆದರೆ ಯುದ್ಧಾನಂತರ ಪರಿಸ್ಥಿತಿ ಕೆಟ್ಟಿತು. ಉದ್ಯಮಗಳ ವಿಕಾಸವಾದಂತೆ ಈ ಜನರಿಗೆ ಹೆಚ್ಚು ಉದ್ಯೋಗ ದೊರೆವುದು. ಕಲಿತವರು ಸ್ವತಂತ್ರ ವ್ಯವಹಾರದಲ್ಲಿಯೂ ತೊಡಗಬೇಕು. ೫೦೦ ರಿಂದ ೫೦೦೦ ಬಂಡವಲಿನ ಉದ್ಯಮಗಳ ಪಟ್ಟಿಯನ್ನು ಸರಕಾರವು ತಯಾರಿಸುವುದು. ಉತ್ಸಾಹಿಗಳಿಗೆ ಬಂಡವಲು ಸಾಲವನ್ನು ಕೊಡುವುದು. ಇದರಿಂದ ಇಂದು ಬೃಹದಾಕಾರ ತಾಳಿರುವ ಈ ಸಮಸ್ಯೆಯು ತನ್ನ ತೀವ್ರತೆಯನ್ನು ಕಳೆದುಕೊಳ್ಳಬಹುದೆಂದು ಆಶಿಸಲಾಗಿದೆ.

ಪ್ರಕರಣ ಹದಿನಾಲ್ಕು

# ಸಮಾಲೋಚನೆ

ಇದು ಭಾರತದ ಪ್ರಥಮ ಪಂಚವಾರ್ಷಿಕ ಯೋಜನೆಯೆಂಬುದನ್ನು ಮರೆಯಲಾಗದು. ಭಾರತವು ಸ್ವತಂತ್ರವಾದಂದಿನಿಂದ ಈಚೆಗೆ ಅದು ಎದುರಿಸಬೇಕಾದ ಪ್ರಸಂಗಗಳನ್ನು ಮತ್ತು ಪರಿಹಾರ ಒದಗಿಸಿದ ರೀತಿಯನ್ನು ನೋಡಿ ಈ ಪಂಚವಾರ್ಷಿಕ ಯೋಜನೆಯ ಗುಣದೋಷಗಳ ಬಗ್ಗೆ ಚರ್ಚಿಸಬೇಕು-ವಿಮರ್ಶೆ ಮಾಡಬೇಕು. ವಿಶಾಲವಾದ ದೇಶ, ಮಿತಿಮೀರಿದ ಜನಸಂಖ್ಯೆ, ನಿರಕ್ಷರಿಗಳ ನಾಡು; ಸಂಪ್ರದಾಯ ಭಾವಿಕತನದ ಬೀಡು. ನೂರೈವತ್ತು ವರ್ಷಗಳ ವರೆಗೆ ಪರಾಡಳಿತದಿಂದ ಶೋಷಿತ ರಾಷ್ಟ್ರ. ಸಂಖ್ಯಾಬಲ ಸಂಪತ್ ಸಾಮಗ್ರಿಗಳ ಬಲವೇ ಬಲ; ಉಳಿದ ಎಲ್ಲ ದೃಷ್ಟಿಯಿಂದಲೂ ಹಿಂದುಳಿದ ದೇಶ; ಪ್ರಜಾಪ್ರಭುತ್ವದ ಪದ್ಧತಿಯನ್ನು ಅಂಗೀಕರಿಸಿದ ರಾಷ್ಟ್ರ. ಈ ವಿಶೇಷ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಭಾರತವು ಪಂಚವಾರ್ಷಿಕ ಯೋಜನೆ ರಚಿಸಿತು.

ಯೋಜನೆಯು ಒಂದು ಹಂಚಿಕೆ. ಕಾರ್ಯದ ಯಶಸ್ಸು ಈ ಹಂಚಿಕೆಯನ್ನು ಅವಲಂಬಿಸಿರುವಾಗ, ಕಾರ್ಯ ಮಾಡುತ್ತಲಿರುವಾಗ ಮಾರ್ಪಾಟು ಮಾಡಿಕೊಳ್ಳುವ ಅನುಕೂಲವಿರುವುದರಿಂದ ಯೋಜನೆಯ ಯಶಸ್ಸು ಕಾರ್ಯಕರ್ತರ ಮೇಲೆಯೆ ಹೆಚ್ಚಾಗಿ ಅವಲಂಬಿಸಿರುವುದು. ಪ್ರಜಾಪ್ರಭುತ್ವದ ಪದ್ಧತಿ ಇರುವುದರಿಂದ ಸರಕಾರದ ಆಡಳಿತವರ್ಗದವರಲ್ಲದೆ, ಸಾಮಾಜಿಕರ ಸಹಕಾರವೂ ಕೂಡ ಅವಶ್ಯ. ಎರಡೂ ಕಡೆಯಿಂದ ದೇಶದ ಹಿತದ ದೃಷ್ಟಿಯನ್ನಿಟ್ಟುಕೊಂಡು ಕಾರ್ಯ ಮಾಡುವಂತಾದರೆ, ಯೋಜನೆಯು ಅಪೇಕ್ಷಿಸಿದ ಕಿಂತಲೂ ಹೆಚ್ಚಿನ ಪ್ರತಿಫಲವೇ ಒದಗಿಬರುವದು. ಆದರೆ, ದೇಶ ನಮ್ಮದು; ಸರಕಾರ ನಮ್ಮದು; ರಾಷ್ಟ್ರ ನಮ್ಮದು; ಸರಕಾರ ಮಾಡುವುದು ರಾಷ್ಟ್ರದ ಹಿತಕ್ಕಾಗಿ ಎಂದು ಜನಸಾಮಾನ್ಯರಲ್ಲಿ ಭಾವನೆಯು ಜಾಗರೂಕವಾಗದ

ಹೊರತು, ಉತ್ಸಾಹ ಶಕ್ತಿ-ತ್ರಾಣವಿಲ್ಲದೆ ಕಾರ್ಯವಾಗದು. ಆಳರಸರ ಅಧಿರಾಯತನದಲ್ಲಿ ಬೆಳೆದು ಮರಗಟ್ಟಿದ ಮನಸ್ಥಿತಿ ಒಂದೆಡೆ; ಸರಕಾರವೇ ಎಲ್ಲ ಕಾರ್ಯಗಳನ್ನು ಮಾಡಲಿ, ಎಂಬ ಭಾವನೆ ಇನ್ನೊಂದೆಡೆ. ಈ ಮನಸ್ಥಿತಿ ಭಾವನೆಗಳು ಬದಲಾಗುವ ಹಾಗೆ ಸಾಕಷ್ಟು ಪ್ರಚಾರ-ಶಿಕ್ಷಣವಾಗಲಿಲ್ಲವೇನೋ ಎಂದೆನ್ನಿಸುವುದು. ಸ್ವಾತಂತ್ರ್ಯದ ನಂತರ ಆಗಬೇಕಾಗಿದ್ದ ರಾಷ್ಟ್ರೀಯ ಭಾವನೆಯ ವಿಶಿಷ್ಟ ಜಾಗ್ರತಿ ಆಗಲಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಹೋರಾಟದ ದೃಷ್ಟಿಯಿದ್ದಿತು. ಈಗಿನದು ವಿಧಾಯಕ ದೃಷ್ಟಿಯಲ್ಲಿ ಮಾರ್ಪಡಬೇಕಾಗಿದೆ. ಸಾಮಾನ್ಯ ನಾಗರಿಕನು ತಾನು ಒಂದು ಸ್ವತಂತ್ರದೇಶದ ನಾಗರಿಕನು ಎಂಬ ಭಾವನೋದ್ದೀಪಿತನು ಮಾತ್ರ ಇನ್ನೂ ಆಗಿಲ್ಲ. ಈ ಭಾವನೋದ್ದೀಪನೆ ಎಷ್ಟು ಕಾಲ ವಿಲಂಬವಾಗುವುದೋ ಅಷ್ಟುಮಟ್ಟಿಗೆ ಇಂತಹ ಯೋಜನೆಗಳಲ್ಲಿಯ ಸಾರ್ವಜನಿಕ ಸಹಕಾರಾವಲಂಬಿತ ಕಾರ್ಯಗಳ ಅಪೇಕ್ಷಿತ ಪ್ರಗತಿ-ಪ್ರತಿಫಲ ದೊರಕಲಾರವು.

ಆದರೆ ಅದರಿಂದ ನಿರಾಶರಾಗಬೇಕಾಗಿಲ್ಲ. ಯೋಜನೆಯಲ್ಲಿ ವೈಗುಣ್ಯಗಳು ಅನೇಕವಿವೆಯೆಂದು ದೂರುತ್ತ ಕೂಡ್ರಬೇಕಾಗಿಲ್ಲ. ಅವರಲ್ಲಿ ಗುಣಗಳೂ ಇವೆಯೆಲ್ಲ! ಯೋಜನೆಯು ರಚಿತವಾಗದಿದ್ದರೆ ವೈಗುಣ್ಯಗಳು ಇಲ್ಲದಾಗುವುದರ ಜತೆಗೆ ಗುಣಗಳೂ ಹೋಗಿ ಇದ್ದ ಸ್ಥಿತಿ ಹದಗೆಟ್ಟು, ಹೋಗುತಿದ್ದಿತಲ್ಲ! ಈಗ ಪರಿಸ್ಥಿತಿಯು ಹದಗೆಡುವ ಮಾತಂತೂ ಇಲ್ಲವೇ ಇಲ್ಲ; ಪರಿಸ್ಥಿತಿಯು ಸುಧಾರಿಸುತ್ತ ಹೋಗುವ ನಿಚ್ಚಳ ಭರವಸೆಯಿದೆ. ನಿಶ್ಚಿತ ಮತ್ತು ಅಪೇಕ್ಷಿತ ಫಲ ದೊರೆಯಬೇಕೆಂದು ಬಯಸುವವರು ಸರಕಾರದ ಕಾರ್ಯದಲ್ಲಿ ಮನಮುಟ್ಟಿ ಸಹಕಾರ ಒದವಿಸುವ ಏರ್ಪಾಡು ಮಾಡಬೇಕು. ಪ್ರಜಾ ಪ್ರಭುತ್ವದಲ್ಲಿ ಹಕ್ಕುಗಳ ಸೊಕ್ಕಿನಕಿಂತ ಕರ್ತವ್ಯದ ಹೊಣೆಗಾರಿಕೆಯೆ ಹೆಚ್ಚಾಗಿರುವುದೆಂಬುದನ್ನು ಮನದಂದು ಕಾರ್ಯಪ್ರವೃತ್ತರಾಗಬೇಕು. ಸರಕಾರದ ಕರ್ತವ್ಯ ಏನು ಎಂದು ಸರಕಾರದ ಕಣ್ಣಲ್ಲಿ ಬಟ್ಟು ತಿವಿಯುವ ಮೊದಲು ನಮ್ಮ ಕರ್ತವ್ಯವನ್ನು ನಾವು ಪಾಲಿಸಿದ್ದೇವೆಯೆ ಎಂಬ ಪ್ರಶ್ನೆಗೆ ಪ್ರತಿಯೊಬ್ಬ ನಾಗರಿಕನೂ ಉತ್ತರ ಕೊಡಬೇಕು. ಈ ಉತ್ತರದ ಮೇಲೆ ದೇಶದ ಉತ್ತರೋತ್ತರ ಅಭಿವೃದ್ಧಿ ಅವಲಂಬಿಸಿರುವುದು.

ಯೋಜನೆಯಿಂದ ನೂರಕ್ಕೆ ನೂರು ಯಶಸ್ಸು ಬರುವುದಿಲ್ಲೆಂದು ತಿಳಿಯೋಣ. ಉಂಟಾದ ಯಶಸ್ಸಿನಿಂದ ಬರುವ ಪ್ರತಿಫಲವನ್ನು ಬೇಡೆನ್ನುವವರು ಯಾರಾದರೂ ಇರಬಹುದೆ? ನೀರಾವರಿ-ವಿದ್ಯುತ್ ಯೋಜನೆಗಳು ಪೂರ್ತಿಯಾಗುವ ಹೊತ್ತಿಗೆ ಅದರಿಂದ ಉಂಟಾಗುವ ಒಕ್ಕಲುತನ ಮತ್ತು ಔದ್ಯೋಗಿಕ ಉತ್ಪಾದನೆಯು ಹೆಚ್ಚಳದ ಲಾಭವು ದೇಶಕ್ಕೆ ಆಗತೊಡಗುವುದು. ವಿಸ್ತೃತ ಒಕ್ಕಲುತನ ಕ್ಷೇತ್ರ, ತೀವ್ರತಮ ಪದ್ಧತಿಗಳು, ಯಾಂತ್ರಿಕ ಸಲಕರಣೆಗಳು, ಗೊಬ್ಬರ, ಸುಧಾರಿಸಿದ ಬೀಜ, ಮುಂತಾನವುಗಳಿಂದ ಉತ್ಪಾದನೆ ಹೆಚ್ಚದೆ ಏನು ಮಾಡೀತು? ಗ್ರಾಮಜೀವನದಲ್ಲಿ ಒಕ್ಕಲುತನದ ಸುಧಾರಣೆಯಿಂದ ಉಂಟಾಗುವ ನವಚೇತನದ ವಾತಾವರಣದಲ್ಲಿ. ಗ್ರಾಮಕೈಗಾರಿಕೆಗಳು, ಕಿರಿ ಉದ್ಯಮಗಳು ಬೆಳೆದು ಗ್ರಾಮದ ಸಂಪತ್ತಿ ಬೆಳೆಯುವುದಿಲ್ಲವೆ? ಹಿಂದಿನ ಕಾಲದ ಗ್ರಾಮದ ಸ್ವಾಯತ್ತತೆಯು ಗ್ರಾಮ ಪಂಚಾಯತಿಗಳ ಮುಖಾಂತರ ಮತ್ತೆ ಲಭಿಸಿ ಸಮೃದ್ಧ ಗ್ರಾಮಜೀವನ ರೂಪಿತವಾಗಲಾರದೆ? ಗ್ರಾಮಗಳ ಅಭಿವೃದ್ಧಿಯಾದ ಹಾಗೆಲ್ಲ ಪಟ್ಟಣಗಳ ಪೋಷಣೆ ಸರಿಯಾಗಿ ಆಗುವುದು. ಒಕ್ಕಲುತನ ಮತ್ತು ಉದ್ಯಮಗಳು ಕುದುರಿಕೊಂಡು ಗಾಮಗಳು ಮತ್ತು ಪಟ್ಟಣಗಳು ಬೆಳೆಯುತ್ತಿರುವಾಗ ದೇಶದ, ನಾಗರಿಕರ ಜೀವನಮಟ್ಟ ಹೆಚ್ಚದಿದ್ದೀತೆ? ಹೆಚ್ಚಿದ ಜೀವನಮಟ್ಟಕ್ಕೆ ತಕ್ಕಂತೆ, ಸಾಂಸ್ಕೃತಿಕ ಪೋಷಣೆ, ಸಮಾಜಕಲ್ಯಾಣ ಕಾರ್ಯಗಳು ಹೊಸ ರೂಪ ಪಡೆದು ಜೀವನವಿಕಾಸದಲ್ಲಿ ಪ್ರಗತಿಯಾಗುವುದಿಲ್ಲವೆ? ಈ ಬಗೆಯ ಸುಧಾರಿಸಿದ ಜೀವನ ಒದಗಿಬರಲು ಯಾವ ಬಗೆಯ ಶಾಶ್ವತ ತಳಹದಿ ಹಾಕಬೇಕಾಗಿತ್ತೋ ಆ ಬಗೆಯ ಭದ್ರವಾದ ತಳಹದಿ ಭಾರತದ ಆರ್ಥಿಕರಂಗದಲ್ಲಿ ಈ ಪ್ರಥಮ ಪಂಚವಾರ್ಷಿಕ ಯೋಜನೆಯಿಂದ ಹಾಕಲ್ಪಟ್ಟಿದೆ. ತಳಹದಿಯಲ್ಲಿ ಮಾಡಿದ ಕಾರ್ಯ ಕಟ್ಟಡವನ್ನೇ ಕಣ್ಮುಂದಿಟ್ಟುಕೊಂಡವರಿಗೆ ಕಾಣದು. ಆದರೆ ತಳಹದಿ ಇಲ್ಲದೆ ಭದ್ರವಾದ ಕಟ್ಟಡ ಹೇಗೆ ಕಟ್ಟಲಾದೀತು? ಮುಂದಿನ ಯೋಜನೆಗಳಿಗೆ ಭದ್ರ ತಳಹದಿ ಒದಗಿಸುವ ಕಾರ್ಯವನ್ನು ಈ ಯೋಜನೆ ಮಾಡಬೇಕಾಗಿ ಬಂದಿರುವುದರಿಂದ ಪಾರಿಣಾಮಿಕ ಪ್ರತಿಫಲದ ಗಾತ್ರ–ಗಾಂಭೀರ್ಯ–ವೈಭವಗಳು ಈ ಯೋಜನೆಯು ಕಾಲಾವಧಿ ಮುಗಿದಾಗ ಎದ್ದುಕಾಣದಿದ್ದರೆ ಮಿಡುಕಲೇಬೇಕಾಗಿಲ್ಲ.

ಭಾರತದ ಭವಿಷ್ಯತ್ ಜೀವನದ ಬೆಳಗಿಗೆ ಈ ಯೋಜನೆಯು ಒಳ್ಳೆಯ ಬುನಾದಿಯಾಗಿದೆ. ಭಾರತದ ಜೀವನವು ಸಚೇತನವಾಗಲಿದೆ; ಸಾಮಾಜಿಕ ಪಡಿಪದರುಗಳಲ್ಲಿಯ ಹಳೆಯ ಕೊಳೆ ಹೊರಗೆಹೋಗಿ ನವಜೀವನ ಕೊನರಲಿದೆ. ಈ ಯೋಜನೆಯ ಕಾಲಾವಧಿಯಲ್ಲಿ ಕೊಳೆ ತೆಗೆವುದೂ ಕಳೆ ತರುವುದೂ ಎರಡು ಕಾರ್ಯ ಸಮಕಾಲೀನವಾಗಿರುವುವು. ಇದರಿಂದ ಎಂದಿಲ್ಲದ ತೊಡಕುಗಳೂ ಉದ್ಭವಿಸುವುವು. ಭೂಸುಧಾರಣೆಯು ಮಹತ್ವದ ಉದಾಹರಣೆಯಾಗಿದೆ. ಭೂಒಡೆಯರು ಪೂರ್ವಾರ್ಜಿತ ಸೊತ್ತೆಂದು ಅದರ ಮೇಲೆ ಕೈಯೂರಿ, ಹಳ್ಳಿ-ಯಿಂದ ತಳಕಿತ್ತಿ ಪಟ್ಟಣ ಸೇರಿ ವಿಹಾರಾದಿಗೆ ಬಲಿಯಾಗಿ, ಹೊಲಗಳನು ಹಾಳು ಮಾಡಿ ರೈತರನ್ನು ಹಿಂಡಿದ್ದರು; ಭೂಮಿಯು ಫಲಹೀನವಾಗಿದ್ದಿತು. ತನ್ಮೂಲಕ ದೇಶವು ಬಡವಾಗತೊಡಗಿದ್ದಿತು. ಇದನ್ನು ತಡೆಯಲಾಗಿದೆ. ದುಡಿದವರಿಗೆ ದುಡಿತದ ಫಲ ದೊರೆಯಬೇಕು ಎಂಬ ತತ್ವದ ಹಿನ್ನೆಲೆಯಲ್ಲಿ ಭೂಸುಧಾರಣೆ ನಡೆದಿದೆ. ಭೂಮಿಯು ಅದರ ಆವಶ್ಯಕವಿದ್ದವರಿಗೆ ಮಾತ್ರ ಭೂಮಿ, ಅದರ ಬೇಕಾಗಿದ್ದವರಿಗೆ ಭೂಮಿ. ಕೇವಲ ಒಡೆತನದ ಅಧಿಕಾರ ಬೇಕಾಗಿದ್ದವರಿಗೆ ಭೂ ಒಡೆತನ ಸಲ್ಲದು ಎಂಬುದು ಇದರಲ್ಲಿಯ ಧ್ವನಿ. ಈ ಸುಧಾರಣೆಯು ರಾಷ್ಟ್ರದ ಹಿತದ ದೃಷ್ಟಿಯಿಂದ ಒಳಿತೇನೋ ಸರಿ. ಆದರೆ, ಈ ಪರಿಸ್ಥಿತಿಯಿಂದ ಅಪೇಕ್ಷಿತ ಕಾರ್ಯ ಸಾಧಿಸುವ ಬಗ್ಗೆ ಜಾಗರೂಕತೆ ವಹಿಸಬೇಕಾಗಿದೆ. ಒಬ್ಬನ ಕೈಯಿಂದ ಕಸಿದುಕೊಂಡು ಇನ್ನೊಬ್ಬನ ಕೈಗೆ ಕೊಡುವಾಗ, ಆಯತ್ತವಾಗಿ ಬಂದಿತೆಂದು ಅವನು ಅದರ ಬಗ್ಗೆ ಅನಾಸ್ಥೆ ತಾಳುವಂತಾದರೆ, ಈ ಸುಧಾರಣೆಯಿಂದ ಹೆಚ್ಚಿನ ಹಾನಿಯೇ ಆಗುವುದು. ಭೂಒಡೆಯರ ಅನಾಸ್ಥೆಯೇ ಈ ಸುಧಾರಣೆಗೆ ಮೂಲ ಕಾರಣವೆಂಬುದನ್ನು ಅರಿತಾಗ ಕೇವಲ ಹಸ್ತಾಂತರವಾಯಿತೆಂದಾಗದೆ ಈ ಅನಾಸ್ಥೆಯು ಇಲ್ಲದಂತೆ ಆಯಿತು ಎಂಬ ಸ್ಥಿತಿಗೆ ಬರುವ ಹಾಗೆ ಸರಕಾರವು– ಹಸ್ತಾಂತರದ ಸಾಹಸ ಕಾರ್ಯವನ್ನು ಮಾಡಿದ ಸರಕಾರವು– ತನ್ನ ಸತ್ತಾಧಿಕಾರವನ್ನು ಉಪ-ಯೋಗಿಸಿ ಕೂಡ ಕ್ರಮ ಕೈಕೊಳ್ಳಬೇಕು. ಇದೇ ಮಾತು ಭೂಮಿಯಿಲ್ಲದ ದುಡಿಮೆಯಾಳುಗಳಿಗೆ ಭೂಮಿ ಕೊಡುವಾಗ ಲಕ್ಷಿಸಬೇಕು. ಯಾವುದೊಂದು ವಿಶಿಷ್ಟ ಭೂಮಿಯಲ್ಲಿ ವಿಶಿಷ್ಟ ಪ್ರಮಾಣದ ಬೆಳೆ ಬರಬೇಕೆಂದು

ನಿರ್ಧರಿಸಬೇಕು. ಆಲಕ್ಷ್ಯದಿಂದ ಆ ಪ್ರಮಾಣಕ್ಕೆ ಕಡಿಮೆಯಾದರೆ ಅವರಿಗೆ ದಂಡನೆಯಾಗಬೇಕು. ಈ ತರಹದ ಹೆದರಿಕೆ ಬೆದರಿಕೆ ಹಾಕುವುದು ತರವಲ್ಲವೆಂದು ಯಾರೂ ಹೇಳಬಹುದು. ಆದರೆ ಭೂಸುಧಾರಣೆ ಮಾಡುವಾಗ ದೇಶದ ಹಿತವನ್ನೇ ಕಣ್ಣು ಮುಂದಿಟ್ಟುಕೊಂಡಿರುವಾಗ, ಯಾರಿಗೂ ಸೊಪ್ಪು ಹಾಕದಿರುವಾಗ, ಆ ಕಾರ್ಯ ಯಶಸ್ವಿಯಾಗಿ ಚಿರವಾಗಿ ಬಾಳುವಂತೆ ಮಾಡಲು ಸಾಮ ದಾನ ದಂಡ ಭೇದೋಪಾಯಗಳನ್ನು ಅನುಸರಿಸಿದರೆ ಯಾವ ತಪ್ಪೂ ಇಲ್ಲ.

ಒಕ್ಕಲುತನದಲ್ಲಿಯ ಪ್ರಗತಿ, ಭೂಸುಧಾರಣೆಯ ಸ್ಥಿತಿಗಳು, ಕೈಗಾರಿಕೆಗಳ ಅಭಿವೃದ್ಧಿ, ಆರ್ಥಿಕ ವೃಷ್ಟಿಯಿಂದ ಗ್ರಾಮಗಳನ್ನು ಬಲಪಡಿಸುತ್ತವೆ ಹಳ್ಳಿಗಳಲ್ಲಿ ಸಂಪತ್ತು ಹೆಚ್ಚುತ್ತದೆ ಸಂಪತ್ತು ಹೆಚ್ಚುವುದು ಒಳ್ಳೆಯ ಲಕ್ಷಣ. ಆದರೆ ಹೆಚ್ಚಾದ ಸಂಪತ್ತಿನ ಉಪಯೋಗ ಹೇಗೆ ಆಗಬೇಕು ಎಂಬುದರ ಬಗ್ಗೆ ಎಚ್ಚರ ವಹಿಸುವುದು ಅಗತ್ಯವೆನ್ನಿಸುವುದು. ಹಳ್ಳಿಗರ ಈಗಿದ್ದ ಮನಸ್ಥಿತಿ, ಸಾಂಸ್ಕೃತಿಕ ಸಾಮಾಜಿಕ ಸ್ಥಿತಿಗಳು ಹಾಗೆಯೆ ಉಳಿಯುವಂತಾದರೆ ಅವರ ಕೈಯಲ್ಲಿ ಬಂದ ಹೆಚ್ಚಿನ ಹಣವು ಸದ್ವಿನಿಯೋಗವಾಗುವ ಬದಲು ಘಾತುಕ ಪ್ರವೃತ್ತಿಯ ಪೋಷಣೆಗೆ ಉಪಯೋಗವಾಗಿ ಅಪರಾಧೀ ಮನೋವೃತ್ತಿ ಉಂಟಾಗಬಹುದೆಂದು ತೋರುತ್ತದೆ. ಯುದ್ಧದ ಮೂಲಕ, ರಾಷ್ಟ್ರದ ವಿಭಜನೆಯ ಮೂಲಕ ಉಂಟಾದ ಆಹಾರದ ಕೊರತೆಯ ದುರ್ಲಾಭದಿಂದ ಹಳ್ಳಿಗರಲ್ಲಿ ಹಣ ಹೆಚ್ಚಿಗೆ ಕೂಡತೊಡಗಿದ್ದುದರ ಪರಿಣಾಮ ಈಗಾಗಲೇ ಕೈ ತೋರಿದೆ. ಗ್ರಾಮಪಂಚಾಯತಿಗಳ, ಪ್ರಜಾಪ್ರಭುತ್ವದ ಪದ್ಧತಿಯ ಮೇರೆಗೆ ಅಯ್ಕೆಯಿಂದ ರಚಿತವಾಗಬೇಕೆಂದು ಸಾರಿದ್ದು ತಾತ್ವಿಕವಾಗಿ ಒಳ್ಳೆಯದಾದರೂ ವ್ಯಾವಹಾರಿಕವಾಗಿ ನೋಡಿದರೆ ಅದು ವ್ಯಾಜ್ಯಗಳ, ಪಕ್ಷಪಂಗಡಗಳ ಬೆಳಿಗೆಗೆ ತವರಾಗಿದೆಯೆಂದು ಕಂಡುಬರತೊಡಗಿದೆ. ಈ ಬಗೆಯಾಗಿ ಮನಸ್ಸು ಹರಿದಾಡುವಾಗ ಹತ್ತಿರ ಸಂಪತ್ತು ಹೆಚ್ಚಾದರೆ, ಅದೂ ಕೂಡ ಈ ವ್ಯಾಜ್ಯಗಳಲ್ಲಿ ಪಕ್ಷಗಳ ಹೋರಾಟದಲ್ಲಿ ವ್ಯಯವಾಗುವುದೆಂದು ಅನ್ನಿಸುತ್ತದೆ. ಅದಕ್ಕಾಗಿ ಎಚ್ಚರ ವಹಿಸಬೇಕು. ಆರ್ಥಿಕ ಸ್ಥಿತಿಯ ಸುಧಾರಣೆಯ ಜತೆಗೆ ಸಾಂಸ್ಕೃತಿಕ ವಿಕಾಸವೂ ಆದರೆ ಜೀವನವಿಕಾಸಕ್ಕೆ ಎಡೆಯಾಗುವುದು. ಇಲ್ಲದಿದ್ದರೆ ಅಜ್ಜ ನೂತದ್ದು ಮೊಮ್ಮಗನ ಉಡಿ-

ದಾರಕ್ಕೆಂದು ಕುಲ್ಲಕ ಕಾರಣಗಳಿಗಾಗಿ ಹಾಳಾಗಿ ಸಾಮಾಜಿಕ ನೆಮ್ಮದಿಯೂ ಹದಗೆಟ್ಟು ಹೋಗುವುದು.

ಪಂಚವಾರ್ಷಿಕ ಯೋಜನೆಯಿಂದ ಜೀವನಮಟ್ಟವೇರುವುದು. ನಿಜ. ಜೀವನ ಮಟ್ಟ ಎತ್ತರಿಸಿಕೊಳ್ಳಬೇಕೆಂದು ಆಶಿಸಿದವರಿಗೆ ಮಾತ್ರ ಇದು ಹಿತ ತರುವುದು. ಯಾವನ ಶಿಕ್ಷಣ, ಚಟ, ಹವ್ಯಾಸಗಳು ಅವನನ್ನು ಇದ್ದ ಸ್ಥಿತಿಯಲ್ಲಿಯೇ ಸುಖಿಯಾಗಿಟ್ಟಿರುವುವೋ ಅಂತಹನ ಬೇಡಿಕೆ ಹೆಚ್ಚಿಸುವುದು ಅವನನ್ನು ಅಸುಖಕ್ಕೆ ಬಲಿ ಕೊಟ್ಟಂತೆಯೆ ಆಗುವುದು. ಸುಖವು ಒಂದು ತಾತ್ವಿಕ ಹಿನ್ನೆಲೆಯಿಂದ ಉಂಟಾಗುವ ಮನಸ್ಥಿತಿ. ಬೇಡಿಕೆ ಪೂರೈಕೆಗಳ ಹೊಂದಿಕೆಯೆ ಸುಖಸಮಾಧಾನದ ಗುರುತು. ಬೇಡಿಕೆಗಳ ಪೂರೈಕೆಯಾಗದೆ ಅತೃಪ್ತಿ ಉಂಟಾದಾಗ ಅಸುಖವಾಗುವುದು. ಆಗ ಪೂರೈಕೆಯು ಸಲುವಾಗಿ ಹೆಚ್ಚಿದ ಜೀವನಮಟ್ಟವಿದ್ದರೆ ಒಳ್ಳೆಯದಾಗುತ್ತಿತ್ತು ಎಂಬ ಭಾವ ಬರುವುದು. ಅಂತಹ ಜೀವಿಗಳಿಗೆ ಹೆಚ್ಚಿದ ಜೀವನಮಟ್ಟದಿಂದ ಹೆಚ್ಚಿನ ಸುಖವೇ ಆಗುವುದು. ಆದರೆ ಯಾರು ಸಾಂಪ್ರದಾಯಿಕವಾಗಿ ಭಾವಿಕತನದಿಂದ ಬೆಳೆದು ಕರ್ಮದ ಅನಿವಾರ್ಯತೆಯ ದೃಢ ನಂಬಿಕೆಯಲ್ಲಿ ಬೆಳೆದಿರುವರೋ— ಭಾರತದಲ್ಲಿ ಇಂತಹರೇ ಬಹುಸಂಖ್ಯಾಕರು— ಅಂತಹರಿಗೆ ಹೆಚ್ಚಿದ ಜೀವನಮಟ್ಟದಿಂದ ಬೇಡಿಕೆಗಳು ಹೆಚ್ಚಾಗುವುವು. ಆದರೆ ಮೂಲಸ್ಥಿತಿಯಲ್ಲಿಯ 'ಪಾಲಿಗೆ ಬಂದದ್ದು ಪಂಚಾಮೃತ' ವೆಂದಾಗಿರುವ ನೆಮ್ಮದಿಯು ಕಡಿಮೆಯಾಗುವುದು. ಇಂತಹರಿಗೆ ಸಾಂಸ್ಕೃತಿಕ ತಾತ್ವಿಕ ಶಿಕ್ಷಣದ ಅಗತ್ಯವು ಉಂಟಾಗುವುದು. ಅವು ಒಂದನ್ನೊಂದು ಹೊಂದಿಕೊಂಡೇ ಬೆಳೆಯಬೇಕು.

ಇದಕ್ಕಾಗಿ ಶಿಕ್ಷಣ ಪ್ರಸಾರವಾಗಬೇಕು. ಶಿಕ್ಷಣವೆಂದರೆ ಕೇವಲ ಶಾಲೆ ಕಾಲೇಜುಗಳಲ್ಲಿಯ ಶಿಕ್ಷಣವಲ್ಲ. ನಾಗರಿಕ ಜೀವನದ ಬಗ್ಗೆ, ನೆಮ್ಮದಿ ಜೀವನದ ಬಗ್ಗೆ, ಸುಖಜೀವನದ ಬಗ್ಗೆ, ಸಮಾಧಾನದ ಜೀವನದ ಬಗ್ಗೆ ವಿವಿಧ ರೀತಿಯ, ವಿವಿಧ ಮಾರ್ಗದ, ವಿವಿಧ ಹಂತದ, ವಿವಿಧ ವರ್ಗದ ಶಿಕ್ಷಣ ದೊರೆಯಬೇಕು. ಹಿಂದಿನ ಕಾಲದಲ್ಲಿಯ ಸಾಮಾಜಿಕ ಜೀವನವು ಒಂದು ವಿಶಿಷ್ಟಕ್ರಮದಂತೆ, ಜಾತಿಪದ್ಧತಿಯ ಪ್ರಕಾರ, ಆಶ್ರಮಪದ್ಧತಿಯ ಪ್ರಕಾರ, ಪುರುಷಾರ್ಥ ಪದ್ಧತಿಯ ಪ್ರಕಾರ ಸಾಗುತ್ತಿದ್ದಿತು. ಅವು ಧ್ಯೇಯ ದಾರಿ

ಗಳನ್ನು ಒದಗಿಸುತ್ತಿದ್ದುವು; ಪಾಠ–ಪ್ರಕಾರಗಳನ್ನು ಒದಗಿಸುತ್ತಿದ್ದುವು ಆದರೆ ಇಂದಿನ ಜೀವನದಲ್ಲಿ ಹಾಗೆ ಕಟ್ಟುನಿಟ್ಟುಗಳನ್ನು ಇಟ್ಟುಕೊಳ್ಳಲು ಅನುಕೂಲತೆಯಿಲ್ಲ. ದೇಶೀಯವಾಗಿ ಬೆಳೆದುಬಂದ ರಾಜಕೀಯ, ಸಾಂಸ್ಕೃತಿಕ ಜೀವನ ಇಂದಿನ ಗುರಿಯಾಗಿರದೆ ಪರದೇಶೀಯವಾದ, ಪರ ಸಂಸ್ಕೃತಿಯ ವಿಕಾಸದ ಮೂಲಿಕವಾದ ಆಘಾತದ ಪರಿಣಾಮವಾಗಿ, ಪ್ರಜಾ ಪ್ರಭುತ್ವ, ಸಮಾಜವಾದ, ಸಂಘವಾದಗಳ ವಿಚಾರಸರಣಿ ಪ್ರಣಾಲಿಗಳು ಬಂದು ವ್ಯೈಸ್ಸೇರಿಕೊಂಡಿವೆಯೇ ಹೊರತು ರಕ್ತಗತವಾಗಿಲ್ಲ. ನಮ್ಮದರ ನೆಲ ಗಟ್ಟು ಸಡಿಲಿದೆ; ಹೆರವರದು ನಮ್ಮದಾಗಿಲ್ಲ. ಹೀಗೆ ಮಧ್ಯಂತರ ಸ್ಥಿತಿ ಯಲ್ಲಿದ್ದಾಗ, ನಮ್ಮದನ್ನು ಬಿಡೆವು, ಹೊಸದನ್ನು ಬಿಡೆವು ಎಂಬ ಪ್ರಸಂಗಕ್ಕೆ ಬಂದು ಮುಟ್ಟಿದ್ದೇವೆ. ಈ ಅನವಸ್ಥೆಯು ತಾತ್ವಿಕ ಸ್ಥಿತಿಯಲ್ಲಿ ಹೆಚ್ಚಿದ ಜೀವನಮಟ್ಟದಿಂದ ಹೆಚ್ಚಿನ ಸುಖಸಮಾಧಾನಗಳು ತಲೆದೋರಿಯಾವು ಎಂದೆನ್ನಿಸದೆ, ಹೆಚ್ಚಿನ ಅತೃಪ್ತಿ, ತನ್ಮೂಲಕ ಹೆಚ್ಚಿನ ತುರುಸು, ಹೆಚ್ಚಿನ ಬೇಡಿಕೆ ಇವೆ ಕಂಡುಕೊಂಡಾವು ಎಂದೆನ್ನಿಸುತ್ತದೆ. ಅದಕ್ಕೆ ಇದನ್ನು ತಪ್ಪಿಸಬೇಕಾಗಿ- ದ್ದರೆ, ರಕ್ತಗತವಾಗಿ ಬಂದ ವಿಚಾರ ಪ್ರಣಾಲಿಗಳನ್ನು ಲಕ್ಷ್ಯವಾಗಿಟ್ಟು ಅವು ಗಳಿಗೆ ಹೊಸಜೀವನದ ನೀರೆರೆದು ಹೊಸದೃಷ್ಟಿಯುಂಟಾಗುವಂತೆ ಮಾಡಬೇಕು ಎಂದೆನ್ನಿಸುವುದು. ಇದು ಸಮಾಜ ಶಿಕ್ಷಣದಿಂದಲೇ ಸಾಧ್ಯ.

ಇಂತಹ ಸಮಾಜ ಶಿಕ್ಷಣ ಕೊಡಲು ಗಾಂಧೀಜಿ ಅನುಸರಿಸಿದ ರೀತಿ ನೀತಿಗಳು ಉತ್ತಮವಾಗಿದ್ದುವು. ಪ್ರತ್ಯಕ್ಷ ಮಾಡುವ ಕಾರ್ಯವು ಒಂದು ನೋಟ ತೋರಿಸುತ್ತಿತ್ತು. ಪಾರಿಣಾಮಿಕ ಪ್ರತಿಫಲವು ಬೇರೊಂದು ದೃಶ್ಯ ತೋರುತ್ತಿತ್ತು. ಪಾರಿಣಾಮಿಕ ದೃಶ್ಯದ ನೋಟವನ್ನು ಅವರು ಎಂದೂ ಬಹಿರಂಗಪಡಿಸುತ್ತಿದ್ದಿಲ್ಲ. ಆದರೆ ಅದೇ ಅವರ ಕಣ್ಣುಮುಂದೆ ಸದಾ ಇರು ತ್ತಿತ್ತು. ಪ್ರತ್ಯಕ್ಷ ಕೆಲಸದ ಬಗ್ಗೆ ಅವರು ಎಲ್ಲರ ದೃಷ್ಟಿಯನ್ನು ಕೇಂದ್ರೀಕರಿಸು ತ್ತಿದ್ದರು. ಕಾಣುವ ಬೇರಿಗೆ ನೀರೆರೆಸುತ್ತಿದ್ದರೆ ಹೊರತು, ಗಿಡ ಚಿಗಿತು ಹೂ ಬಿಟ್ಟು ಹಣ್ಣು ಕೊಡುವಾಗಿನ ಸ್ಥಿತಿಯ ಬಣ್ಣನೆಮಾಡಿ ಬಾಯಲ್ಲಿ ನೀರೂರಿಸಿ ಸಸಿಯ ಬೆಳಿಗೆಯನ್ನೇ ಮರೆವಂತೆ ಮಾಡುತ್ತಿದ್ದಿಲ್ಲ. ಅದಕ್ಕೆ ಗಾಂಧೀಜಿಯು ದೂರದೃಷ್ಟಿಯ ಮುಂದಾಳುಗಳು ಆಗಿದ್ದರು. ಒಂದು ಚರಕದ ಗಾಲಿಯನ್ನು

ಭಾರತದಲ್ಲಿ ತಿರುವಿ ಮ್ಯಾಂಚೆಸ್ಟರದ ಗಿರಣಿಗಳನ್ನು ಮೂಲೆಗುಂಪಾಗಿಸುವ ಹೊಡೆತ ಅವರದು. ಮ್ಯಾಂಚೆಸ್ಟರದ ಗಿರಣಿಗಳಿಂದಲೇ ನಮ್ಮ ದೇಶದ ಚರಕಗಳು ತಿರುಗುವುದನ್ನು ನಿಲ್ಲಿಸಿದ್ದವೆಂದು ಕಂಡುಕೊಳ್ಳುವ ದಾರ್ಶನಿಕ ದೃಷ್ಟಿ ಅವರದು. ಈ ಬಗೆಯಾದ ಕಾರ್ಯ ಇಂದು ಸಮಾಜ ಶಿಕ್ಷಣ ಕ್ಷೇತ್ರದಲ್ಲಿ ನಡೆಯಬೇಕಾಗಿದೆ. ಭಾರತೀಯ ಸಂಸ್ಕೃತಿಯು ಪುನರುತ್ಥಾನವಾಗುವಂತೆ, ಭಾರತದ ಜೀವನವು ಭಾರತದ ನೆಲದಿಂದಲೇ ಉಸಿರು ಪಡೆಯುವಂತೆಯಾಗಬೇಕಾಗಿದೆ. ಕಾಲು ಭಾರತದಲ್ಲಿಟ್ಟು ತಲೆಯನ್ನು ಇಂಗ್ಲಂಡದಲ್ಲಿಯೊ ಅಮೇರಿಕೆಯಲ್ಲಿಯೊ ಇಟ್ಟರೆ, ಇಲ್ಲನೆ ಕೊಟ್ಟರೆ, ನಡುವಿನ ಹೊಟ್ಟೆ ಬೆನ್ನಿಗೇ ಹತ್ತುವುದು, ಎಂಬುದನ್ನು ಮರೆಯಲಾಗದು. ಹೊಟ್ಟೆಗಾಗಿ ಮೈಮನ ಮಾರಿಕೊಳ್ಳುವಂತಾಗಬಾರದು.

ಇಂದು ನಾವು ಎಂದಿಲ್ಲದಂತಹ ಭಾರತೀಯರಾಗಬೇಕಾಗಿದೆ. ಅದಕ್ಕಾಗಿ ಭಾರತದ ಎಲ್ಲವೂ ನಮಗೆ ಪೂಜ್ಯವಾಗಬೇಕು. ಅದಕ್ಕೆ ಪ್ರಥಮ ಸ್ಥಾನ ಸಲ್ಲಬೇಕು. ಹಳೆಯ ವಿಚಾರವೆಂದಾದರೂ ಅಡ್ಡಿಯಿಲ್ಲ, ಅದು ಭಾರತದ್ದು ಆಗಿದ್ದರೆ, ಅದು ಬೇಕು. ಅದಕ್ಕೆ ಅಗ್ರಸ್ಥಾನ; ಮುಂದೆ ಇನ್ನಿತರ ವಿಚಾರ, ವ್ಯವಹಾರ. ಈ ಕ್ರಮವಂತೆ ನಮ್ಮ ಎಲ್ಲ ಚಟುವಟಿಕೆಗಳು ನಡೆದರೆ, ರಾಷ್ಟ್ರಭಾವನೆಯು ಪ್ರಜ್ವಲಿತವಾಗಲು ಬೇರೊಂದು ಸಾಧನ ಕಾರಣವಿಲ್ಲ. ರಾಷ್ಟ್ರಭಾವನೆಯು ಮನಸ್ಸಿನ ವಿಷಯ. ಕಣ್ಣಿಗೆ ಕಾಣುವಂತಹದಲ್ಲ. ವಿಶಾಲವಾದ ದೇಶವೆಂದು ಹೇಳಿದರೂ, ನಕಾಶದಲ್ಲಿ ಹಲವಾರು ರಾಜ್ಯಗಳು ಕಂಡರೂ, ಬಂಗಾಲಿಯೂ ಭಾರತೀಯನೇ, ಮದ್ರಾಸಿಯೂ ಭಾರತೀಯನೇ, ಕರ್ನಾಟಕದವನೂ ಭಾರತೀಯನೇ, ಗುರ್ಜರನೂ ಭಾರತೀಯನೇ— ನಾವೆಲ್ಲರೂ ಒಂದೇ ಎಂಬ ಭಾವನೆಯು ಜಾಗ್ರತವಾಗಿ ಉಳಿದು ಬೆಳೆಯಬೆಕಾದರೆ, ನಮ್ಮ ಎಲ್ಲ ಚಟುವಟಿಕೆಗಳಿಗೆ ಭಾರತೀಯಮುದ್ರೆ ಬೀಳಬೇಕು. ಒಂದೇ ವೇಷಭೂಷಣ ಇರಲಿ, ಉಡಿಗೆ ತೊಡಿಗೆ ಒಂದೇ ಆಗಲಿ. ಇದರಿಂದ ಐತಿಹಾಸಿಕವಾಗಿ ನಾವು ಹಿಂದೆ ಹೋಗುವ ಹವಣಿಕೆ ಹಾಕಿದಂತಾಗುವುದೆಂದು ಯಾರಾದರೂ ಅನ್ನಬಹುದು. ಆದರೆ ಮುಂದೆ ಜಿಗಿಯಬೇಕಾದರೆ ಒಂದು ಕಾಲು ಹಿಂದೆ ಇಡಲೇಬೇಕಾಗುವುದು. ಹಿಂದೆ ಕಾಲಿಟ್ಟುದು

ಹಿಂದೆ ಉಳಿಯಲಿಕ್ಕಿಲ್ಲ. ಮುಂದೆ ಬರಬೇಕೆಂಬುದಕ್ಕಾಗಿ; ಭಾರತೀಯರಾಗಿ ಮುಂದೆ ಬರಬೇಕೆಂಬುದಕ್ಕಾಗಿ.

ರಾಷ್ಟ್ರಭಾವನೆಯು ಬೆಳೆದುಬರುವಂತಾದಾಗ, ಯಾವ ರಾಷ್ಟ್ರೀಯ ಯೋಜನೆಯೂ ಅಯಶಸ್ವಿಯಾಗಲಾರದು. ಸರಕಾರವು ಸಾರ್ವಜನಿಕರ ಸಹಕಾರ ಬೇಡುವ ಸ್ಥಿತಿಯೂ ಬರಲಾರದು. ಸಾರ್ವಜನಿಕರು ಸ್ವಯಂಸ್ಫೂರ್ತಿಯಿಂದ ಸಹಕಾರ ಕೊಟ್ಟು, ನಮ್ಮದೆ ಇದು ಸರಕಾರ, ಅದರ ಕಾರ್ಯ ನಮ್ಮದು, ನಮ್ಮ ಕಾರ್ಯ ಸರಕಾರದ್ದು ಎಂಬ ಸಾಮರಸ್ಯ ಉಂಟಾಗುವುದು. ಅದು ಮೂಡಿಬರಬೇಕು, ಈ ಪಂಚವಾರ್ಷಿಕ ಯೋಜನೆ ಮುಗಿವಷ್ಟರಲ್ಲಿ, ಮುಂದಿನ ಯೋಜನೆಗಳು ರಚಿತವಾಗುವಷ್ಟರಲ್ಲಿ. ಅದು ಮೂಡಿ ಮೇಲೇರಿ ಬರಲಿ; ಭಾರತವು ಸುಖ, ಸಮೃದ್ಧಿ, ಶಾಂತಿ, ಸಮಾಧಾನಗಳ ನೆಲೆವೀಡಾದ ಸ್ವತಂತ್ರ ಗಣರಾಜ್ಯವಾಗಿ ಸಂತತವೂ ಬೆಳಗುವಂತೆ ಸಕಲರೂ ಪ್ರಯತ್ನಿಸಲಿ ಎಂದು ಹಾರೈಸುತ್ತೇವೆ.



ಟೀಪು:—ಇದರಲ್ಲಿ ಉಪಯೋಗಿಸಿದ ನಕ್ಷೆಗಳೆಲ್ಲ ಕೇಂದ್ರ ಸರಕಾರದ ಅಪ್ಪಣೆಯ ಮೇರೆಗೆ ಪಡೆಯಲಾಗಿದೆ.

# ಮಿಂಚಿನಬಳ್ಳಿಯ ಕೆಲ ಪ್ರಕಟನೆಗಳು :

## ಗೀತಾಂಜಲಿ

ಅನುವಾದಕರು :— ಶ್ರೀ ನರೇಗಲ್ ಪ್ರಹ್ಲಾದರಾಯರು

ಬೆಲೆ : ಎರಡು ರೂಪಾಯಿ

"ಭಾಷಾಂತರವೇ ಆಗಲಿ, ಅನುವಾದವೇ ಆಗಲಿ, ಕಠಿಣ ಕಾರ್ಯ. ಕವಿಯ ಕಾವ್ಯದ ಅನುವಾದ ಇನ್ನಿಷ್ಟು ಬಿಗಿಯಾದ ಕೆಲಸ ಅನುಭಾವದ ಕೃತಿಯಾದರಂತೂ ಮತ್ತಿಷ್ಟು ಬಿಗಿ. ಅದನ್ನು ಕವಿಯ ವಾಣಿಯಲ್ಲಿ ಪವಣಿಸುವದು ಇನ್ನೂ ಗುರುತರದ ಕಾರ್ಯ. ಈ ಗುರುತರದ ಕಾರ್ಯದಲ್ಲಿ ಪ್ರಹ್ಲಾದರಾಯರು ಯಶಸ್ವಿಗಳಾಗಿದ್ದಾರೆ.

'ಕರ್ನಾಟಕ ವೈಭವ' ವಿಜಾಪೂರ

## ದೇವತಾತ್ಮಾ

ಬರೆದವರು : - ಶ್ರೀ. ದೊಡ್ಮನೆ ಮಹಾದೇವಿಯಮ್ಮ

ಬೆಲೆ: ಒಂದು ರೂಪಾಯಿ

'ದೇವತಾತ್ಮಾ' ಓದಿದಾಗ ಮೊದಲಿನಿಂದ ಕೊನೆಯವರೆಗೂ ಕಂಡುಬರುವದು ಕ್ಷೇತ್ರದ ಸುಂದರ ಚಿತ್ರಗಳಲ್ಲ, ಆದರೆ ಮಹಾದೇವಿಯಮ್ಮನವರ ಸಹೃದಯತೆ. ಮಹಾದೇವಿಯಮ್ಮನವರದು ಅತ್ಯಂತ ಸುಸಂಸ್ಕೃತ ಆತ್ಮ.

ಧಾರವಾಡ ಬಾನುಲಿ ವಿಮರ್ಶೆ

## ಸತ್ಯಾರ್ಥಿ

ಲೇಖಕರು :— ಗೌರೀಶ ಕಾಯ್ಕಿಣಿ, ಗೋಕರ್ಣ

ಬೆಲೆ : ಎರಡು ರೂಪಾಯಿ

'ಸತ್ಯಾರ್ಥಿಯಂಥಾ ಸರ್ವರುದಯ — ಉಪಕಾರಕರವಾದ ಮಹಾತ್ಮರ ಜೀವನ ಚರಿತೆಯನ್ನು ಓದಿ ಅರಗಿಸಿಕೊಂಡಲ್ಲಿ ಗಮ್ಯ ಮಾನವ್ಯ ಚೈತನ್ಯದ ಅರಿವಾಗುವದು ಖಂಡಿತ.

'ಸಂಗಾತಿ', ಮಂಗಳೂರ